

# ಹೊಸತು

ನೆಮ್ಮದಿಯ ನಾಳೆ ನಮ್ಮದು




ಸೆಪ್ಟೆಂಬರ್ ೨೦೦೩
ಬೆಲೆ : ರೂ. ೧೦



'ಜೋಗಿ ಹಾಡುವವ'



## ಪ್ರತಿಭಾವಂತ ಯುವ ಕಲಾವಿದ

# ದಯಾನಂದ ಕಾಮಕರ

ನಿತ್ಯದ ಸಾಮಾಜಿಕ ಆಚರಣೆ, ಸಂಪ್ರದಾಯ, ವೇಷಭೂಷಣಗಳನ್ನೇ ತಮ್ಮ ಕಲಾಕೃತಿಗಳಿಗೆ ವಸ್ತುವಾಗಿ ಆಯ್ದುಕೊಂಡು ಅವುಗಳಿಗೆ ಕಲಾವಿದನ ಕಲ್ಪನೆಯಲ್ಲಿ ರೇಖೆ, ವರ್ಣ ಅಲಂಕಾರಗಳಿಂದ ಶ್ರೀಮಂತ ಕಲಾಕೃತಿಯಾಗಿಸುವ ಪ್ರತಿಭೆ ದಯಾನಂದ ಕಾಮಕರ ಅವರದು.

ಬೆಳಗಾವಿ ಜಿಲ್ಲೆ ಚಿಕ್ಕೋಡಿಯವರಾದ ೩೪ ವಯಸ್ಸಿನ ದಯಾನಂದ ಕೆ. ಕಾಮಕರ ನಾಡಿನ ಚಿತ್ರಕಲಾ ಕ್ಷೇತ್ರದಲ್ಲಿ ದೃಢವಾದ ಹೆಜ್ಜೆಗುರುತು ಮೂಡಿಸಿರುವ ಚಿಕ್ಕ ವಯಸ್ಸಿನ ದೊಡ್ಡ ಪ್ರತಿಭೆ. ಧಾರವಾಡದ ಸರ್ಕಾರಿ ಚಿತ್ರಕಲಾ ಮಹಾವಿದ್ಯಾಲಯದಲ್ಲಿ ಎ.ಎಂ, ಜಿ.ಡಿ. ಆರ್ಟ್ ಕಲಾಶಿಕ್ಷಣ ಪೂರೈಸಿ, ಧಾರವಾಡದ ಭಾರತೀಯ ಕಲಾಕೇಂದ್ರದಲ್ಲಿಯೇ ಪ್ರಸ್ತುತ ಕಲಾ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ರಾಜ್ಯದ ಬಹುತೇಕ ಮುಖ್ಯ ಸ್ಥಳಗಳಲ್ಲಿ ಮಾತ್ರವಲ್ಲದೆ ಹೊರ ರಾಜ್ಯಗಳಲ್ಲಿ ಹಾಗೂ ದೆಹಲಿಯಲ್ಲೂ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿದ ಕಲಾವಿದ ಇವರು.

೨೦೦೦ದಲ್ಲಿ ಜಾನಪದ ಪ್ರಶಸ್ತಿ, ಹಂಪಿ ವಿಶ್ವವಿದ್ಯಾಲಯದ ಪುರಸ್ಕಾರ, ೧೯೯೩ರಲ್ಲಿ ಮೈಸೂರು ದಸರಾ ಪ್ರಶಸ್ತಿ ಹಾಗೂ ಗದಗದಲ್ಲಿ ಅಖಿಲ ಭಾರತ ಕಲಾ ಪ್ರದರ್ಶನದಲ್ಲಿ ಪ್ರತಿಭಾ ಪುರಸ್ಕಾರಕ್ಕೆ ಆಯ್ಕೆಯಾಗಿದ್ದಾರೆ. ಜೋಗಿ ಹಾಡುವವರನ್ನು, ಜಂಗಮರನ್ನು, ದುರ್ಗಾ-ಮುರ್ಗಿಯರನ್ನು ಸಾಂಪ್ರದಾಯಿಕ ಹಾಗೂ ನವೀನ ಶೈಲಿಗಳಲ್ಲಿ ಸಂಯೋಜಿಸಿ ವಿಶೇಷವಾಗಿ ತಮ್ಮ ಕಲಾಕೃತಿಗಳನ್ನು ಶ್ರೀಮಂತಗೊಳಿಸುವ ದಯಾನಂದ ಕಾಮಕರ ಚಿತ್ರಕಲಾ ಕ್ಷೇತ್ರದಲ್ಲಿ ಸ್ವಂತಿಕೆಯಿಂದ ಗುರುತಿಸಿಕೊಂಡಿದ್ದಾರೆ.

ಜಿ. ಎಂ. ಹೆಗಡೆ ಬೊಮ್ನಳ್ಳಿ
ಅಂಚೆ - ಬೊಮ್ನಳ್ಳಿ - ೫೮೧ ೪೦೨, ಶಿರಸಿ ತಾಲೂಕು, ಉತ್ತರ ಕನ್ನಡ ಜಿಲ್ಲೆ

ಕಲಾವಿದರ ವಿಳಾಸ: ದಯಾನಂದ ಕೆ. ಕಾಮಕರ, ''ಕಲಾತರಂಗ'', ೧ನೇ ಕ್ರಾಸ್, ಕೋಟೆ, ಧಾರವಾಡ



'ಹಳ್ಳಿ ಜೋಗಿ ಜಂಗಮರು'



'ಜೋಗಿ ಜಂಗಮರು'



'ದುರ್ಗಾ-ಮುರ್ಗಿ' ದೇವಿಯ ಆರಾಧನೆ

# ಹೊಸತು



## ಒಳಗೇನಿದೆ.....




ಚಿತ್ರಗಳು : ಶ್ರೀಹರಿ, ಸತೀಶ್‌ಕುಮಾರ್, ಸ್ಯಾಮ್, ಜಿ. ಎಂ. ಬೊಮ್ನಳ್ಳಿ
ರಾಂಚಂದ್ರ, ಎನ್. ಆರ್. ಬೊಮ್ನಳ್ಳಿ, ಎಸ್. ಶಶಿಕಾಂತ್ ಯಡಹಳ್ಳಿ

ಮುಖಚಿತ್ರ : ಡಾ|| ಸಿ. ಆರ್. ಚಂದ್ರಶೇಖರ್
(ಮಹಾಯಾನ ಬುದ್ಧಮಂದಿರ. ಇಟಾನಗರ)

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ನಮ್ಮ ಪತ್ರಿಕೆಯ ಸಮಾಲೋಚಕ ಮಂಡಲಿಯ ಸದಸ್ಯರಲ್ಲೊಬ್ಬರಾದ ಶ್ರೀ ಯು. ಎಸ್. ಶ್ರೀನಿವಾಸನ್ (ಪುವ್ಯಾಶ್ರೀ) ಹಲವು ವರ್ಷಗಳಿಂದ ತಮ್ಮೆಲ್ಲ ಪತ್ರಗಳಲ್ಲೂ 'ಪೆಪ್ಸಿ ಒಂದು ವಿಷ' ಎಂಬ ತಲೆಬರಹ ಬರೆಯುತ್ತಾ ಬಂದಿದ್ದಾರೆ. ಸಂಶೋಧನೆ ಮಾಡಿ ಅದರಲ್ಲಿ ಇಂತಹ ವಿಷ ಇಷ್ಟು ಶೇಕಡ ಇದೆ ಎಂಬುದನ್ನವರು ಹೇಳಲಿಲ್ಲ; ಆದರೆ ದೇಶದ ಹಾಗೂ ದೇಹದ ಆರೋಗ್ಯಕ್ಕೆ ಅದು ಹಾನಿಕರವೆಂಬುದನ್ನು ಸದಾ ಗುರುತಿಸಿದ್ದಾರೆ. ಒಂದು ಸರ್ಕಾರೇತರ ಸಂಸ್ಥೆ ಮಾಡುವುದಕ್ಕೂ ಮುಂಚೆ ನಮ್ಮ ಸರ್ಕಾರಿ ಸಂಶೋಧಕರು ಅದನ್ನು ಮಾಡಿ ಕೋಲಾ-ಪೆಪ್ಸಿಗಳನ್ನು ಚರಂಡಿ ನೀರೆಂದು ಸಾರಬೇಕಾಗಿತ್ತು. ಮುರಳಿ ಮನೋಹರ ಜೋಶಿಯವರಿಗೆ ಪ್ರಿಯವಾದ ಪಿಂಡಪ್ರದಾನ ಸಂಶೋಧನೆಯ ಗುಂಗಿನಲ್ಲಿ ಅವರು ಈ ಕೆಲಸ ಮಾಡಲಿಲ್ಲ. ಈಗಲೂ ನ್ಯಾಯಾಲಯಗಳ ಸರ್ವಜ್ಞ ಮೂರ್ತಿಗಳು ವಿಷಪಾನೀಯಗಳಿಗೆ ಜೀವದಾನ ಮಾಡಿದರೆ ಆಶ್ಚರ್ಯವಿಲ್ಲ. ಅಮೆರಿಕಾದ ರಾಯಭಾರಿಗೆ ತಲೆಬಾಗಿ ಕೇಂದ್ರದ ಅರ್ಥಮಂತ್ರಿಯೂ ತಮ್ಮ ಕೋಲಾ-ಪೆಪ್ಸಿ ಪ್ರೀತಿಯನ್ನು ಮೆರೆಯಬಹುದು. ಆದರೆ ದೇಶದ ಹಾಗೂ ದೇಹದ ಬಗ್ಗೆ ಗೌರವ ಇರುವವರು ಪುರಂದರದಾಸರ ವಚನವನ್ನು ಅನುಕರಿಸಿ 'ಚರಂಡಿಯ ನೀರನು ಚರಂಡಿಗೆ ಚೆಲ್ಲಿ' ವರವ ಪಡೆದವರಂತೆ ಕಾಣಬೇಕು. ಈ ಮಧ್ಯೆ ನಮ್ಮ ದೇಶದಲ್ಲಿ ಕುಡಿಯುವ ನೀರು ಎಷ್ಟು ಕಲುಷಿತಗೊಂಡಿದೆ ಎಂಬುದರ ಬಗ್ಗೆ ಸ್ವಲ್ಪ ಕಾಳಜಿ ವಹಿಸಬೇಕು. ನದಿಗಳ ಜೋಡಣೆ ಆದಮೇಲೆ ಎಲ್ಲರಿಗೂ ಗಂಗಾತೀರ್ಥ ಸಿಗುತ್ತದೆಂಬ ವಾಜಪೇಯಿ ಮಾತನ್ನು ನಂಬಿ ಕೈಕಟ್ಟಿ ಕೂಡುವಂತಿಲ್ಲ. ರಾಸಾಯನಿಕಗಳಿಂದ ಕ್ರಿಮಿಗಳನ್ನು ಕೊಲ್ಲುವ ಬದಲು ನಮ್ಮನ್ನೇ ಕೊಂದುಕೊಳ್ಳುವ ಅಪಾಯದ ಬಗ್ಗೆ ಔದಾಸೀನ್ಯ ಸರ್ವಥಾ ಸಲ್ಲದು.

ಒಂದು ಕಡೆ ಜೀವವನ್ನು ಕೊಲ್ಲುವ ವಿದೇಶಿ ಬಹುರಾಷ್ಟ್ರೀಯ ಕಂಪೆನಿಗಳಾದರೆ ಇನ್ನೊಂದು ಕಡೆ ಪ್ರಜಾಪ್ರಭುತ್ವವನ್ನು ಹೂತುಹಾಕುವ ಹುನ್ನಾರಗಳು ಹೆಚ್ಚುತ್ತಿವೆ. ಜಯಲಲಿತಾಳ ಸೊಕ್ಕಿಗೆ ಕೋಡು ಕೂಡಿಸುವ ಕೆಲಸ ನ್ಯಾಯಾಲಯದಿಂದ ನಡೆದೀತೆಂಬ ನಿರೀಕ್ಷೆ ಇರಲಿಲ್ಲ. ಸಂವಿಧಾನದ ಅರ್ಥ ಹೇಳುವುದಷ್ಟನ್ನು ಮಾಡಬೇಕಾದ ನ್ಯಾಯಾಲಯ ಹೊಸ ಸಂವಿಧಾನವನ್ನು ಬರೆಯ ಹೊರಟರೆ ನಮ್ಮ ಪ್ರಜಾಪ್ರಭುತ್ವದ ಸಂರಚನೆಗಳು ಅಲುಗಾಡಲಾರಂಭಿಸುತ್ತವೆ. ಸರ್ಕಾರಿ ನೌಕರರಿಗೆ ಮುಷ್ಕರದ ಹಕ್ಕಿಲ್ಲವೆಂಬ ತೀರ್ಪಿನ ಆಯಾಮ ಇದನ್ನೆಲ್ಲಾ ಒಳಗೊಳ್ಳುವಷ್ಟು ವಿಸ್ತಾರವಾಗಿದೆ. ನೂರು ಕೋಟಿ ಜನರ ಆಕಾಂಕ್ಷೆಗಳನ್ನು ಯಾವುದೇ ಮೂರು, ಐದು ಅಥವಾ ಹನ್ನೊಂದು ಮಂದಿಯ ಮಿದುಳುಗಳು ನಿಯಂತ್ರಿಸುವಂತಿರುವುದು ಪ್ರಜಾಪ್ರಭುತ್ವವೆನಿಸಿಕೊಳ್ಳುವುದಿಲ್ಲ. ಜಪಾನಿನಲ್ಲಿ ಮುಷ್ಕರ ಮಾಡುವ ಬದಲು ಕರಿಪಟ್ಟಿ ತೊಟ್ಟು ಅಧಿಕ ಉತ್ಪಾದನೆ ಮಾಡಿ ಸರ್ಕಾರಕ್ಕೆ ಬುದ್ಧಿ ಕಲಿಸುತ್ತಾರೆಂಬ ಐತಿಹ್ಯವನ್ನು ಪ್ರಚಾರ ಮಾಡುವುದು ನಮ್ಮ ಕೆಲವು ಪೆದ್ದಂಭಟ್ಟರುಗಳ ಹವ್ಯಾಸ. ಅಲ್ಲಿದ್ದ ಹಾಗೆ ಇಲ್ಲಿಯೂ ಇರಬೇಕೆಂಬುದರ ಬದಲು ಜಪಾನಿಗಳೂ ನಮ್ಮನ್ನೇ ಅನುಕರಿಸಲಿ ಎಂದು ಹೇಳಿದರೆ ಆಗ ವಾದ ಎತ್ತ ಸಾಗುತ್ತದೆ ? ಆದ್ದರಿಂದ ಇನ್ನಾದರೂ ಆ ಪೆದ್ದು ಮಾತುಗಳನ್ನು ನಿಲ್ಲಿಸೋಣ ಮತ್ತು ಪ್ರಜಾಪ್ರಭುತ್ವದ ಕುಸಿಯುತ್ತಿರುವ ಗೋಡೆಗಳತ್ತ ಗಮನ ಹರಿಸೋಣ. ದುಡಿಯುವ ಜನರ ನೈತಿಕ ಜವಾಬ್ದಾರಿಗಳ ಬಗ್ಗೆ ಶುಷ್ಕ ಉಪನ್ಯಾಸಗಳನ್ನು ನಿಲ್ಲಿಸಿ ಜಯಲಲಿತಾ ಮುಂತಾದ ಪ್ರಮುಖರ ಅನೈತಿಕತೆಯನ್ನು ತಡೆಗಟ್ಟುವುದು ಹೇಗೆ ಎಂಬುದರ ಬಗ್ಗೆ ಗಂಭೀರವಾದ ಚಿಂತನೆ ಇಂದು ನಮ್ಮ ಅಗತ್ಯವಾಗಿದೆ. ಸಾಮೂಹಿಕ ಕಾರ್ಯಾಚರಣೆಯು ಪ್ರಜಾಪ್ರಭುತ್ವದ ಅಡಿಗಲ್ಲು; ಅದನ್ನೇ ಮೂಲತಃ ತುಚ್ಛೀಕರಿಸುವುದು ನೈತಿಕತೆಯ ಅಧಃಪತನವೆಂದೇ ಪರಿಗಣಿಸಬೇಕು. ಮುಷ್ಕರ ಎಂಬುದೂ ಒಂದು ಸಾಮೂಹಿಕ ಕಾರ್ಯಾಚರಣೆಯ ಮಾದರಿ; ಅಂತೆಯೇ ಸಾಮೂಹಿಕ ಮಾತುಕತೆಗಳೂ ಕೂಡ. ಅದನ್ನು ಬಿಟ್ಟು ಒಬ್ಬೊಬ್ಬನೂ ಭಿಕ್ಷಾಪತ್ರೆಯನ್ನು ಹಿಡಿದು ಜಯಲಲಿತಾ, ಅರುಣ್ ಶೌರಿ, ಮುಂತಾದ ಖಳನಾಯಕರ ಮುಂದೆ ನಿಂತು ತಮ್ಮ ಹಕ್ಕುಗಳನ್ನು ಪ್ರತಿಪಾದಿಸಬೇಕೆಂದು ಅಪೇಕ್ಷಿಸುವುದು ನಮ್ಮ ಇಡೀ ಹೋರಾಟದ ಪರಂಪರೆಗೆ ಮಸಿ ಬಳಿಯುವ ಕ್ರಮವಾಗಿದೆ. ಮುಷ್ಕರದ ಹಕ್ಕನ್ನು ದುಡಿಯುವ ಜನರಿಗೆ ಯಾವ ದೊಣೆನಾಯಕನೂ ದಯಪಾಲಿಸುವ ಪ್ರಸಂಗವಿಲ್ಲ. ಅದನ್ನು ಹೋರಾಟಗಳಿಂದ ಅವರು ಪಡೆದಿದ್ದಾರೆ ಮತ್ತು ಮುಂದೆಯೂ ಅದನ್ನು ಚಲಾಯಿಸುತ್ತಾರೆ. ಎಂಭತ್ತು ಸಾವಿರ ಕೋಟಿ ರೂಪಾಯಿಗಳನ್ನು ಬ್ಯಾಂಕುಗಳಿಂದ ಪಡೆದು ನುಂಗಿಹಾಕಿರುವ ಬಂಡವಳಿಗ ತಿಮಿಂಗಲಗಳಿಗೆ ನೈತಿಕತೆಯ ಉಪದೇಶವಿಲ್ಲ; ಸಾರ್ವಜನಿಕ ಸ್ವತ್ತನ್ನು ಖಾಸಗಿಯವರಿಗೆ ದಾನ ಮಾಡುತ್ತಿರುವ ವಾಜಪೇಯಿ ಸರ್ಕಾರಕ್ಕೆ ನೈತಿಕತೆಯ ಉಪದೇಶವಿಲ್ಲ. ಬದಲಾಗಿ, ಸರ್ಕಾರಿ ನೌಕರರನ್ನು ಜೀತದಾಳುಗಳೆಂದು ಭಾವಿಸಿರುವ ಜಯಲಲಿತಾಗೆ ಪುರಸ್ಕಾರ ! ಇದು ಪ್ರಜಾಪ್ರಭುತ್ವದ ತಿರುಳಲ್ಲ, ಇತಿಹಾಸದ ನಿಷೇಧ.

ಯಾರು ಮುಷ್ಕರ ಹೂಡಿದರೂ ಅವರ ಸಂಬಳ ಎಷ್ಟೆಂದು ಲೆಕ್ಕ ಹೇಳುವ ಸರ್ಕಾರಗಳು ತಮ್ಮ ಬೊಕ್ಕಸಕ್ಕೆ ಬರಬೇಕಾಗಿದ್ದ ಆದಾಯವನ್ನು ಹೇಗೆ ಮತ್ತು ಏಕೆ ತುಂಬಿಕೊಳ್ಳುತ್ತಿಲ್ಲ ಎಂಬುದನ್ನು ತಿಳಿಸಲು ಸಿದ್ಧವಿವೆಯೆ ? ಯಾವ ಪರಿಣತರನ್ನೂ ಕೇಳದೆ ಐನೂರರವತ್ತು ಲಕ್ಷ ಕೋಟಿ ರೂಪಾಯಿಗಳ ನದಿ

೯ನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೫ ಸಂಚಿಕೆ - ೨ ಸೆಪ್ಟೆಂಬರ್ ೨೦೦೩

ಪ್ರಧಾನ ಸಂಪಾದಕ
ಜಿ. ರಾಮಕೃಷ್ಣ

ಸಂಪಾದಕ ಮಂಡಲಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

ವ್ಯವಸ್ಥಾಪಕರು
ಎಸ್. ಸುರೇಂದ್ರ
ಎ. ಆರ್. ಉಡುಪ

ಮುದ್ರಕ-ಪ್ರಕಾಶಕ
ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

ಮುದ್ರಣ
ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

ಹೊಸತು ಕಚೇರಿಯ ವಿಳಾಸ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೭
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com

ಸಂಪಾದಕೀಯ

# ಕ್ಯೂಬಾದ ದಿಟ್ಟ ಹೆಜ್ಜೆಗಳು

೧೯೫೩ರ ಜುಲೈ ೨೬ರಂದು ಫಿಡೆಲ್ ಕ್ಯಾಸ್ಟ್ರೋ ಮತ್ತು ಸಂಗಡಿಗರು ಮೋನ್‌ಕಾಡಾ ಶಸ್ತ್ರಾಗಾರದ ಮೇಲೆ ಆಕ್ರಮಣ ನಡೆಸಿ ಕ್ಯೂಬಾದಲ್ಲಿ ಚರಿತ್ರೆಗೆ ಒಂದು ಮಹತ್ತರ ತಿರುವು ನೀಡಿದರು. ಅಮೆರಿಕಾ ನಿಯಂತ್ರಣದಲ್ಲಿದ್ದ ಬಟಿಸ್ಟಾ ನೇತೃತ್ವದ ಸರ್ಕಾರ ಅದರಿಂದ ತಕ್ಷಣ ಮುರಿದು ಬೀಳಲಿಲ್ಲ. ಅದಕ್ಕೆ ಇನ್ನಾರು ವರ್ಷಗಳು ಬೇಕಾಯಿತು. ಆದರೆ ಪೆಟ್ಟು ಸಾಕಷ್ಟು ಬಲವಾಗಿತ್ತು. ಸ್ಯಾಂಟಿಯಾಗೋದ ಒಂದು ಪುರಸಭಾ ಆಸ್ಪತ್ರೆಯಲ್ಲಿ ಕ್ಯಾಸ್ಟ್ರೋನನ್ನು ವಿಚಾರಣೆಗೆ ಗುರಿಪಡಿಸಲಾಗಿತ್ತು. ಎಲ್ಲಾ ರಹಸ್ಯವಾಗಿರಬೇಕೆಂಬ ಉದ್ದೇಶದಿಂದ ಆತನನ್ನು ನ್ಯಾಯಾಲಯಕ್ಕೆ ಕೊಂಡೊಯ್ಯದೆ ನ್ಯಾಯಾಧೀಶರನ್ನು ಆಸ್ಪತ್ರೆಗೆ ಕರೆತರಲಾಗಿತ್ತು. ಅಕ್ಟೋಬರ್ ೧೬ರಂದು ಫಿಡೆಲ್ ಒಂದು ಅದ್ಭುತವಾದ ಹೇಳಿಕೆಯನ್ನು ನೀಡಿ ನ್ಯಾಯಾಧೀಶರ ಹಾಗೂ ಬಟಿಸ್ಟಾ ಸರ್ಕಾರದ ಮುಖಕ್ಕೆ ಮಂಗಳಾರತಿ ಎತ್ತಿದ. ಭಗತ್ ಸಿಂಗ್ ಬ್ರಿಟಿಷ್ ಸರ್ಕಾರ ನೇಮಿಸಿದ್ದ ನ್ಯಾಯಪಾತಕಿಗಳೆದುರು ಎಷ್ಟು ಪ್ರಖರವಾದ ಹೇಳಿಕೆ ನೀಡಿದ್ದನೋ ಅದಕ್ಕೆ ಸಮವಾದ ಹೇಳಿಕೆ ಕ್ಯಾಸ್ಟ್ರೋ ನೀಡಿದ್ದು. ವಿಶ್ವದ ದಾಖಲೆಗಳಲ್ಲಿ ಇವೆರಡಕ್ಕೂ ಚಾರಿತ್ರಿಕವಾಗಿ ಬಹಳ ಮಹತ್ವದ ಸ್ಥಾನವಿರುತ್ತದೆ. ತನ್ನ ಹೇಳಿಕೆಯಲ್ಲಿ ಪ್ರಾಚೀನ ಭಾರತದ ಒಂದು ಸಂಪ್ರದಾಯವನ್ನು ಉದ್ಧರಿಸುತ್ತಾ ಫಿಡೆಲ್ ಹೀಗೆ ನುಡಿದ : ''ಸ್ವೇಚ್ಛಾಚಾರಿ ಅಧಿಕಾರವನ್ನು ಸಕ್ರಿಯವಾಗಿ ನಿಗ್ರಹಿಸಬೇಕೆಂದು ಪ್ರಾಚೀನ ಭಾರತದ ತತ್ತ್ವಜ್ಞಾನಿಗಳು ಪ್ರತಿಪಾದಿಸಿದ್ದಾರೆ. ಕ್ರಾಂತಿಯನ್ನವರು ಸಮರ್ಥಿಸಿದ್ದರು ಮತ್ತು ಕೆಲವೊಮ್ಮೆ ಆಚರಣೆಗೂ ತಂದಿದ್ದರು. ಅವರ ಪೈಕಿ ಒಬ್ಬರಂತೂ ಬಹುದೂರ ಹೋಗಿ ಒಬ್ಬ ರಾಜನಿಗಿಂತಲೂ ಬಹುಸಂಖ್ಯಾತರು ಮಾನ್ಯಮಾಡುವ ಒಂದು ಅಭಿಪ್ರಾಯವು ಬಲವತ್ತರವಾದುದೆಂದು ಹೇಳಿದ್ದಾರೆ. ಹಲವು ನೂಲುಗಳಿಂದ ಮಾಡಲ್ಪಟ್ಟಿರುವ ಒಂದು ಹಗ್ಗದಿಂದ ಸಿಂಹವನ್ನು ಬೇಕಾದರೂ ಕಟ್ಟಿಹಾಕಬಹುದೆಂಬ ಉಪಮೆಯನ್ನಾತ ನೀಡಿದ್ದಾನೆ.'' ಇದೇ ಸಂದರ್ಭದಲ್ಲಿ ಬ್ರಿಟನ್ನಿನ ತತ್ತ್ವಜ್ಞಾನಿ ಜಾನ್ ಲಾಕ್ ಪ್ರಭುತ್ವದ ಬಗ್ಗೆ ಹೇಳಿರುವ ಮಾತನ್ನೂ ಫಿಡೆಲ್ ಉದ್ಧರಿಸಿದ್ದರು : ''ಮಾನವನ ನೈಸರ್ಗಿಕ ಹಕ್ಕುಗಳನ್ನು ಪ್ರಭುತ್ವವು ನಿರ್ಬಂಧಿಸಿದರೆ ಅಂತಹ ಪ್ರಭುತ್ವವನ್ನು ಬದಲಾಯಿಸಲು ಅಥವಾ ಕಿತ್ತೊಗೆಯಲು ಜನತೆಗೆ ಹಕ್ಕುಂಟು; ಮಾತ್ರವಲ್ಲ, ಅದು ಜನತೆಯ ಕರ್ತವ್ಯವೂ ಹೌದು.''

ಕ್ಯೂಬಾದಲ್ಲಿ ಜನತೆಗೆ ಯಾವ ಹಕ್ಕೂ ಲಭ್ಯವಿರಲಿಲ್ಲ. ಬಟಿಸ್ಟಾ ಸರ್ಕಾರ ಅಮೆರಿಕಾದ ಆಣತಿಯಂತೆ ನಡೆಯುತ್ತಿತ್ತು. ಭೂಮಿ, ಉದ್ಯಮ, ವಸತಿ, ಉದ್ಯೋಗ, ಶಿಕ್ಷಣ ಮತ್ತು ಆರೋಗ್ಯ, ಇವು ಸಾಮಾನ್ಯತಃ ಯಾವುದೇ ದೇಶದ ಜನರ ಅಗತ್ಯಗಳಲ್ಲಿ ಆದ್ಯತೆ ಪಡೆಯಬೇಕು. ಇವುಗಳೊಟ್ಟಿಗೆ ನಾಗರಿಕ ಸ್ವಾತಂತ್ರ್ಯ ಮತ್ತು ರಾಜಕೀಯ ಪ್ರಜಾಪ್ರಭುತ್ವಗಳನ್ನು ಗಣನೆಗೆ ತೆಗೆದುಕೊಂಡರೆ ಸುಖೀರಾಜ್ಯದ ಕಲ್ಪನೆ ಬರುತ್ತದೆ. ಇದಾವುದನ್ನೂ ಎಳ್ಳಷ್ಟು ಕೂಡ ಭೋಗಿಸಲು ಕ್ಯೂಬಾದ ಜನತೆಗೆ ಸಾಧ್ಯವಿಲ್ಲದಿದ್ದಾಗ ಫಿಡೆಲ್ ಮತ್ತು ಆತನ ಸಂಗಡಿಗರು ಪಣತೊಟ್ಟು ಸೆಣಸಾಟಕ್ಕೆ ಮುಂದಾದರು. ಬಾಡಿಗೆ ಭಂಟರಂತಿದ್ದ ನ್ಯಾಯಮೂರ್ತಿಗಳೆದುರು ಫಿಡೆಲ್ ಹೇಳಿದ್ದಿದು : ''ಸೈನಿಕರನ್ನು ಯುದ್ಧದಲ್ಲಿ ಎದುರಿಸಬೇಕೆಂಬುದು ನಮ್ಮ ಉದ್ದೇಶವಾಗಿರಲಿಲ್ಲ. ಶಸ್ತ್ರಾಗಾರವನ್ನು ಆಕ್ರಮಿಸಿ ಶಸ್ತ್ರಗಳನ್ನು ಕೈವಶ ಮಾಡಿಕೊಳ್ಳಬೇಕೆಂಬುದು ನಮ್ಮ ಆಶಯವಾಗಿತ್ತು. ಆ ಮೂಲಕ ಜನರನ್ನು ಎಚ್ಚೆತ್ತುಕೊಳ್ಳುವಂತೆ ಮಾಡುವುದು ಮತ್ತು ಸೈನಿಕರು ದಬ್ಬಾಳಿಕೆಯ ದುರ್ವಾಸನೆಯಿಂದ ಕಶ್ಮಲಗೊಂಡಿರುವ ಹೊಲಸು ಧ್ವಜವನ್ನು ಬಿಸುಟು ಸ್ವಾತಂತ್ರ್ಯದ ಬಾವುಟವನ್ನು ಆತುಕೊಳ್ಳುವಂತೆ ಮಾಡುವುದು ನಮ್ಮ ಆಶಯವಾಗಿತ್ತು. ರಾಷ್ಟ್ರದ ಒಂದು ಚಿಕ್ಕ ಸಂಚುಕೂಟದವರ ಹಿತಾಸಕ್ತಿಗಳನ್ನು ರಕ್ಷಿಸುವುದರ ಬದಲು ಇಡೀ ದೇಶದ ಶ್ರೇಷ್ಠ ಹಿತಾಸಕ್ತಿಗಳನ್ನು ರಕ್ಷಿಸುವುದು ಸೈನಿಕರ ಕೆಲಸವಾಗಬೇಕು. ಅವರು ತಮ್ಮ ಬಂದೂಕುಗಳನ್ನು ಜನರ ವೈರಿಗಳತ್ತ ಗುರಿಯಿಡಬೇಕೇ ವಿನಾ ಜನಗಳತ್ತ ಅಲ್ಲ.'' ಅಂದಿನ ಕ್ಯೂಬಾದ ಸ್ಥಿತಿಗತಿಗಳನ್ನು ಕುರಿತು ಫಿಡೆಲ್ ಹೀಗೆಂದರು : ''ಸಣ್ಣ ರೈತರ ಪೈಕಿ ಶೇಕಡ ೮೫ರಷ್ಟು ಮಂದಿ ಬೇರೆಯವರ ಜಮೀನುಗಳಲ್ಲಿ ಕೃಷಿ ಮಾಡುತ್ತಿದ್ದವರು. ಅವರಿಗೆ ಯಾವಾಗ ಬೇಕಾದರೂ ಎತ್ತಂಗಡಿ ಆಗಬಹುದಿತ್ತು. ಉತ್ಪಾದನೆಯಲ್ಲಿ ತೊಡಗಿಸಿಕೊಳ್ಳಲಾಗಿದ್ದ ಒಟ್ಟು ಜಮೀನಿನ ಸುಮಾರು ಅರ್ಧ ಭಾಗದಷ್ಟು ವಿದೇಶಿಯರ ಮಾಲಿಕತ್ವದಲ್ಲಿತ್ತು. ಓರಿಯೆಂಟ್ ಪ್ರಾಂತ್ಯದಲ್ಲಿ ಉತ್ತರದ ಸಮುದ್ರ ತೀರದಿಂದ ದಕ್ಷಿಣ ಸಮುದ್ರ ತೀರದವರೆಗಿನ ಇಡೀ ಜಮೀನು ಅಮೆರಿಕಾದ ಯುನೈಟೆಡ್ ಫ್ರೂಟ್ ಕಂಪನಿ ಮತ್ತು ವೆಸ್ಟ್ ಇಂಡಿಯನ್ ಕಂಪನಿಗಳ ಅಧೀನದಲ್ಲಿತ್ತು. ಎರಡು ಲಕ್ಷ ರೈತ ಕುಟುಂಬಗಳಿಗೆ ತಮ್ಮದೆಂಬ ಜಮೀನೇ ಇಲ್ಲ; ಆ ಕುಟುಂಬಗಳ ಮಕ್ಕಳ ಹಸಿವಿಗೆ ಕೊನೆಯಿಲ್ಲ. ಇದಕ್ಕೆ ಪ್ರತಿಯಾಗಿ ಕೃಷಿಯೋಗ್ಯವಾದ ಮೂರು ಲಕ್ಷ ಎಕರೆಯಷ್ಟು ಜಮೀನನ್ನು ಪ್ರಬಲರು ಕೆಲವರು ತಮ್ಮ ಸುಬರ್ದಿನಲ್ಲಿಟ್ಟುಕೊಂಡಿದ್ದು ಅದನ್ನು ಉತ್ಪಾದನೆಗೆ ತೊಡಗಿಸಿಕೊಂಡೇ ಇಲ್ಲ ....ಆಹಾರ, ದಿಮ್ಮಿ ಮತ್ತು ಬಟ್ಟೆ ಗಿರಣಿಗಳನ್ನು ಕೆಲವನ್ನುಳಿದು ಕ್ಯೂಬಾದಲ್ಲಿ ಕಾರ್ಖಾನೆಗಳೇ ಇಲ್ಲ. ಮೂಲತಃ ಕಚ್ಚಾ ಪದಾರ್ಥಗಳ ಉತ್ಪಾದನೆಯೊಂದನ್ನೇ ಇಲ್ಲಿ ವೃದ್ಧಿಪಡಿಸಲಾಗಿದೆ. ಸಕ್ಕರೆ ರಫ್ತು ಮಾಡಿ ಕಲ್ಲುಸಕ್ಕರೆ, ಚರ್ಮ ರಫ್ತು ಮಾಡಿ ಪಾದರಕ್ಷೆ, ಮತ್ತು ಕಬ್ಬಿಣ ರಫ್ತು ಮಾಡಿ ನೇಗಿಲನ್ನು ಆಮದು ಮಾಡಿಕೊಳ್ಳುವ ದೇಶ ನಮ್ಮದು.''

ಮೋನ್‌ಕಾಡಾ ಘಟನೆಯ ಐವತ್ತು ವರ್ಷಗಳ ನಂತರದ ಕ್ಯೂಬಾ, ಕ್ರಾಂತಿಯ ಫಲಗಳನ್ನು ಸಾರ್ವತ್ರಿಕಗೊಳಿಸಿರುವ ಮಾದರಿ ರಾಜ್ಯ. ಆರೋಗ್ಯ ಮತ್ತು ಶಿಕ್ಷಣದ ಕ್ಷೇತ್ರಗಳಲ್ಲಿ ಈ ಪುಟ್ಟ ರಾಷ್ಟ್ರದ ಸಾಧನೆ ಅಸಾಧಾರಣ. ಪಕ್ಕದ ದೈತ್ಯ ಪ್ರತಿ ನಿಮಿಷದಲ್ಲೂ ಈ ದೇಶವನ್ನು ಸದೆಬಡಿಯಲು ಕೆಂಗಣ್ಣಿನ ನೋಟ ಬೀರುತ್ತಲೇ ಇದ್ದಾನೆ. ಕ್ಯಾಸ್ಟ್ರೋನನ್ನು ಕೊಲ್ಲಲು ಅಮೆರಿಕಾದ ಅಧ್ಯಕ್ಷರುಗಳೆಲ್ಲಾ ಕಳೆದ ನಲವತ್ತೈದು ವರ್ಷಗಳಲ್ಲಿ ಏನಿಲ್ಲವೆಂದರೂ ಐವತ್ತು ಬಾರಿ ನೀಚ ಯತ್ನಗಳನ್ನು ಮಾಡಿದ್ದಾರೆ. ಕ್ಯೂಬಾದ ವ್ಯಾಪಾರಕ್ಕೆ ದಿಗ್ಬಂಧನ ಹೇರಿರುವ ಅಮೆರಿಕಾ ಈ ದೇಶದಲ್ಲಿ ಕ್ಷೋಭೆಯನ್ನುಂಟುಮಾಡಲು ಯಾವತ್ತೂ ಹೇಸಿಲ್ಲ. ಈಗಲೂ ಫಿಡೆಲ್‌ನನ್ನು ಸರ್ವಾಧಿಕಾರಿಯೆಂದೇ ಅಮೆರಿಕಾದ ಸರ್ಕಾರ ಮತ್ತು ಮಾಧ್ಯಮಗಳು ಜರಿಯುತ್ತಿರುತ್ತವೆ. ಕ್ಯೂಬಾದಲ್ಲಿ ಸಮಾಜವಾದವನ್ನು ಮಣ್ಣುಮಾಡಿ ಮುಕ್ತ ಮಾರುಕಟ್ಟೆಯ ಆರ್ಥಿಕತೆಯನ್ನು ಸ್ಥಾಪಿಸುವುದು ತನ್ನ ಪರಮಧ್ಯೇಯವೆಂದು ವಂಚಕ ಜಾರ್ಜ್ ಬುಷ್ ಬಹಿರಂಗವಾಗಿ ಹೇಳಿದ್ದಾನೆ. ಕ್ಯೂಬಾ ಜೈವಿಕಾಸ್ತ್ರಗಳನ್ನು ತಯಾರಿಸುತ್ತಿದೆಯೆಂಬ ಸುಳ್ಳು ಅವನ ಬಾಯಿಂದ ಬರುತ್ತಲೇ ಇರುತ್ತದೆ. ಇರಾಕನ್ನು ಭಗ್ನಗೊಳಿಸಲು ಇಂಥದೇ ಆಪಾದನೆ ಮಾಡಲಾಗಿತ್ತು. ಜೊತೆಗೆ ಈಗ ಬ್ರೆಜಿಲ್ ಮತ್ತು ವೆನಿಝೂಲಾಗಳಲ್ಲಿ ತಕ್ಕಮಟ್ಟಿಗೆ ಜನಪರವಾದ ಸರ್ಕಾರಗಳಿದ್ದು ಅಮೆರಿಕಾಕ್ಕೆ ಸವಾಲನ್ನೊಡ್ಡುತ್ತಿವೆ. ನಮ್ಮ ದೇಶದ ಮೂರ್ಖ ಮಾಧ್ಯಮಗಳು ಕೆಲವು ಅಮೆರಿಕಾದ ದನಿಯನ್ನು ಪ್ರಚುರಪಡಿಸುತ್ತವೆ ಮತ್ತು ಫಿಡೆಲ್ ಎಂದರೆ ರಾಕ್ಷಸನಿರಬೇಕೆಂಬ ಭಾವನೆಯನ್ನು ಬಿತ್ತಲು ಮುಂದಾಗುತ್ತಿರುತ್ತವೆ. ಇದೆಲ್ಲದರ ನಡುವೆ ಫಿಡೆಲ್ ಇನ್ನೂ ಜೀವಂತವಾಗಿದ್ದಾರೆ, ಜನಪ್ರಿಯರಾಗಿದ್ದಾರೆ, ದೇಶದ ಸಾರ್ವಭೌಮತ್ವದ ರಕ್ಷಣೆ

ಮಾಡುತ್ತಿದ್ದಾರೆ, ಜಗತ್ತಿನ ಎಲ್ಲ ಮರ್ದಿತ ಜನರ ಪ್ರಚಂಡ ಧ್ವನಿಯಾಗಿದ್ದಾರೆ.

ಕ್ಯೂಬಾಕ್ಕೆ ತನ್ನ ವ್ಯವಸ್ಥೆಯನ್ನು ರಕ್ಷಿಸುಕೊಳ್ಳುವ ಹಕ್ಕನ್ನು ನೀಡಬಾರದೆಂದು ಅಮೆರಿಕಾದ ಶ್ವೇತಭವನದ ಕುನ್ನಿಗಳು ಆಗಾಗ್ಗೆ ಅರಚುತ್ತಿರುತ್ತವೆ. ಅಲ್ಲಿ ಮಾನವ ಹಕ್ಕುಗಳ ದಮನವಾಗಿದೆಯೆಂದು ರಂಪಾಟ ಎಬ್ಬಿಸಲಾಗುತ್ತದೆ. ಫ್ಲಾರಿಡಾ ತುಂಬ ಕ್ಯೂಬಾದ ವಿದ್ರೋಹಿಗಳಿಗೆ ನೆಲೆ, ಆರ್ಥಿಕ ಬೆಂಬಲ ಮತ್ತು ಶಸ್ತ್ರಾಸ್ತ್ರಗಳನ್ನು ನೀಡಲಾಗಿದೆ. ಇದು ನೆರೆರಾಷ್ಟ್ರದ ಮೇಲಿನ ಹಲ್ಲೆ, ಆಕ್ರಮಣ ಮತ್ತು ಪಿತೂರಿ. ತನ್ನ ಹೇಸಿಗೆಯ ವ್ಯವಸ್ಥೆಯನ್ನು ಉಳಿಸಿಕೊಳ್ಳಲು ಅಮೆರಿಕಾ ಬೇರೆ ರಾಷ್ಟ್ರಗಳನ್ನು ಪುಡಿಪುಡಿ ಮಾಡಬಹುದು, ಆದರೆ ಕ್ಯೂಬಾ ನಿಸೂರಾಗಿ ಬಾಳುವಂತಿಲ್ಲ. ಇದು ವಿಶ್ವಸಂಸ್ಥೆಯನ್ನೂ ನಿಯಂತ್ರಿಸುವ ಅಮೆರಿಕಾದ ಸೊಕ್ಕಿನ ನಿಲುವು. ತಥಾಕಥಿತ ಭಯೋತ್ಪಾದಕರನ್ನು ಹತ್ತಿಕ್ಕಲು ಅಮೆರಿಕಾದ ಸರ್ಕಾರ ಏನೆಲ್ಲ ಕ್ರಮಗಳನ್ನು ತೆಗೆದುಕೊಂಡಿದೆ, ತನ್ನ ಪ್ರಜೆಗಳ ಹಕ್ಕುಗಳನ್ನು ಮೊಟಕುಗೊಳಿಸಿದೆ, ವಿದೇಶಿಯರನ್ನು ಅಪಮಾನಕ್ಕೆ ಗುರಿಮಾಡುತ್ತಿದೆ, ಎಂಬುದು ಇಡೀ ವಿಶ್ವಕ್ಕೆ ತಿಳಿದಿದೆ. ಯೂರೋಪಿಯನ್ ಯೂನಿಯನ್ ಎಂಬ ತಿಳಿಗೇಡಿಗಳ ದುಷ್ಟಕೂಟವು ಕ್ಯೂಬಾಕ್ಕೆ ಎಚ್ಚರಿಕೆಯನ್ನು ನೀಡಿದೆ : ''ನಿಮ್ಮ ದೇಶದಲ್ಲಿ ಸ್ವತಂತ್ರಯೋಧರನ್ನು (ಅಂದರೆ, ಕ್ಯೂಬಾ ಬುಡಮೇಲಾಗಬೇಕೆಂದು ಬಯಸುವ ಅಮೆರಿಕಾದ ಬಾಲಬಡುಕರನ್ನು) ದಸ್ತಗಿರಿ ಮಾಡಿದರೆ ಆರ್ಥಿಕ ದಿಗ್ಬಂಧನ ಹಾಕುತ್ತೇವೆ,'' ಎಂದು. ಇದೇ ಮಾತನ್ನು ಈ ಕುತ್ಸಿತ ಯೂರೋಪು ಅಮೆರಿಕಾಕ್ಕೆ ಏಕೆ ಹೇಳುವುದಿಲ್ಲ? ಇಡೀ ಇರಾಕನ್ನು ಸುಟ್ಟು ಬೂದಿ ಮಾಡುತ್ತಿರುವುದನ್ನು ನೋಡುತ್ತಾ ಕುಳಿತಿರುವ ಇವರಿಗೆ ಕ್ಯೂಬಾದ ಬಗ್ಗೆ ಎಲ್ಲಿಲ್ಲದ ಪ್ರೀತಿ ! ಸಮಾಜವಾದೀ ವ್ಯವಸ್ಥೆಯನ್ನು ನಿರ್ನಾಮ ಮಾಡುವುದು ಇವರಿಗೆ ದೊಡ್ಡ ಹಕ್ಕು, ಆದರೆ ಅದನ್ನು ಉಳಿಸಿಕೊಳ್ಳಲು ಫಿಡೆಲ್ ಸಜ್ಜಾದರೆ ಅದು ಮಾನವ ಹಕ್ಕುಗಳ ದಮನ !! ಯೂರೋಪಿನಲ್ಲಿ ಅನ್ಯದೇಶೀಯರನ್ನು ಪ್ರತಿನಿತ್ಯ ದಸ್ತಗಿರಿ ಮಾಡಿ ಕತ್ತಲೆಯ ಕೋಣೆಗಳಿಗೆ ನೂಕುತ್ತಾರಲ್ಲಾ, ಅದರ ಬಗ್ಗೆ ಯೂರೋಪು ಕಣ್ಣುಬಿಡಲೆಂದು ಆಗ್ರಹಿಸುವವರಾರು ?

ಬೆಂಗಳೂರಿನ ಶಾಲೆಗಳಲ್ಲಿ ಪ್ರತಿಭಾನ್ವಿತ ಮಕ್ಕಳ ಸಾಮಾನ್ಯ ಜ್ಞಾನದ ವರ್ಧನೆಗೆ ಒಂದು ಪುಸ್ತಕ ಇರಿಸಿದ್ದಾರೆ. ಅದರಲ್ಲಿ ಒಂದು ಪ್ರಶ್ನೆ ಹೀಗಿದೆ : ಜಗತ್ತಿನಲ್ಲಿ ಅತಿದೀರ್ಘಕಾಲ ಸರ್ವಾಧಿಕಾರಿಯಾಗಿ ಆಡಳಿತ ನಡೆಸುತ್ತಿರುವ ವ್ಯಕ್ತಿ ಯಾರು ? ಉತ್ತರ : ಫಿಡೆಲ್ ಕ್ಯಾಸ್ಟ್ರೋ. – ಹೀಗಿದೆ ನಮ್ಮ ಮುಕ್ತ ವಿದ್ಯಾರ್ಜನೆಯ ಮಾದರಿ. ಇಂತಹ ಜ್ಞಾನಭಂಡಾರವನ್ನು ಬೆಳೆಸುವುದು ಆರೋಗ್ಯಕರವೇ ಎಂಬ ಪ್ರಶ್ನೆ ನಮ್ಮನ್ನು ಬಾಧಿಸಬೇಕು. ಕ್ಯೂಬಾದ ಒಂದು ಭಾಗವಾದ ಗ್ವಾಂಟನಾಮೋದಲ್ಲಿ ಬೇರೆಬೇರೆ ದೇಶಗಳವರನ್ನು ಯಾವ ವಿಚಾರಣೆಯೂ ಇಲ್ಲದೆ ಅತ್ಯಂತ ಕ್ರೂರವಾಗಿ ಹಿಂಸಿಸುತ್ತಿರುವ ಅಮೆರಿಕಾ ಈಗಲೂ ಆ ಭಾಗ ತನ್ನದೆಂದು ಸಾರುತ್ತದೆ. ಅದನ್ನೇಕೆ ನಾವು ನಮ್ಮ ಮಕ್ಕಳಿಗೆ ತಿಳಿಯಹೇಳುವುದಿಲ್ಲ ?

ಇಷ್ಟು ದುಸ್ಸಹನೀಯವಾದ ವಾತಾವರಣದಲ್ಲಿ ಕ್ಯೂಬಾ ಬದುಕುತ್ತಿದೆ. ಮೋನ್‌ಕಾಡಾದ ಘಟನೆಯ ಐವತ್ತನೆಯ ವರ್ಷದಲ್ಲಿ ತನ್ನ ಭವಿಷ್ಯವನ್ನು ಕ್ಯೂಬಾ ಆತಂಕದಿಂದಲೇ ಎದುರಿಸಬೇಕಾಗಿದೆ. ಆ ದೇಶದ ಜನರ ಏಳಿಗೆಯನ್ನು ಸಹಿಸದವರು ಮಾನವ ಹಕ್ಕುಗಳ ಪ್ರತಿಪಾದಕರಲ್ಲ, ಅವರು ಮಾನವನ ಸುಲಲಿತ ಜೀವನದ ದ್ರೋಹಿಗಳು. 'ಹೊಸತು' ಅವರಿಗೆ ಧಿಕ್ಕಾರ ಹೇಳುತ್ತದೆ, ಕ್ಯೂಬಾದ ಜನತೆಯ ಶುಭವನ್ನು ಹಾರೈಸುತ್ತದೆ.

# ಏಕರೂಪ ನಾಗರಿಕ ಸಂಹಿತೆಯತ್ತ

ಇತ್ತೀಚೆಗೆ ಮುಖ್ಯ ನ್ಯಾಯಮೂರ್ತಿ ವಿ. ಎನ್. ಖರೆ ನೇತೃತ್ವದ ವಿಭಾಗೀಯ ಪೀಠವು ಭಾರತೀಯ ಉತ್ತರದಾಯಿತ್ವ ಕಾಯಿದೆಗೆ ಸಂಬಂಧಪಟ್ಟಂತೆ ತೀರ್ಪು ಕೊಡುವಾಗ ನಾಗರಿಕ ಸಮಾಜದಲ್ಲಿ ಧಾರ್ಮಿಕ ಮತ್ತು ವೈಯಕ್ತಿಕ ಕಾನೂನುಗಳ ನಡುವೆ ಯಾವುದೇ ಸಂಬಂಧವಿಲ್ಲ ಎಂದು ತಿಳಿಸುತ್ತಾ ಎಲ್ಲಾ ಧಾರ್ಮಿಕ ಸಮುದಾಯಗಳಿಗೆ ಅನ್ವಯವಾಗುವಂತಹ ಏಕರೂಪ ನಾಗರಿಕ ಸಂಹಿತೆಗೆ ತನ್ನ ಒಲವನ್ನು ವ್ಯಕ್ತಪಡಿಸಿದೆ. ಅಷ್ಟೇ ಅಲ್ಲ, ಇಂತಹ ಸಂಹಿತೆ ರಾಷ್ಟ್ರೀಯ ಐಕ್ಯತೆ ಮೂಡಿಸಲು ಅಗತ್ಯವಾಗಿದೆ, ಎಂದು ತಿಳಿಸಿದೆ. ಸರ್ವೋಚ್ಚ ನ್ಯಾಯಾಲಯ ಈ ರೀತಿ ಸೂಚಿಸುತ್ತಿರುವುದು ಇದೇ ಮೊದಲಲ್ಲ. ಆರೇಳು ವರ್ಷಗಳ ಹಿಂದೆ ಎರಡನೇ ಮದುವೆಯಾಗಲೆಂದೇ ಮುಸ್ಲಿಂ ಧರ್ಮಕ್ಕೆ ಮತಾಂತರಗೊಳ್ಳುವ ಹಿಂದೂ ಗಂಡಂದಿರ ವರ್ತನೆಯನ್ನು ಟೀಕಿಸಿ ತೀರ್ಪು ಕೊಡುವಾಗ ಭಾರತದಾದ್ಯಂತ ಒಂದು ಸಮಾನ ನಾಗರಿಕ ಸಂಹಿತೆ ರೂಪಿಸಲು ಪ್ರಯತ್ನಿಸಬೇಕೆಂಬ ಸಂವಿಧಾನದ ೪೪ನೇ ಕಲಮಿಗೆ ಕೇಂದ್ರ ಸರ್ಕಾರದ ಕಾನೂನು ಇಲಾಖೆ ತೆಗೆದುಕೊಂಡಿರುವ ಕ್ರಮವೇನೆಂದು ಪ್ರಶ್ನಿಸಿತ್ತು. ಈ ರೀತಿ ನ್ಯಾಯಾಂಗವು ಆಡಳಿತ ಯಂತ್ರವನ್ನು ಮತ್ತೆ ಮತ್ತೆ ಸಮಾನ ನಾಗರಿಕ ಸಂಹಿತೆಗಾಗಿ ಒತ್ತಾಯಿಸುತ್ತಾ ಬಂದಿದ್ದರೂ ವಸ್ತುಸ್ಥಿತಿಯಲ್ಲಿ ಬದಲಾವಣೆಯೇನೂ ಆಗಿಲ್ಲ. ಸಮಾನ ನಾಗರಿಕ ಸಂಹಿತೆಯ ಜಾರಿಯ ಬಗೆಗೆ ರಾಜಕೀಯವಾಗಿರುವ ಭಿನ್ನಾಭಿಪ್ರಾಯಗಳು ಸಮಸ್ಯೆಯನ್ನು ಮತ್ತಷ್ಟು ಜಟಿಲವಾಗಿಸುತ್ತಿವೆ.

ಏಕರೂಪ ನಾಗರಿಕ ಸಂಹಿತೆಯನ್ನು ಜಾರಿಗೆ ತರುವುದರಿಂದ ರಾಷ್ಟ್ರೀಯ ಐಕ್ಯತೆ ಸಾಧ್ಯ ಎಂದು 'ಭ್ರಮಿಸಿರುವ' ಸುಪ್ರೀಂ ಕೋರ್ಟಿನ ನಿಲುವನ್ನು ಸ್ವಾಗತಿಸಿರುವ ಭಾರತೀಯ ಜನತಾ ಪಕ್ಷ ಇಡೀ ದೇಶವನ್ನು 'ಹಿಂದೂ ರಾಷ್ಟ್ರ' ಮಾಡಿಬಿಡಬಹುದೆಂಬ ಕನಸಿನಲ್ಲಿ ಆನಂದದಿಂದ ಕುಣಿಯುತ್ತಿದೆ. ಸಮಾನ ನಾಗರಿಕ ಸಂಹಿತೆಯೆಂದರೆ ಅದು ಹಿಂದೂ ಕಾಯಿದೆಯ ವಿಸ್ತರಣೆಯೆಂದೂ, ಅನ್ಯಮತೀಯರ ಮೇಲೆ ಮತ್ತು ಅಲ್ಪಸಂಖ್ಯಾತರ ಮೇಲಿನ ಆಕ್ರಮಣವೆಂದೂ ವ್ಯಾಖ್ಯಾನಿಸುತ್ತಾ ಬಂದಿರುವ ಬೇರೆ ಹಲವು ರಾಜಕೀಯ ಪಕ್ಷಗಳು ಬದಲಾವಣೆಗೆ ತಮ್ಮ ಮುಖ ತಿರುಗಿಸಿವೆ.

'ಏಕರೂಪ ನಾಗರಿಕ ಸಂಹಿತೆ'ಯ ಕರಡು ನಮ್ಮ ಮುಂದಿಲ್ಲದಿರುವಾಗಲೂ ಇಷ್ಟೊಂದು ಪರ ವಿರೋಧಗಳ ಅಭಿಪ್ರಾಯ ವ್ಯಕ್ತಪಡಿಸುವುದು ಯಾವ ರೀತಿಯ ವಿವೇಕ ? ಹಾಗಿರುವಾಗ ತಮ್ಮ ತಮ್ಮ ಕಲ್ಪನೆಯ ಏಕರೂಪ ಸಂಹಿತೆಯನ್ನು ಕಲ್ಪಿಸಿಕೊಂಡು ಅದಕ್ಕಾಗಿ ಆನಂದಿಸುವುದರಲ್ಲಾಗಲಿ, ಆತಂಕಪಡುವುದರಲ್ಲಾಗಲಿ, ಅರ್ಥವೆಲ್ಲಿದೆ ? ಸರ್ವಸಮ್ಮತವಾದ ಸಮಾನ ನಾಗರಿಕ ಸಂಹಿತೆಯ ಕರಡು ಮಸೂದೆಯೊಂದು ಪ್ರಜಾಸತ್ತಾತ್ಮಕ ಪ್ರಕ್ರಿಯೆಯಲ್ಲಿ ರೂಪುಗೊಳ್ಳಬೇಕೆಂದಾಗ ಅದಕ್ಕೆ ನಡೆಯಬೇಕಾದ ಪ್ರಯತ್ನಗಳ ಸ್ವರೂಪವೇನು ? ಇದರ ಬಗ್ಗೆ ಚರ್ಚೆ ನಡೆಸದೆ ಸಮಾನ ನಾಗರಿಕ ಸಂಹಿತೆಯ ಪ್ರಸ್ತಾಪ ಬಂದಾಗಲೆಲ್ಲ ಒಂದು ಗುಂಪು ಕಿವಿ ಮುಚ್ಚಿ ಅದನ್ನು ವಿರೋಧಿಸುವುದು ಮತ್ತೊಂದು ಗುಂಪು ಕೇಕೆ ಹಾಕಿ ಸ್ವಾಗತಿಸುವುದು ಹಲವಾರು ವರ್ಷಗಳಿಂದ ಅವ್ಯಾಹತವಾಗಿ ನಡೆದುಬಂದು 'ಜಾತ್ಯತೀತ ಭಾರತ'ವೆಂಬುದು ಒಂದು ದೊಡ್ಡ ಅಣಕವಾಗಿದೆ. 'ಏಕರೂಪ ಸಿವಿಲ್ ಸಂಹಿತೆ'ಯ

೯ನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ :೨೨೫೧೩೮೦೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ✆ :೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ✆ :೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ✆ : ೪೨೪೩೦೨




ಶ್ರೀಮತಿ ವಸುಮತಿ ಉಡುಪ ಅವರ 'ಬಾಲೆಯಾಡಿಸುವ ಬಾಲೆ' ಕವಿತೆ ಬಾಲೆಯ ಬದುಕಿನ ಕೈಗನ್ನಡಿಯಾಗಿ ಗಟ್ಟಿಯಾಗಿ ಓದಿಸಿಕೊಂಡು ಹೋಯ್ತು. 'ಬಾ ಬಾಲೆ ಶಾಲೆಗೆ' ಎಂಬ ಯೋಜನೆ ಹಮ್ಮಿಕೊಂಡಿರುವಾಗಲೂ ಉಡುಪರ ಕವಿತೆಯ ಬಾಲೆಯಂತಹ ಬಾಲೆಯರು ಅನೇಕರಿದ್ದಾರೆ. ಅವರೆಲ್ಲಾ ಶಾಲೆಗೆ, 'ಬಾ ಮರಳಿ ಶಾಲೆಗೆ' ಎಂಬಂತೆ ಸೇರಿದರೆ ಶಿಕ್ಷಣ ಕ್ಷೇತ್ರದ ಯೋಜನೆಗಳು ಸಾರ್ಥಕವಾಗುತ್ತವೆ. ಬಾಲೆಯಾಡಿಸುವ ಬಾಲೆ ಶಾಲೆಗೆ ಮರಳಲಿ.

ಕಡೂರು **ಜಿ. ಹೆಚ್. ತ್ರಿವೇಣಿ**

ಇತ್ತೀಚೆಗೆ ನಮ್ಮನ್ನಗಲಿದ ಹಿರಿಯ ಚೇತನ ದಿ|| ಎಂ. ಎ. ಸೇತುರಾವ್‌ರ ಸಂಸ್ಮರಣೆ ಹೃದಯಸ್ಪರ್ಶಿಯಾಗಿದೆ. ಕೆಲವು ವರ್ಷಗಳ ಹಿಂದೆ ಅವರನ್ನು ಕಂಡು ಮಾತಾಡಿದ ನೆನಪು ಮರುಕಳಿಸಿ ಬಂತು... ಶ್ರೀಮತಿ ವಸುಮತಿ ಉಡುಪರ 'ಬಾಲೆಯಾಡಿಸುವ ಬಾಲೆ' ಸರಳವಾಗಿದ್ದು ಮನ ಕಲಕುವಂತಿದೆ.

ಕುಳಾಯಿ-ಹೊಸಬೆಟ್ಟು **ಡಾ|| ಸಿ. ಹೊಸಬೆಟ್ಟು**

ಮುಗ್ಧ ಮಗುವಿನ ನಿಷ್ಕಳಂಕ ತುಂಬು ನಗೆ ಹೊತ್ತು ಬಂದ ಆಗಸ್ಟ್ ತಿಂಗಳ 'ಹೊಸತು' ಬಹಳ ಚೆನ್ನಾಗಿದೆ. ಅಭಿನಂದನೆಗಳು. ಮುಖಪುಟ ವಾತ್ಸಲ್ಯವನ್ನು ಉಕ್ಕಿಸಿತು. ಕಾವ್ಯಧಾರೆ ಪನ್ನೀರ ಸಿಂಚನದಂತಿತ್ತು. ಲೇಖನಗಳು ಅರ್ಥವಾಗುವಂತಿದ್ದವು. ಶ್ರೀ ಜಿ. ಟಿ. ನಾರಾಯಣ ರಾಯರ 'ವೈಜ್ಞಾನಿಕ ಚಿಂತನೆಯ ಪ್ರಸ್ತುತತೆ' ಎರಡೆರಡು ಬಾರಿ ಓದಿಸಿಕೊಂಡು, ಮೆಲುಕು ಹಾಕುವಂತೆ ಮಾಡಿತು. ಕೊಲಾಜ್ ಕಲಾಕೃತಿಗಳು ಕಣ್ಣಿಗೆ ಹಬ್ಬವನ್ನುಂಟು ಮಾಡಿದವು. ಮೆಚ್ಚುಗೆಯ ಪಟ್ಟಿ ಹೀಗೇ ಮುಂದುವರಿಯುತ್ತಿದೆ.....

ಕಳನಾಡು **ಮಾಲತಿ ಕಮಲಾಕ್ಷ**

ಡಾ|| ರಂಗರಾಜ ವನದುರ್ಗರವರು ಬರೆದಿರುವ 'ದಲಿತರ ಚರಿತ್ರೆಯ ಆಕರಗಳು' ಲೇಖನ ಓದಿದ್ದರಿಂದ ಬಹಳ ಉಪಯುಕ್ತವಾಯಿತು. ಇಂದಿಗೂ ಕೂಡ ಹಳ್ಳಿಗಳಲ್ಲಿ ದಲಿತರನ್ನು ಕೀಳುಮಟ್ಟದಲ್ಲಿ ನೋಡುವ ಜನರಿದ್ದಾರೆ. ದಲಿತ ಜನಾಂಗ ದಿನೇದಿನೇ ಶೋಷಣೆಗೆ ಒಳಗಾಗುತ್ತಿದೆ. ಇದರ ವಿರುದ್ಧ ಹೋರಾಟ ಮಾಡುವ ಕ್ರಾಂತಿ ಪುರುಷರು ಈ ಸಮಾಜದಲ್ಲಿ ಹುಟ್ಟಿಬರಲಿ ಎಂದು ಹಾರೈಸುತ್ತೇನೆ.

ನೆಲ್ಲೂರು **ನೆಲ್ಲೂರು ರವಿ**

ನ್ಯಾಯಾಲಯದಿಂದ ದುಡಿಯುವ ಜನರಿಗೆ ಭಾರಿ ಹೊಡೆತ ಬಿದ್ದಿದೆ. ಮುಷ್ಕರ ಮಾಡಕೂಡದೆನ್ನುವುದು ಸಂವಿಧಾನದ ತಿರುಳಾದರೆ ಅದನ್ನು ಕೂಡಲೆ ಬದಲಾಯಿಸಬೇಕು. ಪತ್ರಿಕೆಗಳು ಕಾರ್ಮಿಕ ವಿರೋಧಿ ತೀರ್ಮಾನದ ಬಗ್ಗೆ ವ್ಯಸನ ವ್ಯಕ್ತಪಡಿಸಬೇಕು; ರಕ್ತಪಿಪಾಸು ಬಂಡವಳಿಗರ ಕೈಗೊಂಬೆಗಳಾಗಬಾರದು. ಸರ್ಕಾರದ ಬಲಪ್ರಯೋಗವನ್ನು ಅನುಮೋದಿಸುತ್ತಾ ಮುಷ್ಕರಗಳನ್ನು ಕೈಬಿಟ್ಟು ''ಸಾಂಘಿಕ ಚೌಕಾಸಿ''ಯಲ್ಲಿ ತೊಡಗಬೇಕೆಂದು ನೌಕರರಿಗೆ ಉಪದೇಶಿಸುವ ಪತ್ರಿಕೆಗಳು ದುಡಿಯುವ ಜನರ ದ್ವೇಷಿಗಳು ಎನಿಸಿಕೊಳ್ಳುತ್ತವೆ. ಇಂದು ತಮಿಳುನಾಡು ಸರ್ಕಾರ ಅತ್ಯಂತ ಹೀನಾಯ ದೌರ್ಜನ್ಯಗಳನ್ನೆಸಗುತ್ತಿದೆ. ಬ್ರಿಟಿಷ್ ವಸಾಹತು ಸರ್ಕಾರ ಸಹ ನೌಕರರಿಂದ ಕ್ಷಮಾಪಣೆ ಪತ್ರಗಳನ್ನು ಕೇಳಿರಲಿಲ್ಲ. ಇದೇನು ವಿಕಟ ಪ್ರಜಾಪ್ರಭುತ್ವ !

ಸಿನ್ಸಿನ್ನಾಟಿ, ಅಮೆರಿಕಾ **ದಿನೇಶ್ ಹಾಸನ**

ಜುಲೈ ತಿಂಗಳ ಸಂಪಾದಕೀಯ ಅರ್ಥಪೂರ್ಣವಾಗಿದೆ. ಡಿಪ್ಲೊಮಸಿ ಹೆಸರಲ್ಲಿ, ರಾಷ್ಟ್ರೀಯವಾದದ ಸೋಗಲ್ಲಿ, ಭಾರತೀಯತೆಯನ್ನು ಅಮೆರಿಕನ್ನರಿಗೆ ಆಡುಂಬೊಲ ಮಾಡುತ್ತಿರುವ ಇಂದಿನ (ಅ)ರಾಜಕೀಯ ವ್ಯವಸ್ಥೆ ಖಿನ್ನವಾಗಿಸುತ್ತಿದೆ. ಹಣವಂತ ದೇಶವು ಮುಂದೆಂದೋ ಬಿಸಾಡುವ (?) ಎರವಲಿನ ಎಂಜಲಿನ ಆಸೆಗೆ ಜೊಲ್ಲು ಸುರಿಸುವ ಪ್ರಕ್ರಿಯೆಯ ಭಾಗವಾಗಿ, ಇರಾಕಿಗೆ ಭಾರತ ಸೈನ್ಯ ಕಳಿಸುವುದು ''ಅಂಗೂ ಕೆಟ್ಟ ಇಂಗೂ ಕೆಟ್ಟ ರಂಗಧಾಮ''ನ ಸ್ಥಿತಿಯೇ ಸರಿ. ವಿಶ್ವದ




ಧಾರ್ಮಿಕ ಅಸಹನೀಯತೆಗಳ ನಡುವೆ ಭಾರತ ಇಲ್ಲಿ ಎಡವಲೇ ಬಾರದೆಂಬುದು ನಿಖರ ಸತ್ಯ. ಇದೇ ಚಿಂತನೆಯಲ್ಲಿ ಈಗಿನ ಇರಾಕಿಗಳ ಪ್ರತಿರೋಧವನ್ನು, ಅಂದಿನ ನಮ್ಮ ಭಗತ್, ಧಿಂಗ್ರಾ, ಮುಂತಾದವರ ಅಖಂಡತೆಯ ಅಭಿವ್ಯಕ್ತಿಗೆ ಹೋಲಿಸಿ, ಅವರನ್ನು ಕಾಂಗ್ರೆಸ್ ವಿಕಲ್ಪತೆಯ ನಡುವೆಯೂ ಗುರುತಿಸಿದ್ದೀರಿ, ಧನ್ಯವಾದಗಳು. ಇರಾಕಿಯರಿಗೆ ನಾವು ಸಂಪೂರ್ಣ ಬೆಂಬಲ ಸೂಚಿಸಬೇಕು. ಮುಸ್ಲಿಂ ಭಯೋತ್ಪಾದನೆಯ ವಿರುದ್ಧದ ತನ್ನ ಸೋಗಲಾಡಿ ಹೋರಾಟಕ್ಕೆ ಅಮೆರಿಕಾ ಎಂಬ ಮಂಗ, ತಿಂದುಂಡು ಭಾರತವೆಂಬ ತಿನ್ನದ ಹಿಂದು ಕುರಿಯ ಬಾಯಿಗೂ ಸವರಲೆಣಿಸುತ್ತಿದೆ, ಜೋಕೆ !

ಪಾವಗಡ **ಕೆ. ಪುರುಷೋತ್ತಮ ರೆಡ್ಡಿ**

ವಿಶ್ವಾರಾಧ್ಯ ಸತ್ಯಂಪೇಟೆ ಅವರ ಲೇಖನಕ್ಕೆ ನನ್ನ ಪ್ರತಿಕ್ರಿಯೆ : ಆಗಮಗಳು ಶೈವಧರ್ಮಕ್ಕೆ ಮೂಲ. ವೀರಶೈವ ಎಂದರೆ, ಇಷ್ಟಲಿಂಗವನ್ನು ಸದಾ ಧರಿಸಿಕೊಂಡು ನಿಷ್ಠೆಯುಳ್ಳವನಾಗಿ ಪಂಚಾಚಾರಗಳನ್ನು ಪಾಲಿಸುತ್ತ, ಇತರ ಧರ್ಮಗಳನ್ನು ಸಮನ್ವಯ ದೃಷ್ಟಿಯಿಂದ ನೋಡುತ್ತ ಶಿವನನ್ನು ಲಿಂಗರೂಪದಲ್ಲಿ ನಿಷ್ಠೆಯಿಂದ ಪೂಜಿಸುವವನೇ ವೀರಶೈವ. ಆತ್ಮವಿಕಾಸಕ್ಕೆ ಪರಿಪೂರ್ಣತೆಯನ್ನು ಹೊಂದಿ ಪೂರ್ಣ ಪ್ರಮಾಣದಲ್ಲಿ ಈ ಧರ್ಮ ಪರಿಪಕ್ವವಾದದ್ದು ೧೨ನೆಯ ಶತಮಾನದ ಬಸವಣ್ಣನವರ ಅನುಭವ ಮಂಟಪದ ಮಹಾಮನೆಯಲ್ಲಿ.

ಹೊನ್ನಾಳಿ **ಸಂಗನಾಳಮಠ ಯು. ಎಸ್.**

ಶ್ರೀ ಮ. ಶ್ರೀ. ಮುರಳಿಕೃಷ್ಣ ಅವರು ಪತ್ರಕರ್ತರು ಗಂಭೀರವಾಗಿ ಚಿಂತಿಸಬೇಕಾದ ವಿಚಾರಗಳನ್ನು ಹೇಳಿದ್ದಾರೆ. ಇತ್ತೀಚೆಗೆ ತೀರ್ಥಹಳ್ಳಿ ಪತ್ರಕರ್ತರು ಏರ್ಪಡಿಸಿದ್ದ ಪತ್ರಿಕಾ ದಿನಾಚರಣೆ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಕನ್ನಡ ಪ್ರಭ ಸಂಪಾದಕ ಶ್ರೀ ವೆಂಕಟನಾರಾಯಣರಿಗೆ ಸಭಿಕರು ಇಂತಹ ವಿಚಾರಗಳ ಕುರಿತಂತೆ ಪ್ರಶ್ನಿಸಿದರು. ಕುದುರೆಮುಖ ಕಬ್ಬಿಣ ಮತ್ತು ಅದಿರು ಕಂಪನಿಯಿಂದ ತುಂಗಭದ್ರ ನದಿಗಾಗುತ್ತಿರುವ ಅಪಾಯದ ವಿರುದ್ಧ ಹಮ್ಮಿಕೊಂಡ ಚಳವಳಿಗೆ ಪತ್ರಿಕೆಗಳು ಹೆಚ್ಚಿನ ಪ್ರಚಾರ ನೀಡದೆ ಕಂಪನಿಯ ಬಗೆಗೆ ಸದಭಿಪ್ರಾಯದ ಲೇಖನಗಳನ್ನು ಪ್ರಕಟಿಸಿದ ಬಗ್ಗೆ ಸಭಿಕರೊಬ್ಬರು ಕೇಳಿದ ಪ್ರಶ್ನೆಗೆ ''ಅದಿರು ಕಂಪನಿಯಿಂದ ಒಂದು ಪತ್ರಿಕೆಗೆ ವಾರ್ಷಿಕ ೨೦ ಲಕ್ಷ ಜಾಹಿರಾತು ಸಿಗುತ್ತಿರುವಾಗ ಅದರ 'ಹಿತಾಸಕ್ತಿ'ಯನ್ನು ನಾವು ಗಮನಿಸಬೇಕು'' ಎಂದರು. ಪತ್ರಿಕೋದ್ಯಮ ಹಾಗೂ ಬಂಡವಾಳಶಾಹಿಗಳ ನಂಟನ್ನು, ಅನಿವಾರ್ಯತೆಯನ್ನು ಹಾಗೂ ಜನಪರ ಚಳವಳಿಗೆ ಸೂಕ್ತ ಪ್ರಚಾರ ಪತ್ರಿಕೆಗಳಲ್ಲಿ ದೊರಕದಿರುವುದನ್ನು ಈ ಮಾತುಗಳು ಹೇಳುತ್ತವೆ.

ಈಗಿನ ಪತ್ರಿಕೆಗಳು ಕೇವಲ ಬಂಡವಾಳಶಾಹಿಗಳ ಪರವಾಗಿರುವುದಲ್ಲದೇ ಕೋಮುವಾದಿಗಳ ಕರಪತ್ರದಂತೆಯೂ ಕೆಲಸ ಮಾಡುತ್ತಿವೆ. ನಾಡಿನ ಶಾಂತಿ ಕದಡುವ ತೊಗಾಡಿಯಾ ಮುಖಾಂತರ ನಂಜುಕಾರುವ ಭಾಷಣಗಳು ಪತ್ರಿಕೆಗಳ ಎಲ್ಲಾ ಆವೃತ್ತಿಗಳ ಮುಖಪುಟದಲ್ಲಿ ಜಾಗ ಗಿಟ್ಟಿಸಿದರೆ ಕೋಮುವಾದ ವಿರೋಧಿಸಿ ಬಾಬಾ ಬುಡನ್‌ಗಿರಿಯಲ್ಲಿ, ಶ್ರೀರಂಗಪಟ್ಟಣದಲ್ಲಿ ಅಥವಾ ಬೇರೆಡೆ ಸಮಾವೇಶ ನಡೆದರೆ ಅದು ಪತ್ರಿಕೆಗಳ ಸ್ಥಳೀಯ ಆವೃತ್ತಿಯಲ್ಲಷ್ಟೆ ಬೆಳಕು ಕಾಣುತ್ತಿವೆ. ಈ ಚಳವಳಿಗಳಲ್ಲಿ ಭಾಗವಹಿಸುವ ಜಿ. ಕೆ. ಗೋವಿಂದರಾವ್, ಡಾ|| ರಹಮತ್ ತರೀಕೆರೆಯಂತಹ ಚಿಂತಕರು, ವಿದ್ವಾಂಸರಿಗಿಂತ, ಧರ್ಮದ ಹೆಸರಿನಲ್ಲಿ ಕೀಳು ರಾಜಕೀಯ ನಡೆಸುವ ತೊಗಾಡಿಯಾ ಥರದವರು ಪತ್ರಿಕೆಗಳಿಗೆ ಮುಖ್ಯವಾಗುತ್ತಾರೆ.

ಇದು ಪತ್ರಿಕೆಗಳ ಗುಣಮಟ್ಟದ ಅಧೋಗತಿಯನ್ನು ಸೂಚಿಸುತ್ತದೋ ಅಥವಾ ಈ ನಾಡಿನ ದುರಂತವನ್ನು ಸಾರುತ್ತದೋ ಎಂದು ವಿಷಾದವಾಗುತ್ತದೆ.

ಶಿವಮೊಗ್ಗ **ಸರ್ಜಾಶಂಕರ್ ಹರಳಿಮಠ**

ಅದೀಬ್ ಅಖ್ತರ್ ಅವರ 'ರಾಕ್ಷಸ' ಧರ್ಮಾಂಧತೆ, ಧರ್ಮದ ಹೆಸರಲ್ಲಿ ಆಗುತ್ತಿರುವ ಪಾಪಕೃತ್ಯವನ್ನು ಕಥಾ ರೂಪದಲ್ಲಿ ತುಂಬಾ ಚೆನ್ನಾಗಿ ಹಾಗೂ ಪರಿಣಾಮಕಾರಿಯಾಗಿ ಚಿತ್ರಿಸಿದೆ. ವಾಸ್ತವಕ್ಕೆ ಕಲ್ಪನೆಯ ಬೆಸುಗೆ ಹಾಕಿ ಬರೆಯುವ ಅವರ ಕಥಾತಂತ್ರ, ಆಂಗ್ಲ ಲೇಖಕ ಬನ್ಯನ್ ಬರೆದ 'ಪಿಲಿಗ್ರಿಮ್ಸ್ ಪ್ರೋಗ್ರೆಸ್' ನೆನಪಿಗೆ ತರುತ್ತದೆ.

ಬೆಂಗಳೂರು **ಹಾಲಾಡಿ ಮಾರುತಿ ರಾವ್**

# ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಿಗೊಂದು ಪತ್ರ

# ೨೦೦೨ರ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ಬಗೆಗೆ




ಮಾನ್ಯರೆ,

ಆರು ದಶಕಗಳಿಂದ ಪ್ರಚಲಿತವಾಗಿರುವ ನನ್ನ ಪುಸ್ತಕ ಪ್ರಕಾಶನ – ಪರಿಶ್ರಮದ ಪರಿಯನ್ನು ಎನಿತು ಪ್ರೀತಿ ವಿಶ್ವಾಸ ಅಭಿಮಾನ ಆದರಗಳಿಂದ ಗುರುತಿಸಿ, ಕನ್ನಡ ಪುಸ್ತಕ ಪ್ರಾಧಿಕಾರದ ವತಿಯಿಂದ ದಿನಾಂಕ ೧೦.೦೬.೨೦೦೩ ರಂದು ನಡೆದ ಸ್ಥಾಯಿ ಸಮಿತಿ ಸಭೆಯು ೨೦೦೨ರ ಅತ್ಯುತ್ತಮ ಪ್ರಕಾಶನ ಪ್ರಶಸ್ತಿಯನ್ನು ನನಗೆ ನೀಡಬೇಕೆಂದು ನಿರ್ಧಾರ ಮಾಡಿರುವುದಾಗಿ ತಿಳಿಸುತ್ತ, ತಾವು ಬರೆದಿರುವ ಆತ್ಮೀಯ ಪತ್ರ ನನ್ನ ಅಂತಃಕರಣವನ್ನು ಮೀಟಿ ಅದಕ್ಕೆ ಸಂವಾದಿಯಾದ ಹೃದಯಾಂತರಾಳವನ್ನು ಕಲಕಿಬಿಟ್ಟಿದೆ. ತಮ್ಮ ಈ ಸ್ನಿಗ್ಧ ಹೃದಯ ಸಂವಾದಭಾಜ ಸಹೃದಯತೆಗಾಗಿ ನನ್ನ ಹೃನ್ಮನಪೂರ್ವಕ ಧನ್ಯವಾದಗಳನ್ನರ್ಪಿಸುತ್ತಿದ್ದೇನೆ.

೧೯೪೩ರಲ್ಲಿ ಪುಸ್ತಕ ಪ್ರಕಾಶನ ಕೈಗೊಂಡಂದಿನಿಂದ ಈತನಕವೂ ನಾನು ಮಾನವತಾ ಆಶಯ, ಸಾಮಾಜಿಕ-ಸಾಮೂಹಿಕ ಸಂವೇದನಗಳನ್ನರಸುತ್ತ, ಅದಕ್ಕೆ ಪೂರಕ ವೆನಿಸುವ ಮಟ್ಟಿಗೆ ಸತತ ದುಡಿಮೆಯಿಂದ ವ್ಯಾವಹಾರಿಕ ಶಿಸ್ತನ್ನು ರೂಢಿಸಿಕೊಂಡು ಬಂದಿದ್ದೇನೆ. ನನ್ನ ಲೋಕದೃಷ್ಟಿ ಬೆಳೆದಂತೆಲ್ಲ ನಾನು ಕಂಡುಕೊಂಡ ಹೃದಯವಿದ್ರಾವಕ ಕರಾಳ ಸತ್ಯಾಂಶವೆಂದರೆ : ನಮ್ಮ ಜ್ಞಾನಪ್ರಕಾರಗಳು ತಮ್ಮ ಹೊಕ್ಕಳುಬಳ್ಳಿಯ ಸಾಮಾಜಿಕ ಪಾತ್ರನಿರ್ವಹಣದ ಪ್ರಕ್ರಿಯೆ ಯನ್ನು ಕಡಿದುಕೊಂಡು ಪರಕೀಯವಾಗಿಹೋಗಿ, ಅಮಾನವೀಕರಣದಲ್ಲಿ ಪರ್ಯವಸಾನಗೊಂಡಿರುವ, ಪರ್ಯವಸಾನಗೊಳ್ಳುತ್ತಲೇ ಮುಂದರಿಯುತ್ತಿರುವ ಕಟು ಸತ್ಯ. ಈ ನಿಟ್ಟಿನಲ್ಲಿ ಮಾನವೇತಿಹಾಸವನ್ನು ಸಾಪೇಕ್ಷಾನು ಸಂಧಾನದ ಪರಿಯಲ್ಲಿ ನೋಡುತ್ತ ಬಂದಂತೆಲ್ಲ ನನ್ನ ಒಲವು-ನಿಲವುಗಳು ಬದಲಿಸುತ್ತ ಬೆಳೆಯುತ್ತ ರೂಪುಗೊಳ್ಳುತ್ತ ಪುನರ್ನಿರ್ಮಾಣಗೊಳ್ಳುತ್ತ ಬಂದಿದೆ. ಪ್ರಕಾಶಕನಾಗಿ ನನ್ನ ಪರಿಶ್ರಮ ಈ ಪರಿಯ ಪರಕೀಯತೆ, ಅಮಾನವೀಕರಣಗಳಿಗೆ ತುತ್ತಾಗದಂತೆ ಸತತ ನಿರಂತರ ದುಡಿಮೆಯಿಂದ ನಡೆದುಕೊಂಡು ಬಂದಿದ್ದೇನೆ.

ಇಂಥ ಸಾಧನ ಪಥಕ್ಕೆ ಡಿಕನ್ಸ್, ಸ್ಕಾಟ್, ಬಾಲ್‌ಜಾಕ್, ಸ್ತೆಂಧಾಲ್, ಕ್ರಿಸ್ಟೋಫರ್ ಕಾಡ್‌ವೆಲ್, ರಾಲ್ಫ್ ಫಾಕ್ಸ್, ಅಪ್ಟನ್ ಸಿಂಕ್ಲೇರ್, ಸಿಂಕ್ಲೇರ್ ಲೂಯಿ, ಜಾಕ್ ಲಂಡನ್, ಮ್ಯಾಕ್ಸಿಂ ಗೋರ್ಕಿ, ಷೊಲೊಕೋಫ್, ಮ್ಯಾಕ್ಸ್‌ಮುಲರ್, ವಿಲ್ ದುರಾಂಟ್, ಜೆ. ಡಿ. ಬರ್ನಲ್, ಪ್ಲೇಟೋ, ಅರಿಸ್ಟಾಟಲ್, ಹೊರೇಸ್, ಲಾಂಜೈನಸ್, ಬೆಲಿನ್‌ಸ್ಕಿ, ಚೆರ್ನಿಷೇವ್‌ಸ್ಕಿ, ದೊಬ್ರೊಲ್ಯುಬೋವ್, ಪ್ಲೆಹನೋವ್, ಜಾರ್ಜ್ ಲುಕಾಸ್, ಭರತ, ಆನಂದ ವರ್ಧನ, ಭಟ್ಟನಾಯಕ, ಅಭಿನವಗುಪ್ತ, ಪಂಡಿತರಾಜ ಜಗನ್ನಾಥ, ಕೊಸಾಂಬಿ, ರಾಹುಲ್ ಸಾಂಕೃತ್ಯಾಯನ, ಪ್ರೇಮ್‌ಚಂದ್, ಮುಂತಾದ ಮಹೋದಯ ಚೇತನಗಳು ಕೈಬೀಸಿ ಕರೆಯುತ್ತ ಪಥನಿರ್ದೇಶ ಮಾಡಿದ್ದನ್ನು ನೆನೆವುದೇ ಒಂದು ರೋಮಾಂಚನದ ಅನುಭವ.

ಮಾನವ ಭವಿತವ್ಯವನ್ನು ಕುರಿತಂತೆ ಭುಗಿಲೆದ್ದ ವಿಚಾರಗಳು ಭಾವೋತ್ಕಂಠೆಯಾಗಿ ಪರಿಣಮಿಸುತ್ತಿದ್ದಂತೆಯೇ, ಆಗಸ್ಟ್ ೧೫, ೧೯೪೭ರಂದು ನಮಗೆ ಸ್ವಾತಂತ್ರ್ಯವೆಂಬ ಔಪಚಾರಿಕ ಪ್ರಜಾಪ್ರಭುತ್ವ ತನ್ನೆಲ್ಲ ಅಂತರ್ವಿರೋಧ ಬಹಿರ್ವಿರೋಧಗಳೊಡನೆ ಅವತರಿಸಿ ಬಿಟ್ಟಿತು. ಅದರ ಘಾತಕ್ಕೆ ಪ್ರತಿಕ್ರಿಯಿಸಿ ಅಂದೇ (ಆಗಸ್ಟ್ ೧೫, ೧೯೪೭ ರಂದು) 'ಪರದೆಯ ಹಿಂದೆ' ಭವಿಷ್ಯದ್ವಿಡಂಬನೆಯ ನಲವತ್ತು ಪುಟಗಳನ್ನು ಬರೆದು ಆ ವಾರದಲ್ಲೇ ಅದನ್ನು ಪೂರ್ಣಗೊಳಿಸಿದೆ. ಇದರಿಂದಾಗಿ ನಮ್ಮ ಜನಕ್ಕೆ ಏನೆಂಥ ಆತಂಕ ಕಾದಿದೆ, ಏನೆಂಥ ಇಳಿಗತಿ ಅನಿವಾರ್ಯವಾಗಿ ಬಿಟ್ಟಿದೆ ಎಂಬುದನ್ನು ಕುರಿತು ಅದಕ್ಕೆ ಬರೆದಿರುವ ನಿವೇದನದಲ್ಲಿ ಇಂತು ಪ್ರಸ್ತಾಪಿಸಿದ್ದೇನೆ :

''ಸಂಪನ್ಮೂಲಗಳು ಸಮಾಜವ್ಯವಸ್ಥೆಯಿಂದ ಪರಕೀಯವಾಗಿ, ಅವು ವ್ಯಕ್ತಿವಶವಾಗುತ್ತ ಬಂದಂತೆಲ್ಲಾ, ಮಾನವ ನಿರ್ಮಿತ ಮೌಲ್ಯಗಳೂ ಆದರ್ಶಗಳೂ ಸಹ ಸಮಾಜದಿಂದ ಪರಕೀಯವಾಗುತ್ತ ಬಂದದ್ದನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ. ಇದರಿಂದಾಗಿ ಮಾನವೇತಿಹಾಸದ ಪ್ರಗತಿಪಥ ಕುಂಠಿತವಾಗಿ, ಸಮಾಜದ ಜೀವನಾಡಿಯನ್ನು ಕಡಿದುಕೊಂಡು, ವೈಯಕ್ತಿಕ ಹಿತಾಸಕ್ತಿಗಳ ಜೇಡಜಾಲಕ್ಕೆ ಸಿಕ್ಕು, ವಿಕೃತಿಯಲ್ಲಿ ಪರ್ಯವಸಾನವಾಗುತ್ತ ಬಂದಿರುವ ಪರಿಯನ್ನೂ ಸ್ಪಷ್ಟವಾಗಿ ಕಾಣಬಹುದಾಗಿದೆ. ಎಂತಲೇ ಸಂಪನ್ಮೂಲಗಳೊಂದಿಗೆ ಮೂಲಭೂತವಾಗಿ ಸಹಜ ಸಂಬಂಧಗಳನ್ನು ಏರ್ಪಡಿಸಿಕೊಂಡಿದ್ದ ಪ್ರಾಚೀನ ಸಮಾಜದಲ್ಲಿ ಅದಮ್ಯ ಮಾನವಚೇತನ ದೈಹಿಕಶ್ರಮ ಹಾಗೂ ಬುದ್ಧಿಪೂರ್ವಕವಾದ ವಿಜ್ಞಾನ ಮತ್ತು ತಾತ್ವಿಕ ಪ್ರಜ್ಞೆಗಳಿಂದ ಬೆಳೆಸಿಕೊಂಡು ಬಂದ ಮೌಲ್ಯಗಳೂ ಆದರ್ಶಗಳೂ, ಕಾಲಕಾಲಕ್ಕೆ ಆ ಸಹಜ ಸಂಬಂಧದ ಸಮತೋಲನ ತಪ್ಪಿದಂತೆಲ್ಲಾ, ಸಮಾಜದ ಅಗತ್ಯಗಳನ್ನು ಪೂರೈಸಲು ಅಸಂಗತವೇ ಆದ ಘಟ್ಟವನ್ನು ತಲುಪಿ, ವಿಫಲವಾದವು. ಈ ವಿಕೃತಿಯ ಬೆನ್ನೇರಿ ಅದನ್ನೇ ಸ್ಥಿರಗೊಳಿಸಲು ವಿಕೃತವಾದ ಅರ್ಥಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರ, ತತ್ತ್ವಶಾಸ್ತ್ರ, ಮನೋವಿಜ್ಞಾನ, ಸೌಂದರ್ಯ ಮೀಮಾಂಸೆ ಮುಂತಾದುವು ಬೆಳೆದು ಒಂದು ಮಿಥ್ಯಾ ಜಾಲವನ್ನೇ ಸೃಷ್ಟಿಸಿದಂತಾಯಿತು. ಔಪಚಾರಿಕ ರಾಜಕೀಯ ಸ್ವಾತಂತ್ರ್ಯದ ಉಗಮದಿಂದಾಗಿ ಈ ವಿಕೃತಿಗೆ ಅಧಿಕೃತ ಮುದ್ರೆ ಒತ್ತಿದಂತಾಯಿತು.

''ವ್ಯಕ್ತಿ ಸ್ವಾತಂತ್ರ್ಯ ಹಾಗೂ ವ್ಯಕ್ತಿಯ ಮೂಲಭೂತ ಹಕ್ಕುಗಳ ಆಧಾರದ ಮೇಲೆ ರಚಿತವಾದ ಪ್ರಜಾಪ್ರಭುತ್ವದ ರಾಜ್ಯತಂತ್ರ ಪರಿಣಾಮದಲ್ಲಿ ಎಸಗಿದ್ದಾದರೂ ಏನು ? ಸಮಾಜದ ಸಂಪನ್ಮೂಲಗಳೊಂದಿಗೆ ದ್ಯೂತವಾಡಲು ವ್ಯಕ್ತಿಗೆ ಅದು ಸ್ವಚ್ಛಂದ ಸ್ವಾತಂತ್ರ್ಯ ಕೊಟ್ಟಿತು. ಆಸ್ತಿಯ ಹಕ್ಕು, ಉದ್ಯಮ ನಡೆಸುವ ಹಕ್ಕು ಮುಂತಾದವುಗಳನ್ನು ದೈವದತ್ತವಾದ, ಅವಿಭಾಜ್ಯವಾದ ಹಕ್ಕುಗಳೆಂದು ಘೋಷಿಸಿ, ಅವುಗಳನ್ನು ಸಂರಕ್ಷಿಸುವ ಸಲುವಾಗಿಯೇ ಸಂವಿಧಾನವನ್ನು ರಚಿಸಿತು, ಕಾನೂನು ಕಟ್ಟಲೆಗಳನ್ನು ನಿರ್ಮಿಸಿತು, ಅರ್ಥ ವ್ಯವಸ್ಥೆಯನ್ನು ಬೆಳೆಸಿತು.

''ಒಂದು ಕಾಲಕ್ಕೆ ಸಂಪನ್ಮೂಲಗಳು ಸಮಾಜದ ಅವಿಭಾಜ್ಯ ಸ್ವತ್ತಾಗಿದ್ದಾಗ, ಅವುಗಳನ್ನು ಅಂದಿನ ಸಮಾಜ ದೇವರೆಂದು ಕರೆದು ಮನ್ನಣೆ ನೀಡಿತು. ಆದರೆ ಆ ದೈವದ ಕಲ್ಪನೆಯನ್ನೇ ಮುಂದೂಡಿ, ಪ್ರಜಾಪ್ರಭುತ್ವದ ಸಂವಿಧಾನವನ್ನು ದೈವದತ್ತವೆಂದು ಕರೆದು, ಸಂಪನ್ಮೂಲಗಳನ್ನು ವ್ಯಕ್ತಿಯ ನಿರಂಕುಶ ಯಾಜಮಾನ್ಯಕ್ಕೊಪ್ಪಿಸಿ, ಪ್ರಜಾಪ್ರಭುತ್ವದ ರಾಜ್ಯತಂತ್ರವು ಸಾಮಾಜಿಕ ವಿಕೃತಿ ಹಾಗೂ ಅವನತಿಯ ಚಾಲಕಯಂತ್ರವೇ ಆಗಿಹೋಯಿತು. ಸಂಪನ್ನ ವ್ಯಕ್ತಿಗಳು ಪ್ರಜಾಪ್ರಭುತ್ವದ ಸಂವಿಧಾನದಿಂದ ಅಧಿಕೃತವಾಗಿ ಮಾನ್ಯತೆ ಪಡೆದ ಸಮಾಜದ ಜೇಬುಗಳ್ಳರೇ ಆಗುವಂತಾಯಿತು. ಇಂಥ ಸಮಾಜ ಅಂತರ್ವಿರೋಧ ಬಹಿರ್ವಿರೋಧಗಳಿಂದ ತುಂಬಿ ನಿರಂತರವಾಗಿ ಸಾಮಾಜಿಕ ಸಮಸ್ಯೆಗಳನ್ನು ಸೃಷ್ಟಿಮಾಡುವ, ಮಾನವೀಯತೆಯನ್ನು ಸಂಪೂರ್ಣವಾಗಿ ಧಿಕ್ಕರಿಸುವಂಥ ಒಂದು ಪ್ರಬಲ ಯಂತ್ರವೇ ಆಯಿತು.

''ಇಂಥ ಸಮಾಜ ವ್ಯವಸ್ಥೆಯಲ್ಲಿ ವ್ಯಕ್ತಿಯ ಮೂಲಭೂತ, ಪ್ರಧಾನ ಸಂಬಂಧವು ತನ್ನ ಲಾಭ ಅಥವಾ ತನ್ನ ಸ್ವಂತ ಹಿತಾಸಕ್ತಿಯ ಕಲ್ಪನೆಯೊಂದಿಗೆ ಹಾಸುಹೊಕ್ಕಾಗಿ, ಸಾಮಾಜಿಕ ಆನ್ವಯಿಕ ಮರ್ಯಾದೆಯನ್ನು ಪೂರ್ಣವಾಗಿ ಕಳೆದುಕೊಳ್ಳುವಂತಾಯಿತು. ಉಳಿದೆಲ್ಲ ಮೌಲ್ಯಗಳೂ ಅದಕ್ಕೆ ಪೂರಕ ಸ್ಥಾನದಲ್ಲಿ ನಿಲ್ಲುವಂತಾಯಿತು. ವ್ಯಕ್ತಿ-ವ್ಯಕ್ತಿಯ ನಡುವಣ ಮಾನವೀಯ ಸೂತ್ರಗಳಾದ ಪ್ರೀತಿ, ವಿಶ್ವಾಸ, ಅಂತಃಕರಣ ಮುಂತಾದ ಎಲ್ಲ ಮೌಲ್ಯಗಳೂ ವೈಯಕ್ತಿಕ ಹಿತಾಸಕ್ತಿಯ ತಕ್ಕಡಿಯಲ್ಲಿ ತೂಗಿ ತೂರಿಬಿಡುವ ಮೌಲ್ಯಗಳಾದುವು. ಮಾನವ ಬೆಳೆಸಿಕೊಂಡುಬಂದ ವಿಜ್ಞಾನ, ತಂತ್ರಜ್ಞಾನ, ತಾತ್ವಿಕ ವಿವೇಕ ಇವೆಲ್ಲವೂ ತಮ್ಮ ಸಾಮಾಜಿಕ ಪ್ರಕ್ರಿಯೆಯನ್ನು ಕಳೆದುಕೊಂಡು ವೈಯಕ್ತಿಕ ಆಮಿಷಗಳ ಪೆಡಂಭೂತವನ್ನು ತಣಿಸುವ ಮಾರುಕಟ್ಟೆಯ ಮೌಲ್ಯಗಳಾದುವು. ಈ ಪರಿಸರದಲ್ಲಿ, ದಿಸೆಯಲ್ಲಿ ಎಲ್ಲ ವ್ಯಕ್ತಿಗಳೂ ತಮ್ಮ ದಿನನಿತ್ಯದ ದೈಹಿಕ ಹಾಗೂ ಬುದ್ಧಿಪೂರ್ವಕ ಶ್ರಮವನ್ನು ವಿನಿಯೋಗಿಸ ತೊಡಗಿದರೆಂದಮೇಲೆ, ಇದರ ಒಟ್ಟು ಪರಿಣಾಮ ಸಮಾಜಕಂಟಕವಾದ ವಿರೋಧಾಭಾಸಗಳನ್ನು ಸೃಷ್ಟಿ ಮಾಡುವುದೇ ಆಯಿತು. ಇದರಿಂದಾಗಿ ಶಾಖೋಪಶಾಖೆ ಯಾಗಿ ಬೆಳೆದ ಸಾಮಾಜಿಕ ಸಮಸ್ಯೆಗಳನ್ನು ನೈಜ ಸಮಸ್ಯೆಗಳೆಂದು ಸಾರುವ ಶಾಸ್ತ್ರಗಳು ಹುಲುಸಾಗಿ ಬೆಳೆದು, ಅವುಗಳ ಪರಿಹಾರದಲ್ಲಿ ತೊಡಗಿದುದು ನೆರಳಿನೊಂದಿಗೆ ಗುದ್ದಾಡುವಂಥ ಸಮಾಜಕಂಟಕ ಮಿಥ್ಯಾಪರಿಹಾಸವೇ ಆದಂತಾಯಿತು. ಹೀಗಾಗಿ ಮಾನವ ಬೆಳೆಸಿಕೊಂಡು ಬಂದ ಅಪಾರವಾದ ಜ್ಞಾನಸಂಪತ್ತು ನಿರ್ಬಾಧಿತವಾಗಿ ಪೋಲಾಗಲು, ದುರ್ವ್ಯಯವಾಗಲು ಎಲ್ಲ ಬಾಗಿಲುಗಳನ್ನೂ ವಿಧ್ಯುಕ್ತವಾಗಿ ತೆರೆದಂತಾಯಿತು.''

ಈ ಸಮಾಜಕಂಟಕ ಪ್ರಕ್ರಿಯೆಯ ಘೋರ ಪರಿಣಾಮವೆಂದರೆ: ಸ್ವರೂಪ ಸ್ವಭಾವ ಚೈತನ್ಯಗಳ ಆತ್ಮ ಪ್ರತ್ಯಯವನ್ನೇ ಕಳೆದುಕೊಂಡ ಸಮುದಾಯದ 'ಅವಸಾನ': ಈ ಸಮುದಾಯದ ಭಾವನೆಗಳಿಗೆ ಬದುಕು-ಬವಣೆಗಳ ಬಗೆಗೆ ಸ್ವಲ್ಪವೂ ಸ್ಪಂದಿಸದಂಥ ಆಡಳಿತದ ಆಘಾತಗಳ ಸರಮಾಲೆಯ ನಿರಂಕುಶ 'ಅಸ್ತಿತ್ವ.'

**"ಮಾನವ ಸಮಾಜ ಎರಡು ಭಾಗಗಳಲ್ಲಿ ಹಂಚಿ ಹೋಗಿದೆ. ದೊಡ್ಡ ಭಾಗ ಸಾಯುವವರದ್ದು, ನಾಶ ಹೊಂದುವವರದ್ದು. ಚಿಕ್ಕ ಭಾಗ ತಮ್ಮ ಶಕ್ತಿ ಮತ್ತು ಪ್ರಭಾವದಿಂದ ದೊಡ್ಡ ಸಮುದಾಯವನ್ನು ತಮ್ಮ ವಶದಲ್ಲಿರಿಸಿಕೊಂಡಿರುವವರದ್ದು."**

ಪ್ರೇಮ್‌ಚಂದರ ನಿರಾಡಂಬರ ಗದ್ಯದ, ಸಾಧಾರಣ ಬುದ್ಧಿಯ ಸಾಮಾನ್ಯ ವಿವೇಕದ, ಸರಳ ನೇರ ಜೀವನಾನುಭವದ ಈ ಮಾತುಗಳಲ್ಲಿ ಇಂದಿನ ಮಹಾಕಾವ್ಯದ ರಿಂಗಣವನ್ನೇ ಗುರುತಿಸಬಲ್ಲ ಮಾನವತಾ ಆಶಯ ಅದೆಂತು ಮುಖ ಮರೆಸಿಕೊಂಡುಬಿಟ್ಟಿದೆ!

ಜ್ಞಾನ, ಪರಿಶ್ರಮ, ಕಾಯಕ ಇವೆಲ್ಲ ತಮ್ಮ ಸಾಮಾಜಿಕ ಪಾತ್ರನಿರ್ವಹಣದಿಂದ ಪರಕೀಯಗೊಂಡು ಅಮಾನವೀಕರಣದಲ್ಲಿ ಪರ್ಯವಸಾನಗೊಂಡುಬಿಟ್ಟಿದೆಯಲ್ಲ! ಅಂತರ್ವಿರೋಧ ಬಹಿರ್ವಿರೋಧಗಳಿಂದ ತುಂಬಿ ತೂಗಾಡುತ್ತಿರುವ ಈ ಸಂಧಿಕಾಲವೇ ಇಂದಿನ ಸಂದರ್ಭದಲ್ಲಿ ಮಹಾಕಾವ್ಯಕ್ಕನುವಾದ ವಸ್ತುಸ್ಥಿತಿಯಾಗಿಬಿಟ್ಟಿಲ್ಲವೆ!

ಮಾನವ ಬೆಳೆಸಿಕೊಂಡು ಬಂದಿರುವ ಅಪಾರವಾದ ಜ್ಞಾನಸಂಪತ್ತು ಮತ್ತು ಮೌಲ್ಯಗಳು ಅದೇಕೆ ನಮ್ಮ ಬದುಕಿಗೆ ಅಸಂಗತವಾಗಬಿಟ್ಟಿವೆ, ಮಾರಕವಾಗಿಬಿಟ್ಟಿವೆ ಎಂಬುದೇ ನಮ್ಮ ಲೇಖಕರ ಮುಂದಿರುವ ಪ್ರಶ್ನೆಯಾಗಿರುತ್ತದೆ. ಈ ಪ್ರಶ್ನೆಯನ್ನು ಬಿಡಿಸಲು ವಸ್ತುಸ್ಥಿತಿಯನ್ನೂ ಸನಾತನವಾಗಿ ಪ್ರವಹಿಸುತ್ತ ಬಂದಿರುವ ಅದಮ್ಯ ಮಾನವ ಚೇತನವನ್ನೂ ಗುರುತಿಸುವುದೇ ಸೃಜನಶೀಲ ಸಾಹಿತ್ಯದ ಇಂದಿನ ಅಗತ್ಯವಾಗಿರುತ್ತದೆಯಲ್ಲವೆ?

ಇತಿಹಾಸದ ಮಜಲುಗಳಲ್ಲಿ ಪ್ರಗತಿಯ ಕೊಂಡಿ ಕಳಚಿಕೊಂಡಿದ್ದೆಂತು, ಅದನ್ನು ಮತ್ತೆ ಕೂಡಿಸಿ ಪ್ರಗತಿಪಥದಲ್ಲಿ ಹೂಡುವುದು ಹೇಗೆ ಎಂಬುದೇ ಇಂದಿನ ಲೇಖಕನ ಮುಂದಿರುವ ಸಾಪೇಕ್ಷ ಪ್ರಶ್ನೆಯಾಗಿರುತ್ತದೆ.

ಪ್ರಕೃತಿಯಲ್ಲಿ ಸಹಜ ಕ್ರಿಯಾಶೀಲ ಸಂಗತಿಯಾಗಿರುವ ಪ್ರಗತಿಸೂತ್ರ ಪ್ರಕೃತಿಯ ಒಂದು ಭಾಗವೇ ಆದ ಮಾನವ ಕುಲದ ಸಾಮೂಹಿಕ ಚೇತನದಲ್ಲಿ ಜೀವಂತವಾಗಿದೆ ಎಂಬುದನ್ನು ಗಮನಿಸುವುದು ಅಗತ್ಯವಾಗಿರುತ್ತದೆ. ಇದನ್ನು ವಸ್ತುಸ್ಥಿತಿಯಲ್ಲಿ ವಿವೇಚಿಸಬೇಕೇ ಹೊರತು, ಅಲೌಕಿಕ ವಿಚಾರಗಳಿಂದ ವಸ್ತುಸ್ಥಿತಿಯ ತೋರ್ಕೆಯ ಮೇಲ್ಪದರದಲ್ಲಿ ಕಾಣುವ ವಿಕೃತಿಗೆ ಶರಣಾಗುವುದು ಸಲ್ಲ ಎಂಬ ಅರಿವು ಮೂಡಬೇಕಾಗುತ್ತದೆ.

ಇಂಥ ಐತಿಹಾಸಿಕ ಪ್ರಜ್ಞೆಯ ಸಾಧನಪಥದಲ್ಲಿ ಪ್ರಕಾಶಕನಾಗಿ ನನ್ನ ಪರಿಶ್ರಮವನ್ನು ನಿರಂತರ ತೊಡಗಿಸಿಕೊಂಡು ಬಂದಿದ್ದೇನೆ. ಇಂಥ ಪದಾರ್ಪಣದಲ್ಲಿ ಆನಂದದ ಕ್ಷಣಗಳನ್ನು ಕಂಡಿದ್ದೇನೆ; ಉತ್ಕಂಠೆ, ಕಳಕಳಿ ತೊಳಲಾಟಗಳ ಸುಮಧುರ ಯಾತನೆಯನ್ನೂ ಅನುಭವಿಸುತ್ತ ಬಂದಿದ್ದೇನೆ. ಇವೆಲ್ಲ ಜನ್ಮ ಸಾಫಲ್ಯದ ಕ್ಷಣಗಳು ತಾನೆ! ಇದು ಪ್ರಶಸ್ತಿಯ ಪ್ರಮಾದಕ್ಕೆ ಹೇಗೆತಾನೆ ದಾರಿ ಆದೀತು!

ಹೀಗಾಗಿ ತಾವು ಪ್ರಸ್ತಾಪಿಸಿರುವ ಪ್ರಶಸ್ತಿಯನ್ನು ನಾನು ಪಡೆದುಕೊಳ್ಳುವಂತಿಲ್ಲ, ಪಡೆದುಕೊಳ್ಳಲಾರೆ. ಕ್ಷಮಿಸಿ.

ಕೊನೆಯದಾಗಿ, ಪ್ರಸ್ತುತವಾಗಬಹುದಾದ ಒಂದು ವಿಚಾರವನ್ನು ತಮ್ಮೊಂದಿಗೆ ಹಂಚಿಕೊಳ್ಳಲಪೇಕ್ಷಿಸುತ್ತೇನೆ:

ಭಾಷೆ ಸಾಧನವೇ ಹೊರತು ಸಾಧ್ಯವಲ್ಲ ಎಂಬುದು ದಿಟ ತಾನೆ! ಸಾಹಿತ್ಯದ ಸಾರ್ವತ್ರಿಕ ಸಾರ್ವಕಾಲಿಕ ಭಾಷೆಯಾದರೋ ವಿಶ್ವವ್ಯಾಪಿ ಮಾನವತಾ ಆಶಯದ ಸೆಲೆಯೇ ಆಗಿರುತ್ತದೆಯಲ್ಲವೆ? ಇಂಥ ಜಗದಗಲ ಮಾನವತಾ ಆಯಾಮಗಳು ನಮ್ಮ ಸಾಹಿತ್ಯದ ಉಸಿರಾಗುವಂತಾಗಲಿ; ಈ ದಿಸೆಯಲ್ಲಿ ಕನ್ನಡ ಸಾಹಿತ್ಯದ ಯೋಗಕ್ಷೇಮದ ಹೊಣೆ ಹೊತ್ತು ಸಂವಹಿಸುತ್ತಿರುವ ಅಂಗಸಂಸ್ಥೆಗಳು ಕಾರ್ಯೋನ್ಮುಖವಾಗಲಿ ಎಂದು ಕಳಕಳಿಯಿಂದ ಹಾರೈಸುತ್ತೇನೆ.

ಮತ್ತೊಮ್ಮೆ ತಮ್ಮ ಆತ್ಮೀಯ ಸಹೃದಯಸ್ಪಂದನಕ್ಕಾಗಿ ನನ್ನ ಧನ್ಯವಾದಗಳನ್ನರ್ಪಿಸುತ್ತ, ವಿರಮಿಸುತ್ತಿದ್ದೇನೆ.

ಇಂತು, ತಮ್ಮ ವಿಶ್ವಾಸದ

ಪ್ರಕಾಶಕರು, ೧೪೯೮/೧, **ಡಿ. ವಿ. ಕೆ. ಮೂರ್ತಿ**
ಕೃಷ್ಣಮೂರ್ತಿಪುರ
ಮೈಸೂರು - ೫೭೦ ೦೦೪

---

ಆಗಸ್ಟ್ ತಿಂಗಳ 'ಹೊಸತು' ಎಂದಿನ ಸುಂದರ ರಕ್ಷಾಪುಟದಲ್ಲಿ ನಮ್ಮ ನೆಮ್ಮದಿಯ ನಾಳೆಯನ್ನೂ, ಎಲ್ಲ ನೋವುಗಳ ಮಧ್ಯದಲ್ಲಿ ಇರುವ ಬದುಕಿನ ತೃಪ್ತಿ ಸಂತಸಗಳನ್ನೂ ಚೀರಿ ಹೇಳುವಂತಿದ್ದ ಈ ಎಳೆಯ ಜೀವವನ್ನು ಕಂಡಾಗ ಮನಸ್ಸಿಗೆ ನೆಮ್ಮದಿ ಅನ್ನಿಸಿತು. 'ಬಿಸಿಯೂಟ' ಸೃಷ್ಟಿಸಿದ ಅವಘಡಕ್ಕೆ ಸ್ವತಃ ಮುಖ್ಯಮಂತ್ರಿ ನರಗುಂದಕ್ಕೆ ಬಂದು ಹೋದರು. 'ಈ ತಿಂಗಳು' ವಿನಲ್ಲಿ ನೀವು 'ಬಿಸಿಯೂಟ' ನೀಡುವ ಸರಕಾರದ ನಿರ್ಧಾರವನ್ನು ಸಮರ್ಥಿಸಿದ್ದಕ್ಕೆ ನನ್ನದೂ ಬೆಂಬಲವಿದೆ. ನಾನು ಕನ್ನಡಶಾಲೆಗೆ ಹೋಗುತ್ತಿದ್ದಾಗ ಊಟಕ್ಕೆಂದು ಮನೆಗೆ ಬಂದಾಗ ಎಷ್ಟೋ ಸಾರಿ ಅರ್ಧ ರೊಟ್ಟಿ ಹಾಗೂ ಖಾರಾ ತಿಂದು ಊಟವಾಯಿತೆಂದು ಭಾವಿಸಿಕೊಂಡು ಶಾಲೆಗೆ ಮರಳುತ್ತಿದ್ದೆ. ನನ್ನೂರಿನಲ್ಲಿ ನನ್ನಂಥವರೇ ಹೆಚ್ಚಿದ್ದರು. ಆಗ ನನಗೇನಾದರೂ ಶಾಲೆಯಲ್ಲಿ 'ಬಿಸಿಯೂಟ' ಸಿಕ್ಕಿದ್ದರೆ ಅಂತ ಕಲ್ಪಿಸಿಕೊಂಡರೆ, ನಿಜವಾಗಿಯೂ ಈ ಯೋಜನೆ ಇಂದಿನ ಬಡಮಕ್ಕಳ ಶೈಕ್ಷಣಿಕ-ಬೆಳವಣಿಗೆಗೆ ಸಹಕಾರಿಯಾಗಿದೆಯೆಂಬುದರಲ್ಲಿ ಎರಡು ಮಾತಿಲ್ಲ. ಆ ಅರ್ಧ ರೊಟ್ಟಿಯೂ ಸಿಗದ ಸಂದರ್ಭ ಎದುರಾದಾಗ ಸಹಜವಾಗಿ ಶಾಲೆಯಲ್ಲಿರಬೇಕಾದ ಮಕ್ಕಳು ಹೊಲ ಸೇರುತ್ತವೆ. ಕೂಲಿನಾಲಿಗೆ ಹೋಗಲೇಬೇಕಾಗುತ್ತದೆ. 'ಬಿಸಿಯೂಟ' ಯೋಜನೆಯಿಂದ ಸಮಸ್ಯೆಗಳು ಸೃಷ್ಟಿಯಾಗಿರುವುದಕ್ಕೆ ಸರಿಯಾದ ಪೂರ್ವಸಿದ್ಧತೆ, ಪ್ರಾಮಾಣಿಕ ಪ್ರಯತ್ನ, ಸರಕಾರಿ ಅಧಿಕಾರಿಗಳ ಬದ್ಧತೆಗಳ ಕೊರತೆಗಳು ಕಾರಣವೇ ಹೊರತು ಆ ಯೋಜನೆ ಅಲ್ಲ. ಬಡವರ ಮಕ್ಕಳು ಏನಾದರೂ ತಿನ್ನುತ್ತಾರೆಂದು ನಯವಂಚಕತನದಿಂದ ಭಾವಿಸಿ ಅಧಿಕಾರಿಗಳು ಹಾಗೂ ಸರಕಾರ ಮುಗ್ಗಿದ, ಹುಳಹಿಡಿದ ವಿಷಪೂರಿತ ಕಾಳನ್ನು ಅಡಿಗೆ ಮಾಡಿ ಉಣ್ಣಿಸುತ್ತಿರುವುದು ಅಮಾನವೀಯತೆಯಲ್ಲವೇ? ಈ ಯೋಜನೆಯನ್ನು ಸರಿಯಾಗಿ ಕಾರ್ಯಗತಗೊಳಿಸುವ ಬಗ್ಗೆ ಸರಕಾರ ಗಂಭೀರವಾಗಿ ಚಿಂತಿಸಬೇಕಿದೆ. ಕೂಡಿ ಉಣ್ಣುವುದರ ಮೂಲಕ ಜಾತಿಮತ ಪಂಥಗಳ ಭಾವನೆಯಿಂದ ನಮ್ಮ ಮಕ್ಕಳು ಮುಕ್ತರಾಗಲು ಕೂಡ ಇದೊಂದು ಸದವಕಾಶ. ಆದರೆ ಮುಂದಿನ ಚುನಾವಣೆಯನ್ನು ದೃಷ್ಟಿಯಲ್ಲಿಟ್ಟು ಕೊಂಡು ಕೇವಲ ಅಗ್ಗದ ಪ್ರಚಾರಕ್ಕಾಗಿ ಆಡಳಿತ ನಡೆಸುವವರು ಇಂಥ ಯೋಜನೆಯನ್ನು ಜಾರಿಗೆ ತಂದರೆ ಅವಘಡಗಳು ಸಹಜವಾಗಿ ಸಂಭವಿಸುತ್ತವೆ. ಅದೇ ಚುನಾವಣೆಯ ದೃಷ್ಟಿಯಿಂದ ವಿರೋಧ ಪಕ್ಷಗಳು ಈ ಯೋಜನೆಯಿಂದುಂಟಾದ ಸಮಸ್ಯೆಗಳನ್ನೇ ದೊಡ್ಡದು ಮಾಡಿ ಪ್ರಚಾರ ಪಡೆಯುತ್ತಿವೆ. 'ಬಿಸಿಯೂಟ ಯೋಜನೆ' ಅನಗತ್ಯವೆಂಬ ಅಭಿಪ್ರಾಯ ಸಾರ್ವಜನಿಕವಾಗಿ ಪ್ರತಿಷ್ಠಾಪನೆಗೊಳ್ಳುತ್ತಿರುವ ಸಂದರ್ಭದಲ್ಲಿ ನಿಮ್ಮ ಸ್ಪಷ್ಟ ನಿಲುವು ಸ್ವಾಗತಾರ್ಹವಾದದ್ದು. ಬಡವರಿಗೆ ಅನ್ನ ಹಾಗೂ ಅಕ್ಷರ ನೀಡುವುದು ಎಲ್ಲ ಪಕ್ಷಗಳ ಪ್ರಣಾಳಿಕೆಯ ಮೊದಲ ಅಂಶವಾಗಬೇಕಿದೆ.

ನರಗುಂದ **ಎಂ. ಡಿ. ಒಕ್ಕುಂದ, ಡಾ|| ವಿನಯಾ**

**ಜುಲೈ ಸಂಚಿಕೆ**

ಶ್ರೀ ಪ್ರಭಾಕರರ 'ಗೋವಿನ ಗೀತೆ' ಲೇಖನ ಮಾರ್ಮಿಕವಿದೆ. ಮಾನವಧರ್ಮ ಪ್ರಕೃತಿಧರ್ಮ ವಿಷಯ ವಿಶ್ಲೇಷಿಸಿ ನೋಡುವ ಅಗತ್ಯವಿದೆ. ಮಾನವಧರ್ಮ ಎಂಬಲ್ಲಿ 'ಮಾನವೀಯ' ಎಂದರೆ ಕರುಣೆ, ಸಾತ್ವಿಕ ವರ್ತನೆ ಎಂಬರ್ಥವನ್ನೇ ಗಣಿಸುವುದು ರೂಢಿ. ಅದು ಅಷ್ಟು ಸರಿಯಲ್ಲವೆನ್ನಿಸುತ್ತದೆ. ಮಾನವ ಸ್ವಭಾವ ದ್ವಿಮುಖವಾದುದು – ಎರಡೂ ಮಾನವೀಯವೇ. ನಮ್ಮ ಸಮಾಜದಲ್ಲಿ ಎರಡೂ ಬಗೆಯ ಸ್ವಭಾವ, ವರ್ತನೆಯ ವ್ಯಕ್ತಿಗಳಿರುವುದು ನಿಚ್ಚಳ. ಶಿಷ್ಟ ಮತ್ತು ದುಷ್ಟ ಎಂಬ ಶಬ್ದಗಳು ಮಾನವ ಕುಲದಲ್ಲಿನ ಈ ಎರಡು ಬಗೆಗಳನ್ನು ಸ್ಪಷ್ಟಗೊಳಿಸಬಲ್ಲವು. ಈ ಎರಡು ಬಗೆಯ ವರ್ತನೆಗಳು, ವ್ಯಕ್ತಿಗಳು ಬಹುಶಃ ದೇಶ ಕಾಲಾತೀತವಿರುವಂತೆ ತೋರುತ್ತದೆ. ದುಷ್ಟವರ್ಗದಲ್ಲೂ ಶಿಕ್ಷಣ, ಆದರ್ಶ ನಡಾವಳಿ, ಶಿಕ್ಷಾ ಭಯಗಳ ಮೂಲಕ ಪ್ರಯತ್ನ ಅನೇಕರಲ್ಲಿನ ಪರಿವರ್ತನೆಗೆ ಸಾಧ್ಯವಾಗಬಹುದು; ಆದರೆ, ಇತರರಲ್ಲಿ ಪ್ರಯತ್ನ ಫಲಿಸದು. ನಿತ್ಯಜೀವನದಲ್ಲಿ ಈ ಅಂಶ ನಿಚ್ಚಳ.

ಮಾನವನಲ್ಲಿ ಗಮನಿಸುವ ಸಹಜ ಸ್ವೇಚ್ಛಾ ಪ್ರವೃತ್ತಿ ಇತರ ಪ್ರಾಣಿಗಳಲ್ಲಿ ಕಾಣದು. ಅವು ಪ್ರಕೃತಿ ನಿಯಮಾನುಸಾರವೇ ವರ್ತಿಸುತ್ತವೆ. ಮಾನವ ಪ್ರಾಣಿಯ ಹೆಚ್ಚುಗಾರಿಕೆ-ವಿಶೇಷತೆ ಎಂದರೆ ತತ್ತ್ವದೃಷ್ಟಿ, ಚರ್ಚೆಗಳ ಮುಖಾಂತರ ತೂಗಿನೋಡುವ ರೀತಿ, ನಿಯಮಗಳ ರಚನೆ (ಅವನ್ನು ಪಾಲಿಸಲಿ, ಬಿಡಲಿ) ಇತ್ಯಾದಿ. ಪಾಪ! ಇತರ ಪ್ರಾಣಿಗಳಿಗೆ ಇದು ಅಸಾಧ್ಯ.

ಮಾನವಧರ್ಮ ಪ್ರಕೃತಿಧರ್ಮಗಳೆರಡು, ಹಾಗೆ ನೋಡಿದರೆ, ಅಸ್ಥಿರವೆಂದೇ ಹೇಳಬೇಕಾಗುತ್ತದೆ.

ಸಾಗರ **ಬ. ನಾ. ರಘುರಾಮ**

೫ನೇ ಪುಟದಿಂದ

ಸ್ಪಷ್ಟವಾದ ಪರಿಕಲ್ಪನೆಯನ್ನು ಸಾರ್ವಜನಿಕರಿಗೆ ತಿಳಿಯಪಡಿಸದೆ ಇರುವುದರಿಂದ ಇಂಥ ಗೊಂದಲಗಳು ಉಂಟಾಗುತ್ತಿವೆ. ಸರಕಾರ ಮೊದಲು ಕರಡು ರೂಪದಲ್ಲಿ ತನ್ನ ಪರಿಕಲ್ಪನೆಯನ್ನು ಜನರಿಗೆ ಸ್ಪಷ್ಟಪಡಿಸಬೇಕು. ಇಂದು ಎಲ್ಲ ಧರ್ಮಗಳೂ ತಾರತಮ್ಯವನ್ನಾಧರಿಸಿದ ಹಲವಾರು ಆಚರಣೆಗಳನ್ನು ಹೊಂದಿವೆ. ಆದ್ದರಿಂದ ಈ ತಾರತಮ್ಯವನ್ನು ನಿವಾರಿಸುವಂತಹ ಜಾತ್ಯಾತೀತ ಗುಣಲಕ್ಷಣ ಈ ಸಂಹಿತೆಯ ಮೂಲ ಉದ್ದೇಶವಾಗಿರಬೇಕು. ಈ ಕರಡನ್ನು ಸಿದ್ಧಪಡಿಸುವಾಗ ಎಲ್ಲ ಧರ್ಮದ ಪ್ರತಿನಿಧಿಗಳು, ಮಹಿಳಾ ಸಮಾಜಕಾರ್ಯಕರ್ತರು ಮತ್ತು ಜನಮತ ಮೂಡಿಸಬಲ್ಲ ವಿವಿಧ ರಂಗದ ಪ್ರತಿಷ್ಠಿತರು ಇರಬೇಕು. 'ಧರ್ಮದ ಪ್ರತಿನಿಧಿ'ಗಳು ಎಂದ ತಕ್ಷಣ ಅವರು ಧಾರ್ಮಿಕ ಮುಖಂಡರಾಗಿರದೆ, ಆ ಧರ್ಮಗಳ ಪ್ರಗತಿಪರ ಚಿಂತಕರಾಗಿರಬೇಕಾದದ್ದು ತೀರ ಅವಶ್ಯಕ. ಅಂತಹ ಸರ್ವರಿಗೂ ನ್ಯಾಯ ಒದಗಿಸಬಲ್ಲ ಕರಡು ಸಿದ್ಧವಾದರೆ ಅದರ ಅನುಷ್ಠಾನಕ್ಕಾಗಿ ಒಂದು ಚಳುವಳಿಯನ್ನು ನಡೆಸಲು ಪ್ರಗತಿಪರರು ನೇತೃತ್ವ ವಹಿಸಬೇಕು.

ಇತ್ತೀಚಿನ ವರ್ಷಗಳಲ್ಲಿ ಹಿಂದೂ ಕೋಮುವಾದಿಗಳು ಗುಜರಾತ್, ಅಯೋಧ್ಯಾ, ಭಾಗಲ್ಪುರಗಳಲ್ಲಿ ನಡೆಸಿದ ದಾಂಧಲೆ, ಅಲ್ಪಸಂಖ್ಯಾತರನ್ನೇ ಗುರಿಯಾಗಿಟ್ಟುಕೊಂಡು ನಡೆಸಿದ ಕೋಮುಗಲಭೆಗಳು ಮತ್ತು ಅವುಗಳನ್ನು ಸಮರ್ಥಿಸಿಕೊಳ್ಳುವ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ನೀತಿಯಿಂದ ಬೆಚ್ಚಿಬಿದ್ದು ಏಕರೂಪ ನಾಗರಿಕ ಸಂಹಿತೆಯೆಂದರೆ ಬಹುಸಂಖ್ಯಾತರ ಧಾರ್ಮಿಕ ಕಾನೂನನ್ನು ಎಲ್ಲರಿಗೂ ವಿಸ್ತರಿಸಬೇಕೆಂಬ ಆಗ್ರಹದ ಹುನ್ನಾರವೆಂದು ಜನಾಭಿಪ್ರಾಯ ಮೂಡುವುದು ಸಹಜ. ಹಾಗೆಯೇ ಏಕರೂಪದ ಸಿವಿಲ್ ಸಂಹಿತೆಗೆ ಆದೇಶ ನೀಡುತ್ತಿರುವ ಸುಪ್ರೀಂ ಕೋರ್ಟು ಕೂಡ ಹಲವಾರು ಸಂದರ್ಭಗಳಲ್ಲಿ ಜಾತಿ, ಧರ್ಮಗಳಿಗೆ ಸಂಬಂಧಪಟ್ಟಂತೆ ವಿಶ್ವಾಸಾರ್ಹವಾದ ತೀರ್ಪನ್ನೇನೂ ನೀಡಿಲ್ಲ. ಭಾಂವ್ರಿದೇವಿ ಪ್ರಕರಣ ಮತ್ತು ಇತ್ತೀಚಿನ ಗುಜರಾತ್ ಗಲಭೆಗೆ ಸಂಬಂಧಿಸಿದ ಪ್ರಕರಣಗಳು ಇಂತಹ ಅಭಿಪ್ರಾಯವನ್ನು ದೃಢಪಡಿಸುತ್ತವೆ. ಆದರೆ ಇಂತಹ ಎಲ್ಲಾ ಪ್ರತಿರೋಧಗಳ ವಿರುದ್ಧ ಹೋರಾಡಬಲ್ಲ ಪ್ರತಿಚಳುವಳಿಯೊಂದು ಈಗ ತುರ್ತಾಗಿ ನಡೆಯಬೇಕಾಗಿದೆ. ಏಕರೂಪ ಸಿವಿಲ್ ಸಂಹಿತೆಯ ಜಾರಿಯೆನ್ನುವುದು ತತ್‌ಕ್ಷಣದಲ್ಲಿ ಆಗುವ ಕಾರ್ಯವಲ್ಲ. ಅದಕ್ಕೆ ಹಲವು ವರ್ಷಗಳೇ ಬೇಕಾಗಬಹುದು. ಆದರೆ ಸ್ವಾತಂತ್ರ್ಯ ಬಂದು ಅರ್ಧ ಶತಕವೇ ಕಳೆದುಹೋದರೂ ಈ ದಿಕ್ಕಿನಲ್ಲಿ ಆಶಾದಾಯಕ ಪ್ರಯತ್ನಗಳು ನಡೆಯದಿರುವುದು ರಾಜಕೀಯ ಪಕ್ಷಗಳ ರಾಜಕೀಯ ಸಂಕಲ್ಪದ ಬಗ್ಗೆ ಅನುಮಾನ ಹುಟ್ಟಿಸುತ್ತದೆ.

ಏಕರೂಪ ಸಿವಿಲ್ ಸಂಹಿತೆಯನ್ನು ವಿರೋಧಿಸುತ್ತಿರುವವರ ಮತ್ತೊಂದು ವಾದವೆಂದರೆ ಇಂತಹ ಸಂಹಿತೆಯಿಂದ ದೇಶದ ಬಹುಮುಖಿ ಸಂಸ್ಕೃತಿಯ ಮೇಲೆ ದಾಳಿ ಮಾಡಿದಂತಾಗುತ್ತದೆ, ಎಂದಾಗಿದೆ. ಯಾವುದೇ ಸಂಸ್ಕೃತಿಯ ಒಡಲಲ್ಲಿ ದಮನಕಾರಿ ಶೋಷಕ ಅಂಶಗಳಿದ್ದರೆ ಅವುಗಳನ್ನು ನಿವಾರಿಸಬೇಕೇ ಹೊರತು ಸಂಸ್ಕೃತಿಯ ವೈಶಿಷ್ಟ್ಯತೆಯೆಂದು ಅವನ್ನು ಅಪ್ಪಿ ಮುದ್ದಾಡಬೇಕಿಲ್ಲ. ಹಾಗೆಯೇ ಕೆಲವರು ಒಂದು ಧರ್ಮದೊಳಗಿನ ಸ್ತ್ರೀಪುರುಷ ಸಮಾನತೆಯನ್ನು ಸಾಧಿಸಿದ ನಂತರವೇ ಏಕರೂಪ ಸಿವಿಲ್ ಸಂಹಿತೆಗೆ ಹೋರಾಟ ನಡೆಯಬೇಕು ಮತ್ತು ಅದಕ್ಕೆ ಕಾಲ ಪಕ್ವವಾಗಿಲ್ಲವೆಂಬ ವಾದವನ್ನೊಡ್ಡುವುದಾಗಲಿ, ಇಂತಹ ಸಂಹಿತೆಗೆ ಆಯಾಯಾ ಧರ್ಮದ ಜನರಿಂದಲೇ ಒತ್ತಾಯ ಬರಬೇಕೆಂಬ ವಾದವನ್ನೊಡ್ಡುವುದಾಗಲಿ ಇವು ನೆಪಗಳಾಗಬಹುದೇ ವಿನಾ ಕಾರಣಗಳಾಗುವುದಿಲ್ಲ. ಇದರಿಂದ ಏಕರೂಪ ಸಿವಿಲ್ ಸಂಹಿತೆಯ ಸಾಧ್ಯತೆಯನ್ನು ದೂರದೂರಕ್ಕೆ ತಳ್ಳಿದಂತಾಗಿ ಅದು ವಿವೇಚನೆಯ ಕಾರ್ಯವೆನಿಸಿಕೊಳ್ಳುವುದಿಲ್ಲ.

ಪುರುಷ ಪ್ರಧಾನ ಸಮಾಜ ಏಕರೂಪ ಸಿವಿಲ್ ಸಂಹಿತೆಯ ಬಗ್ಗೆ ಎಷ್ಟೇ ಭಿನ್ನಾಭಿಪ್ರಾಯಗಳನ್ನಿಟ್ಟುಕೊಳ್ಳಲಿ ಈ ಸಂಹಿತೆಯು ಮೂಲಭೂತವಾಗಿ ಲಿಂಗ ನ್ಯಾಯವನ್ನು, ಲಿಂಗಸಮಾನತೆಯನ್ನು ದೊರಕಿಸುವ ದಿಕ್ಕಿನಲ್ಲಿ ಪ್ರಮುಖ ಹೆಜ್ಜೆಯೆಂಬುದರಲ್ಲಿ ಸಂಶಯವಿಲ್ಲ. ವಿವಾಹ, ಆಸ್ತಿ ಹಕ್ಕು, ಮಕ್ಕಳ ದತ್ತು ಹಕ್ಕು, ಮುಂತಾದ ವಿಷಯಗಳಿಗೆ ಸಂಬಂಧಪಟ್ಟಂತೆ ಹೆಣ್ಣು ಅನುಭವಿಸುವ ತಾರತಮ್ಯತೆ, ನೋವು ಮುಂತಾದ ಕಾರಣಗಳು ಏಕರೂಪ ಸಿವಿಲ್ ಸಂಹಿತೆಗಾಗಿ ನಡೆಯುವ ಹೋರಾಟದ ಅಗತ್ಯವನ್ನು ಮಹಿಳೆಯರಿಗೆ ಹೆಚ್ಚು ಮನದಟ್ಟು ಮಾಡಿಸುತ್ತದೆ. ೧೯೫೬ರಲ್ಲಿ ಹಿಂದೂ ಕಾಯಿದೆಯು ಜಾರಿಗೆ ಬರುವುದಕ್ಕೆ ಮುಂಚಿನಿಂದಲೂ ಆರಂಭದ ಮಹಿಳಾ ಹೋರಾಟಗಾರರು ಏಕರೂಪ ಸಿವಿಲ್ ಸಂಹಿತೆಗಾಗಿ ಒತ್ತಾಯಿಸಿ ಹೋರಾಟ ನಡೆಸಿದ್ದಾರೆ ಎಂಬ ಅಂಶವನ್ನು ಮರೆಯಲಾಗದು. ಅವರ ಹೋರಾಟದ ಉದ್ದೇಶ ಎಲ್ಲ ಧರ್ಮದ ದಮನಕಾರಿ ಅಂಶಗಳನ್ನು ನಿವಾರಿಸಿ ಜನಸಾಮಾನ್ಯರಿಗೆ ನ್ಯಾಯ ದೊರಕಿಸುವುದಾಗಿದೆ.

ಏಕರೂಪ ಸಿವಿಲ್ ಸಂಹಿತೆಯನ್ನು ಕೋಮುವಾದಿಗಳು ಯಾವ ಕಾರಣಕ್ಕಾಗಿಯೇ ಒತ್ತಾಯಿಸಲಿ ಅವರ ವಾದವನ್ನು ನಾವು ಪುಷ್ಟೀಕರಿಸಬೇಕಾಗಿಲ್ಲ. ಆದರೆ ಇಂತಹದೊಂದು ಸಂಹಿತೆ ಜಾತ್ಯತೀತ ಭಾರತಕ್ಕೆ ಬೇಕಾಗಿದೆ. ವಿಶೇಷವಾಗಿ ಇಲ್ಲಿನ ಮಹಿಳೆಯರಿಗೆ ಬೇಕಾಗಿದೆ. ಈ ಸಂಹಿತೆ ರಾಷ್ಟ್ರೀಯ ಐಕ್ಯತೆಯನ್ನು ಸಾಧಿಸಿಬಿಡುತ್ತದೆ ಎಂಬುದು ಒಂದು ಸುಳ್ಳು ಭ್ರಮೆಯಷ್ಟೇ. ಕೇವಲ ಸಂಹಿತೆಯಿಂದ ರಾಷ್ಟ್ರೀಯ ಐಕ್ಯತೆಯನ್ನು ಸಾಧಿಸುವುದು ಸಾಧ್ಯವಿಲ್ಲ. ಆದರೆ ಎಲ್ಲ ಧರ್ಮೀಯರ ಜೀವನಾಗತ್ಯಕ್ಕಾಗಿ, ಅವರೆಲ್ಲರಿಗೂ ಸಮ್ಮತವಾದ ಸಿವಿಲ್ ಸಂಹಿತೆಗಾಗಿ ಹೋರಾಟ ನಡೆಸಬೇಕು. ತಾನಾಗಿಯೇ ಉದ್ಭವಿಸುವ ಸಂಹಿತೆ ಇದಲ್ಲ. ಇದೊಂದು ದೀರ್ಘ ಪ್ರಕ್ರಿಯೆಯೇ ಆದರೂ ಅದಕ್ಕೆ ಸಮಗ್ರವಾದ, ಸಶಕ್ತವಾದ ಹೋರಾಟದ ಅಗತ್ಯವಿದೆ.

ಎನ್. ಗಾಯತ್ರಿ

---

೩ನೇ ಪುಟದಿಂದ

ಜೋಡಣೆಯ ಯೋಜನೆಗೆ ಆಜ್ಞೆ ನೀಡುವ ನ್ಯಾಯಾಲಯವಾದರೂ ಈ ಪ್ರಶ್ನೆಯನ್ನು ಕೇಳಬೇಕಿತ್ತು. ಹಾಗೆ ಮಾಡದೆ, ಲಕ್ಷಗಟ್ಟಲೆ ನೌಕರರ ಹಕ್ಕನ್ನು ಒಂದು ಸಾಲಿನ ತೀರ್ಮಾನದಿಂದ ಕಸಿದುಕೊಳ್ಳುವ ಕ್ರಮ ಸರ್ವಥಾ ಸಮರ್ಥನೀಯವಲ್ಲ. ಇದು ಸಂವಿಧಾನ ಮತ್ತು ಕಾನೂನಿನ ಕೆಲವು ಪದಗಳ ಬಗ್ಗೆ ವಿದ್ವತ್ಪೂರ್ಣವಾದ ವ್ಯಾಖ್ಯಾನ ನೀಡುವ ಪ್ರಶ್ನೆಯಲ್ಲ; ಮುನ್ನೂರು ವರ್ಷಗಳ ಹೋರಾಟದ ಫಲವನ್ನು ಇದ್ದಕ್ಕಿದ್ದಂತೆ ಅಪಹರಣ ಮಾಡುವ ಹಕ್ಕು ಯಾರಿಗಾದರೂ ಇದೆಯೇ ಎಂಬುದು ಇಲ್ಲಿ ಮೂಲಭೂತವಾದ ಪ್ರಶ್ನೆ. ದುಡಿಯುವ ಜನ ಐಕ್ಯತೆಯಿಂದ ಈ ಪ್ರಶ್ನೆಯನ್ನು ಹಾಕಬೇಕು ಮತ್ತು ಸಾಮೂಹಿಕವಾಗಿ ಅದಕ್ಕೆ ಉತ್ತರ ಕಂಡುಕೊಳ್ಳಬೇಕು.

ಈ ತಿಂಗಳ ದುರಂತ ಇದಾದರೆ ಮುಂದಿನ ತಿಂಗಳ ದುರಂತ ಈಗಾಗಲೆ ನಿರ್ಧಾರವಾಗಿದೆ : ಭಯೋತ್ಪಾದಕತೆಯನ್ನು ಮೆಟ್ಟಿನಿಲ್ಲಲು ಭಾರತ ಸರ್ಕಾರವು ಅತ್ಯಂತ ಘೋರ ಪಾತಕಿ ಮತ್ತು ಭಯೋತ್ಪಾದಕನಿಂದ ಮನೆಪಾಠ ಹೇಳಿಸಿಕೊಳ್ಳಹೊರಟಿದೆ. ಇಸ್ರೇಲಿನ ಪ್ರಧಾನಿ ಶರಾನ್‌ನನ್ನು ಬರಮಾಡಿಕೊಳ್ಳುವುದಕ್ಕೆ ಇದಲ್ಲದೆ ಇನ್ನೇನು ಅರ್ಥವಿದೆ ?

---

## ಮುರಿದ ಕವಿತೆಯ ತುಣುಕು



ಮುರಿದು ಹೋದ ಕವಿತೆಯ ಒಂದು ತುಣುಕು
ನನ್ನ ಉಸಿರಲ್ಲಿ ಪ್ರವಹಿಸುತ್ತಿದೆ.

ಅದು ತುಟಿಗೆ ಬಂದಾಗ
ನನ್ನ ನಾಲಿಗೆಯನ್ನು ಕತ್ತರಿಸಿ ಹಾಕಿತು.
ಹಲ್ಲುಗಳಲ್ಲಿ ಅದನ್ನು ಕಚ್ಚಿ ಹಿಡಿದಾಗ
ತುಟಿಗಳು ರಕ್ತ ಸುರಿಸತೊಡಗಿದವು.

ಗಾಜಿನ ತುಂಡೊಂದು
ಗಂಟಲಲಿ ಸಿಕ್ಕಿಕೊಂಡಿದೆ
ಉಗಳಲೂ ಆಗದು
ನುಂಗಲೂ ಬಾರದು

ಆ ಮುರಿದು ಹೋದ ಕವಿತೆಯ ತುಣುಕು
ನನ್ನ ಉಸಿರಲ್ಲಿ ಪ್ರವಹಿಸುತ್ತಿದೆ
ಉಸಿರಲ್ಲಿ ಪ್ರವಹಿಸುತ್ತಲೇ ಇದೆ
ಪ್ರವಹಿಸುತ್ತಲೇ ಇದೆ.

ಮೂಲ : ಗುಲ್ಜಾರ್

ಅನು : ಎಂ. ಡಿ. ಒಕ್ಕುಂದ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನರಗುಂದ



ಪಿ. ಎಂ. ಎಸ್. ಮೂರ್ತಿ

# ಬೆಸ್ಟ್ ಬೇಕರಿ ಸುತ್ತಮುತ್ತ

ಕಳೆದ ವರ್ಷ ಫೆಬ್ರವರಿ ೨೭ರಂದು ಗುಜರಾತಿನಲ್ಲಿ ಗೋಧ್ರಾ ಘಟನೆ ನಡೆಯಿತು. ರೈಲಿನ ಬೋಗಿಗೆ ಬೆಂಕಿ ಇಟ್ಟ ಕಾರಣ ಆ ಬೋಗಿಯಲ್ಲಿದ್ದ ೫೮ ಮಂದಿ ಭಸ್ಮವಾದರು. ಈ ಕೃತ್ಯವು ಮುಸ್ಲಿಮರಿಂದ ನಡೆಯಿತು ಎಂಬ ಹೇಳಿಕೆಯ ಆಧಾರದ ಮೇಲೆ ಸಂಘಪರಿವಾರವು ಮುಸ್ಲಿಮರ ವಿರುದ್ಧ ೧೧೩ ದಿವಸಗಳ ಕಾಲ ಅವ್ಯಾಹತವಾಗಿ ಧಾಳಿ ನಡೆಸಿತು. ಪರಿಣಾಮವಾಗಿ ೯೯೫ ಮಂದಿ ಹತರಾದರು. ೨,೫೦೦ಕ್ಕಿಂತಲೂ ಜಾಸ್ತಿ ಜನರಿಗೆ ತೀವ್ರ ಗಾಯಗಳಾದವು. ೧೦,೦೦೦ಕ್ಕಿಂತಲು ಮಿಕ್ಕ ಜನರು ತಮ್ಮ ಮನೆ ಮಠಗಳನ್ನು ಕಳೆದುಕೊಂಡರು. ಇಂದಿಗೂ ಅವರ ಪುನರ್‌ವಸತಿಯ ಕಾರ್ಯವು ತೃಪ್ತಿಕರವಾಗಿ ನಡೆದಿಲ್ಲ.

ಗೋಧ್ರಾ ನಂತರದ ಘಟನೆಗಳು ಹಿಂದುತ್ವವಾದಿಗಳಿಂದ ನಡೆಯಿತು ಎಂಬುದು ನಿಸ್ಸಂಶಯ. ಈ ಘಟನೆಗಳ ಕುರಿತು ೬೬೨ ಪ್ರಥಮ ಮಾಹಿತಿ ಪೊಲೀಸ್ ಸ್ಟೇಷನ್‌ಗಳಲ್ಲಿ ದಾಖಲಾಗಿವೆ. ಅವುಗಳ ಪೈಕಿ ಬರೆ ೩೨ ಪ್ರಥಮ ಮಾಹಿತಿ (First Information Reports)ಗಳಲ್ಲಿ ಕಾಣಿಸಿದವರ ವಿರುದ್ಧವಾಗಿ ಬಹಳಷ್ಟು ತಡವಾಗಿ ಆಪಾದನೆಗಳ ಪಟ್ಟಿಗಳನ್ನು ನ್ಯಾಯಾಸ್ಥಾನದಲ್ಲಿ ದಾಖಲು ಮಾಡಲಾಗಿದೆ. ಈ ಎಲ್ಲಾ ಆಪಾದಿತರಿಗೆ ಜಾಮೀನು ನೀಡಲಾಗಿದೆ.

ಆದರೆ ಗೋಧ್ರಾ ಘಟನೆಯ ಸಂಬಂಧದಲ್ಲಿ ಸುಮಾರು ೧೦೦ ಮಂದಿ ಮುಸ್ಲಿಮರನ್ನು ಬಂಧಿಸಲಾಗಿದೆ. ಅವರ ವಿರುದ್ಧ ಪೋಟಾ ಕಾಯಿದೆಯ ಅಂಶಗಳನ್ನು ಹೇರಿರುವುದರಿಂದ ಅವರಿಗೆ ಜಾಮೀನು ದೊರೆಯಲಿಲ್ಲ. ಅವರ ವಿಚಾರಣೆಯು ಶುರುವಾಗಿರುವುದಿಲ್ಲ. ಗೋಧ್ರಾದ ನಂತರದ ಘಟನೆಗಳಲ್ಲಿ ಆಪಾದಿತರಾದ ಯಾವನೊಬ್ಬನ ವಿರುದ್ಧವಾಗಿಯೂ ಈ ಪೋಟಾ ಕಾಯಿದೆಯನ್ನು ಉಪಯೋಗಿಸಿಲ್ಲ, ಜಾಮೀನನ್ನು ನಿರಾಕರಿಸಿರುವುದಿಲ್ಲ.

ಈ ೩೨ ಕೇಸುಗಳಲ್ಲಿ ವಡೋದರದ ಬೆಸ್ಟ್ ಬೇಕರಿಯ ಕೇಸಿನ ವಿಚಾರಣೆಯು ಮುಗಿದು ಅದರಲ್ಲಿ ಆಪಾದಿತರಾದ ೨೧ ಮಂದಿಯನ್ನು ನಿರ್ದೋಷಿಗಳೆಂದು ಬಿಡುಗಡೆ ಮಾಡಲಾಗಿದೆ. ಈ ತೀರ್ಪನ್ನು ೨೭.೬.೨೦೦೩ರಲ್ಲಿ ನೀಡಲಾಯಿತು.

ಬೆಸ್ಟ್ ಬೇಕರಿಯು ಹಬಿಬುಲ್ಲಾ ಶೇಕ್ ಎಂಬ ಮುಸ್ಲಿಂನೋರ್ವರಿಗೆ ಸೇರಿತ್ತು. ಇದೇ ಬೇಕರಿಯ ಕಟ್ಟಡದಲ್ಲೇ ಅವರು ಮತ್ತು ಅವರ ಕುಟುಂಬದ ಸದಸ್ಯರು ವಾಸಿಸುತ್ತಿದ್ದರು. ಈ ಬೇಕರಿಯನ್ನು ಸುಟ್ಟ ಪರಿಣಾಮವಾಗಿ ೧೨ ಮಂದಿ ಭಸ್ಮವಾದರು. ಅವರಲ್ಲಿ ಬೇಕರಿಯಲ್ಲಿ ಕೆಲಸಕ್ಕಿದ್ದ ೩ ಮಂದಿ ಹಿಂದುಗಳೂ ಸೇರಿದ್ದಾರೆ. ಈ ಕಿಚ್ಚಿಟ್ಟ ಕೇಸಿನಲ್ಲಿ ೨೧ ಮಂದಿಯನ್ನು ಆಪಾದನೆಯ ಪಟ್ಟಿಯಲ್ಲಿ ಕಾಣಿಸಲಾಗಿತ್ತು. ಅವರಲ್ಲಿ ಹೆಚ್ಚಿನವರು ಸಂಘಪರಿವಾರಕ್ಕೆ ಸೇರಿದ ಧೂರ್ತರು. ಅವರ ಮೇಲಿನ ಆಪಾದನೆಗಳನ್ನು ಪುಷ್ಟೀಕರಿಸಲು ೧೨೦ ಮಂದಿಯ ಸಾಕ್ಷಿ ಪಟ್ಟಿಯನ್ನು ಹಾಜರುಪಡಿಸಿದ್ದರು. ಇವರಲ್ಲಿ ೭೩ ಸಾಕ್ಷಿದಾರರ ವಿಚಾರಣೆ ನಡೆಯಿತು. ಅವರಲ್ಲಿ ೪೧ ಮಂದಿ ಸಾಕ್ಷಿದಾರರು ತಾವು ಪೊಲೀಸರಿಗೆ ಕ್ರಿಮಿನಲ್ ಪ್ರೊಸೀಜರ್ ಕೋಡಿನ ಸೆಕ್ಷನ್ ೧೬೨ರ ಪ್ರಕಾರ ನೀಡಿದ ಹೇಳಿಕೆಗಳಿಗೆ ವಿರೋಧವಾಗಿ ಸಾಕ್ಷಿ ಇತ್ತರು.

ಈ ಬೇಕರಿಗೆ ಕಿಚ್ಚಿಟ್ಟ ಸಮಯದಲ್ಲಿ ಬೇಕರಿಯ ಮಾಲಿಕರಾದ ಹಬಿಬುಲ್ಲಾ ಶೇಕ್‌ರ ಮಗಳು ಝಾಯಿರಾ ಶೇಕ್, ಅವಳ ತಾಯಿ ಮತ್ತು ಇಬ್ಬರು ಚಿಕ್ಕ ವಯಸ್ಸಿನ ಸಹೋದರರು ಇನ್ನೊಂದು ಮನೆಯ ಮಹಡಿಗೆ ಹತ್ತಿ ತಮ್ಮ ಜೀವಗಳನ್ನು ಬಚಾವು ಮಾಡಿಕೊಂಡಿದ್ದರು. ಈ ಝಾಯಿರಾರವರೇ ಈ ಕೇಸಿಗೆ ಪ್ರಧಾನ ಸಾಕ್ಷಿಯಾಗಿದ್ದರು. ಈ ಘಟನೆಗಳನ್ನು ಪ್ರತ್ಯಕ್ಷವಾಗಿ ಅವರು ನೋಡಿದ್ದುದೇ ಇದಕ್ಕೆ ಕಾರಣ.

ಈ ಕೇಸಿನಲ್ಲಿ ಇಷ್ಟೊಂದು ಮಂದಿ ತಾವು ಕೊಟ್ಟ ಹಿಂದಿನ ಹೇಳಿಕೆಗೆ ವಿರುದ್ಧವಾಗಿ ನ್ಯಾಯಸ್ಥಾನದ ಮುಂದೆ ಸಾಕ್ಷಿ ನೀಡಿದ್ದು ಏಕೆ ? ಸಂಘಪರಿವಾರದ ಬಜರಂಗದಳದ ವ್ಯಕ್ತಿಗಳು ಈ ಸಾಕ್ಷಿದಾರರಿಗೆ ಭಯ ಭೀತಿಯನ್ನೊಡ್ಡಿ ಅವರು ನ್ಯಾಯಸ್ಥಾನದ ಮುಂದೆ ನಿಜ ಸಂಗತಿಯನ್ನು ಹೇಳುವುದಕ್ಕೆ ತಡೆ ಮಾಡಿದರು. ಈ ಸಾಕ್ಷಿದಾರರನ್ನು ಅವರು ಸಾಕ್ಷಿ ಹೇಳಬೇಕಾದ ಮುಂಚೆ ಸಂಬಂಧಪಟ್ಟ ಪೊಲೀಸ್ ಅಧಿಕಾರಿಯನ್ನಾಗಲೀ ಪಬ್ಲಿಕ್ ಪ್ರಾಸಿಕ್ಯೂಟರನ್ನಾಗಲಿ ಕಾಣಲು ಬಿಡಲಿಲ್ಲ. ಅಂದರೆ ಈ ಸಾಕ್ಷಿದಾರರು ತಾವು ಹಿಂದೆ ಏನು ಸ್ಟೇಟ್‌ಮೆಂಟ್ ಕೊಟ್ಟಿದ್ದೇವೆ ಎಂಬುದನ್ನು ತಿಳಿದುಕೊಳ್ಳಲು ಈ ಬಜರಂಗದಳದವರು ಬಿಡಲಿಲ್ಲ. ಕಾಯಿದೆ ಪ್ರಕಾರ ತಮ್ಮ ಹಿಂದಿನ ಹೇಳಿಕೆಗಳನ್ನು ನೆನಪಿಸಿಕೊಳ್ಳಲು ಆ ಹೇಳಿಕೆಯನ್ನು ಓದಿಕೊಳ್ಳುವ ಅಥವಾ ಪ್ರಾಸಿಕ್ಯೂಟರಿಂದ ಓದಿಸಿ ತಿಳಿದುಕೊಳ್ಳುವ ಹಕ್ಕು ಅವರಿಗಿದೆ.

ಅಂದರೆ ಈ ಕೇಸಿಗೆ ಸಂಬಂಧಪಟ್ಟ ಸಾಕ್ಷಿದಾರರಿಗೆ ಅಲ್ಲಿಯ ಪೊಲೀಸರು ರಕ್ಷಣೆ ನೀಡಲಿಲ್ಲ. ಈ ಹುಡುಗಿ ಝಾಯಿರಾಳು ಸಾಕ್ಷಿ ನೀಡುವ ಕೆಲವು ದಿವಸಗಳ ಹಿಂದೆ ಮಧು ಶ್ರೀವಾತ್ಸವ ಎಂಬ ಜಿಜೆಪಿಯ ಎಂ.ಎಲ್.ಎ. (ಆತನು ಒಬ್ಬ ದುಷ್ಕರ್ಮಿ. ಆತನ ವಿರುದ್ಧ ಅನೇಕ ಕ್ರಿಮಿನಲ್ ಕೇಸುಗಳಿವೆ.) ಬಜರಂಗ ದಳದ ವ್ಯಕ್ತಿಗಳೊಡನೆ ಈ ಹುಡುಗಿಯನ್ನು ಭೇಟಿಯಾಗಿ ಅವಳು ತನ್ನ ಸಾಕ್ಷಿಯನ್ನು ಯಾವ ರೀತಿಯಲ್ಲಿ ಹೇಳಬೇಕೆಂದು ಬಲವಂತಪಡಿಸುತ್ತಿದ್ದರು. ಆದರೂ ತಾನು ನಿಜವನ್ನೇ ಹೇಳುವುದು ಖಂಡಿತ ಎಂದು ನಿರ್ಧರಿಸಿ ಕೇಸಿನ ದಿನ ನ್ಯಾಯಸ್ಥಾನಕ್ಕೆ ತನ್ನ ತಾಯಿ ತಮ್ಮಂದಿರೊಂದಿಗೆ ಹೋದಾಗ ಗೇಟಿನ ಬಾಗಿಲಿನಲ್ಲಿ ಈ ಕೇಡಿ ಶ್ರೀವಾತ್ಸವ ಹಾಗೂ ಆತನ ಅನೇಕ ಬೆಂಬಲಿಗರು ನಿಂತಿದ್ದರು. ಶ್ರೀವಾತ್ಸವ ಆ ಹುಡುಗಿಯನ್ನು ಕುರಿತು ತಾನು ಹೇಳಿಕೊಟ್ಟಂತೆ ಸಾಕ್ಷಿ ಹೇಳಬೇಕು, ತಪ್ಪಿದರೆ ಅವಳ ಜೀವಕ್ಕೆ ಅಪಾಯ ಬಂದೀತು ಎಂದು ಬೆದರಿಸಿದ. ಇಷ್ಟರಲ್ಲೇ ಅವಳಿಗೆ ಅರ್ಧ ಧೈರ್ಯ ಕುಂದಿತು. ಸಾಕ್ಷಿ ವಿಚಾರಣೆ ಶುರುವಾಗುವಾಗ ಇಡೀ ನ್ಯಾಯಸ್ಥಾನದಲ್ಲಿ ಜನರು ತುಂಬಿದ್ದರು. ಈ ಮಧು ಶ್ರೀವಾತ್ಸವ ಮತ್ತು ಆತನ

ಹಿಂಬಾಲಕರು ಈ ಜನರ ಮುಂದೆ ಸಾಲಾಗಿ ನಿಂತಿದ್ದರು. ಇವರು ಈ ಹುಡುಗಿಯ ಕಡೆಗೆ ದೃಷ್ಟಿಯಿಟ್ಟು ಅವಳನ್ನು ಬೆದರಿಸುವಂಥ ದೃಶ್ಯವನ್ನು ನಿರ್ಮಿಸಿದ್ದರು. ಇದರಿಂದ ಅವಳು ಸಂಪೂರ್ಣ ಭಯಭೀತಳಾಗಿ ಶ್ರೀವಾತ್ಸವ ಹೇಳಿಕೊಟ್ಟಂತೆ ಅಂದರೆ ಆಪಾದಿತರು ತಮ್ಮನ್ನು ಆಗ್ಗೆ ರಕ್ಷಿಸಲು ಬಂದವರು ಎಂದು ಹೇಳಬೇಕಾಯಿತು.

ಆಗ್ಗೆ ಪ್ರಾಸಿಕ್ಯೂಟರ್ ಅವರನ್ನು ಅಡ್ಡ ಸವಾಲು ಮಾಡಿ ಅವಳು ಮೊದಲಿಗೆ ಪೊಲೀಸರಿಗೆ ಕೊಟ್ಟ ಹೇಳಿಕೆಯೇ ಸರಿ, ಈಗಿನ ಅವಳ ಹೇಳಿಕೆಗೆ ಶ್ರೀವಾತ್ಸವ ಹಾಗೂ ಇತರರ ಬೆದರಿಕೆಯೇ ಕಾರಣ ಎಂದು ಅಡ್ಡ ಸವಾಲಿನಲ್ಲಿ ಕೇಳಬೇಕಾಗಿತ್ತು. ಬರೇ ನಾಲ್ಕು ಪ್ರಶ್ನೆಗಳನ್ನು ಕೇಳಿ, ಅಡ್ಡ ಸವಾಲು ಹಾಕಲು ನ್ಯಾಯಾಧೀಶರ ಅನುಮತಿ ಕೇಳದೆ ನಿಮ್ಮ ಸಾಕ್ಷಿ ಮುಗಿಯಿತು ಎಂದು ಹೇಳಿ ಕೋರ್ಟಿನಿಂದ ಅವಳನ್ನು ಹೊರಗೆ ಕಳುಹಿಸಿದರು. ಹೊರಬರುವಾಗ ಶ್ರೀವಾತ್ಸವ ಮತ್ತು ಆತನ ಬೆಂಬಲಿಗರು ಮುಗುಳು ನಗೆಯಿಂದ ಅವಳನ್ನು ಸ್ವಾಗತಿಸಿ ಅವಳ ವಾಸಸ್ಥಳಕ್ಕೆ ತಲುಪಿಸಿದರು.

ಈ ಬೆಸ್ಟ್ ಬೇಕರಿಯ ಕೇಸಿನ ಕುರಿತು ತಪಾಸಣೆ ನಡೆಸುವ ಜವಾಬ್ದಾರಿ ಬಿ.ಪಿ. ಕನ್ನನ್ ಎಂಬ ಪೊಲೀಸು ಅಧಿಕಾರಿಗೆ ವಹಿಸಿಕೊಡಲಾಗಿತ್ತು. ಆತನು ತನಗೆ ಇಷ್ಟಬಂದಂತೆ ರೆಕಾರ್ಡುಗಳನ್ನು ತಯಾರು ಮಾಡಿದ್ದ. ಅವನ ತಪಾಸಣೆಯ ಕುರಿತು ಆತನ ಯಾವೊಬ್ಬ ಮೇಲಧಿಕಾರಿಯೂ ಮುತುವರ್ಜಿ ವಹಿಸಿರಲಿಲ್ಲ.

ಪಬ್ಲಿಕ್ ಪ್ರಾಸಿಕ್ಯೂಟರ್ ರಘುವೀರ ಪಾಂಡೆಯವರು ಈ ಕೇಸಿಗೆ ಸಂಬಂಧಪಟ್ಟ ಸಾಕ್ಷಿದಾರರು ಏಕೆ ತಿರುಗಿ ಬೀಳುತ್ತಾರೆ ಎಂಬುದು ಗೊತ್ತಿದ್ದರೂ ಅದನ್ನು ನ್ಯಾಯಾಧೀಶರಿಗೆ ತಿಳಿಸಲಿಲ್ಲ, ತಮ್ಮ ಹೇಳಿಕೆಗಳಿಗೆ ವಿರುದ್ಧವಾಗಿ ಸಾಕ್ಷಿ ನುಡಿದ ಸಾಕ್ಷಿದಾರರನ್ನು ಅಡ್ಡ ಸವಾಲಿಗೆ ಗುರಿಪಡಿಸಲಿಲ್ಲ.

ಇಷ್ಟೊಂದು ಮಂದಿ ಸಾಕ್ಷಿದಾರರು ತಮ್ಮ ಹಿಂದಿನ ಹೇಳಿಕೆಗಳಿಗೆ ವಿರುದ್ಧವಾಗಿ ಸಾಕ್ಷಿ ಹೇಳುತ್ತಿರುವುದು, ಕೋರ್ಟಿನೊಳಗೆ ವಿಪರೀತ ಜನರ ಹಾಜರಿ, ಅದರಲ್ಲೂ ಮಧು ಶ್ರೀವಾತ್ಸವ ಅವರ ಮುಂದೆ ನಿಂತಿರುವುದನ್ನು ನೋಡಿ ಅದರ ಹಿಂದೆ ಅಡಗಿದ್ದ ಕಾರಣಗಳನ್ನು ಗುರುತಿಸಿ ಈ ಸಾಕ್ಷಿದಾರರಿಗೆ ಪೊಲೀಸ್ ಸಂರಕ್ಷಣೆ ಏಕೆ ನೀಡಲು ಆಜ್ಞಾಪಿಸಿಲ್ಲ? ಅಂತೆಯೇ ಈ ವಿಚಾರಣೆಯನ್ನು ಯಾರಿಗೂ (ಅಂದರೆ ಕೇಸಿಗೆ ಸಂಬಂಧ ಪಟ್ಟವರನ್ನುಳಿದು) ಪ್ರವೇಶವಿಲ್ಲದ ಕೊಠಡಿಯಲ್ಲಿ ನಡೆಸಲು ಏಕೆ ತೀರ್ಮಾನಿಸಲಿಲ್ಲ? ಈ ವಿಷಯಗಳಲ್ಲಿ ನ್ಯಾಯಾಧೀಶರು ತನ್ನ ಕರ್ತವ್ಯಗಳಲ್ಲಿ ಕೊರತೆಯನ್ನು ತೋರ್ಪಡಿಸಿದ್ದಾರೆ. ಪ್ರಥಮ ವಾಗಿ ವಿಚಾರಣೆಗೆ ತೆಗೆದುಕೊಂಡ ಕೇಸಿನ ಗತಿ ಈ ರೀತಿ ಯಾದರೆ ಉಳಿದ ಕೇಸುಗಳ ಗತಿಯೇನು ? ಎಂಬುದನ್ನು ನ್ಯಾಯಾಧೀಶರು ಆಲೋಚಿಸಬೇಕಿತ್ತು. ಅಲ್ಲಿಯ ಸರಕಾರಕ್ಕೆ ಎಳ್ಳಷ್ಟಾದರೂ ನ್ಯಾಯವನ್ನು ಸಂರಕ್ಷಿಸಬೇಕೆಂದು ಇರಾದೆ ಇರುತ್ತಿದ್ದರೆ ಈ ಮೊದಲನೆಯ ಕೇಸಿನ ಪಾಡು ಈ ರೀತಿಯಾಗುತ್ತಿರಲಿಲ್ಲ. ಅಮೇರಿಕ ಕೆನಡಾ ದೇಶಗಳಲ್ಲಿ ಸಾಕ್ಷಿದಾರರುಗಳಿಗೆ ಅಪರಾಧಿಗಳ ಕಡೆಯಿಂದ ಅಪಾಯ ವಾಗುವ ಪರಿಸ್ಥಿತಿಯಿದೆ ಎಂದು ಸರಕಾರಕ್ಕೆ ಕಂಡುಬಂದರೆ ಅಂತಹ ಸಾಕ್ಷಿ ನೀಡಬೇಕಾದ ವ್ಯಕ್ತಿಗಳಿಗೆ ಪೊಲೀಸ್ ಸಂರಕ್ಷಣೆಯನ್ನು ಅವಶ್ಯವಿರುವಷ್ಟು ಕಾಲ ನೀಡಲಾಗುತ್ತದೆ. ಈ ಘಟನೆಯಲ್ಲಿ ಬಿಜೆಪಿ ಸರಕಾರವು ಸಾಕ್ಷಿದಾರರನ್ನು ರಕ್ಷಿಸುವ ಬದಲು ಆಪಾದಿತರ ರಕ್ಷಣೆಯೇ ಅತ್ಯವಶ್ಯವೆಂದೆಣಿಸಿದ ನಂತರ ಸಾಕ್ಷಿದಾರರ ರಕ್ಷಣೆಗೆ ಅಲ್ಲಿ ಅವಕಾಶವಿರಲು ಸಾಧ್ಯವೇ ಇಲ್ಲ.


ಝಾಯಿರಾ ಶೇಕ್

ವಡೋದರ ಕೇಸಿನಲ್ಲಿ ಆಪಾದಿಸಲ್ಪಟ್ಟ ಸಂಘಪರಿವಾರದ ಸಾಮಾನ್ಯ ಸದಸ್ಯರ ಪೈಕಿ ಇನ್ನೂ ವಿಚಾರಣೆಗೆ ಬರಬೇಕಾದ ನರೋಡಾ ಪಾಟೀಯ, ಗುಲ್‌ಮಾರ್ಗ ಸೊಸೈಟಿಗಳ ಕೇಸುಗಳಲ್ಲಿ ಸಂಘಪರಿವಾರದ ಅನೇಕ ಮುಖ್ಯಸ್ಥರು ಆಪಾದಿತರಾಗಿದ್ದಾರೆ. ಆದುದರಿಂದ ಈ ಕೇಸುಗಳು ಕೂಡಾ ಬೆಸ್ಟ್ ಬೇಕರಿಯ ಕೇಸಿನಂತೆಯೇ ಅವಸಾನ ಹೊಂದುವುದು ಖಂಡಿತ.

ರಾಷ್ಟ್ರೀಯ ಮಾನವ ಆಯೋಗವು ಬೆಸ್ಟ್ ಬೇಕರಿಯ ಕೇಸು ಈ ರೀತಿಯಲ್ಲಿ ಅವಸಾನ ಹೊಂದಲು ಕಾರಣಗಳೇನು ಎಂಬ ಅನ್ವೇಷಣೆಗೆ ಹೊರಟಿದೆ. ಈ ಆಯೋಗದ ಅಧ್ಯಕ್ಷ ಸುಪ್ರೀಂ ಕೋರ್ಟಿನ ಮಾಜಿ ಮುಖ್ಯ ನ್ಯಾಯಾಧೀಶ ಜಸ್ಟೀಸ್ ಆನಂದರು. ಅವರು ವಡೋದರದ ಈ ಕೇಸು ಈ ರೀತಿಯಲ್ಲಿ ಅಂತ್ಯಗೊಂಡದ್ದನ್ನು ನೋಡಿ ಅದರಲ್ಲಿ ನ್ಯಾಯವು ಹರಣವಾಗಿದೆ (miscarriage of justice) ಎಂದುದು ನ್ಯಾಯಸ್ಥಾನದ ನಿಂದನೆಯಾಗಿದೆ ಎಂದು ಬಿಜೆಪಿ ಪರವಾಗಿರುವ ೨೦ ಮಂದಿ ವಕೀಲರು ಗುಜರಾತ್ ಹೈಕೋರ್ಟ್‌ಗೆ ಅರ್ಜಿ ನೀಡಿ ಜಸ್ಟೀಸ್ ಆನಂದರಿಗೆ ಶಿಕ್ಷೆ ನೀಡಬೇಕೆಂದು ಕೋರಿದರು. ಆದರೆ ಹೈಕೋರ್ಟು ಅದನ್ನು ಪ್ರಥಮ ಹಂತದಲ್ಲೇ ತಳ್ಳಿಹಾಕಿತು. ನಂತರ ಈ ವಕೀಲರಲ್ಲಿ ಕೆಲವರು ಮಾನವ ಆಯೋಗವು ತನ್ನ ಪ್ರತಿನಿಧಿಗಳನ್ನು ಅಲ್ಲಿಗೆ ಈ ವಿಫಲತೆಯ ಕಾರಣಗಳನ್ನು ಗುರುತಿಸಲು ಕಳುಹಿಸುವ ನಿರ್ಧಾರವನ್ನು ತಡೆಹಿಡಿಯಲು ಇಂಜಂಕ್ಷನ್ ವ್ಯಾಜ್ಯವನ್ನು ಹೂಡಿದರು. ಆದರೆ ಅವರ ಕೋರಿಕೆ ಸಿದ್ಧಿಸಲಿಲ್ಲ. ಆದುದರಿಂದ ಆಯೋಗದ ಪ್ರತಿನಿಧಿಗಳು ಇಷ್ಟರಲ್ಲಿಯೇ ಅಲ್ಲಿಗೆ ಭೇಟಿಯಿತ್ತಿದ್ದಾರೆ. ತನಿಖೆಯನ್ನು ನಡೆಸುತ್ತಿದ್ದಾರೆ.

ಆಪಾದಿತರೆಲ್ಲ ಬಿಡುಗಡೆಯಾದುದರಿಂದ, ಈ ಕೇಸನ್ನು ಪುನಃ ತನಿಖೆಗೆ ಒಳಪಡಿಸಲು ಸಾಧ್ಯವಿದೆಯೆ ಎಂಬುದನ್ನು ಕೆಲವು ವಕೀಲರುಗಳು (ಮುಖ್ಯವಾಗಿ ಬಿಜೆಪಿ ಪರವಾಗಿರು ವವರು) ಸಾಧ್ಯವಿಲ್ಲವೆಂದಿದ್ದಾರೆ. ಇವರಲ್ಲಿ ಲೇಲೆ, ಮನೋನ್ ಮತ್ತು ಇತರ ಕೆಲವರು. ಆದರೆ ಪಿ. ಪಿ. ರಾವ್, ನಾರಿಮನ್, ರಾಜೇಶ್ ಧಾವನ್ ಇವರೇ ಮೊದಲಾದ ಕಾನೂನಿನ ತಜ್ಞರು ಈ ವ್ಯವಹರಣೆಯಲ್ಲಿ ನ್ಯಾಯದ ಹರಣವಾಗಿರುವುದರಿಂದ ಅದನ್ನು ಮರು ತನಿಖೆಗೆ ಒಪ್ಪಿಸಲು ಕಾಯಿದೆಯಲ್ಲಿ ಅವಕಾಶವಿದೆ, ಮೇಲಿನ ಹೈಕೋರ್ಟು ಮತ್ತು ಸುಪ್ರೀಂ ಕೋರ್ಟು ಈ ಕುರಿತು ಸಂಪೂರ್ಣವಾಗಿ ಪುನಃ ತನಿಖೆ ನಡೆಯಬೇಕು ಎಂದು ಆಜ್ಞೆ ಮಾಡಿದರೆ ಪೊಲೀಸಿನ ತನಿಖೆಯಿಂದಲೇ ಅದು ಆರಂಭವಾಗಬೇಕು. ಆಗ್ಗೆ ಈ ಕೋರ್ಟುಗಳು ಸಿಬಿಐಗೆ ಈ ತನಿಖೆಯನ್ನು ಒಪ್ಪಿಸಿ ನಂತರ ಗುಜರಾತಿನ ಹೊರಗೆ ಇತರ ರಾಜ್ಯಗಳಲ್ಲಿಯ ನ್ಯಾಯಸ್ಥಾನದಲ್ಲಿ ಈ ವಿಚಾರಣೆಯಾಗುವಂತೆ ಆಜ್ಞೆ ಮಾಡಬಹುದು. ಅದರಿಂದ ಈ ಹರಣಕ್ಕೊಳಗಾದ ನ್ಯಾಯವನ್ನು ಪುನಃ ಮೇಲೆತ್ತಿ ಕಾಪಾಡಬಹುದು ಎಂಬುದು ಅವರ ಖಚಿತ ಅಭಿಪ್ರಾಯ. ಆದರೆ ಗುಜರಾತಿನ ಸರಕಾರ ಈ ಕುರಿತು ಯಾವ ರೀತಿಯ ಕ್ರಮಗಳನ್ನೂ ಕೈಗೊಳ್ಳಲು ಸಿದ್ಧವಿಲ್ಲ ಎಂಬುದು ನಿಸ್ಸಂಶಯ. ಆದುದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ವ್ಯಕ್ತಿಗಳು ಈ ಕ್ರಮಗಳನ್ನು ಕೈಗೊಳ್ಳಬೇಕಷ್ಟೆ.

ಈ ಮಧ್ಯೆ "ಮಾನವ ಹಕ್ಕುಗಳ ರಕ್ಷಣೆ" ಎಂಬ ಅಂತರರಾಷ್ಟ್ರೀಯ ಸಂಸ್ಥೆಯೊಂದು ಈ ಕುರಿತು ಸ್ವಂತ ನೆಲೆಯಲ್ಲಿ ಅನ್ವೇಷಣೆ ನಡೆಸಿ ೭೦ ಪುಟಗಳುಳ್ಳ ಒಂದು ವರದಿಯನ್ನು ತಯಾರಿಸಿದೆ. ಈ ವರದಿಯಲ್ಲಿ ಗುಜರಾತಿನ ಸರಕಾರ, ಅಲ್ಲಿಯ ಪೊಲೀಸ್ ಖಾತೆಯ ಕರ್ತವ್ಯನಿಷ್ಠೆಯಲ್ಲಿ ಕಂಡುಬಂದ ಕೊರತೆ, ಹಾಗೆಯೇ ನ್ಯಾಯಸ್ಥಾನದಲ್ಲಿ ನಡೆದ ಅಕ್ರಮಗಳ ಕುರಿತು ಎತ್ತಿ ತೋರಿಸಲಾಗಿದೆ.

ಇಷ್ಟರಲ್ಲಿ ಝಾಯಿರಾ ಮತ್ತು ಅವರ ತಾಯಿ ತಮ್ಮಂದಿರು ಗುಜರಾತನ್ನು ಬಿಟ್ಟು ಮುಂಬೈಗೆ ಬಂದಿದ್ದಾರೆ. ಅಲ್ಲಿ ಸಿವಿಲ್ ಹಕ್ಕುಗಳನ್ನು ಕಾಪಾಡಲಿರುವ ಸಂಸ್ಥೆಯ ಮುಖ್ಯ ಪದಾಧಿಕಾರಿ ಟೀಸ್ಟ ಸೆಟಲ್‌ವಾಡ ಅವರನ್ನು ಭೇಟಿಯಾಗಿ ತಾನು ತನ್ನ ಹಾಗೂ ತನ್ನ ತಾಯಿ ತಮ್ಮಂದಿರ ಜೀವಗಳಿಗೆ ಅಪಾಯ ವಾಗುವ ಸಂದರ್ಭವನ್ನು ಕಲ್ಪಿಸುವುದು ಬೇಡವೆಂದು ನ್ಯಾಯಸ್ಥಾನದಲ್ಲಿ ತನ್ನ ಮೊದಲಿನ ಹೇಳಿಕೆಗಳಿಗೆ ವಿರೋಧ ವಾಗಿ ಸಾಕ್ಷಿ ಇತ್ತೆ ಎಂದೂ, ಅದೇ ಸಮಯದಲ್ಲಿ ಈ ತನಿಖೆ ಯನ್ನು ಪುನಃ, ಆ ರಾಜ್ಯದ ಹೊರಗಡೆಯಲ್ಲಿ ನಡೆಸಿದರೆ ತಾನು ಸಂಪೂರ್ಣವಾಗಿ ಅಂದು ನಡೆದ ನಿಜಸಂಗತಿಯನ್ನು ಹೇಳಲು ಸಿದ್ಧವೆಂದಿದ್ದಾರೆ. ಇದೇ ರೀತಿಯಲ್ಲಿ ಅವರು ರಾಷ್ಟ್ರೀಯ ಟಿ. ವಿ.ಗೆ ನೀಡಿದ ಸಂದರ್ಶನದಲ್ಲೂ ಕೂಡ ತನ್ನ ದೃಢತೆಯನ್ನು ಸ್ಪಷ್ಟಪಡಿಸಿದ್ದಾರೆ.

ಆದರೆ ಈ ಘಟನೆಯು ಸಂಘಪರಿವಾರದವರು ನಮ್ಮ ರಾಷ್ಟ್ರವನ್ನು ಸರ್ವತ್ರ ಸರ್ವಾಧಿ ಕಾರದ ಎಂದರೆ ಫ್ಯಾಸಿಸಂ ಕಡೆಗೆ ಕೊಂಡೊಯ್ಯುತ್ತಿದ್ದಾರೆ ಎಂಬುದಕ್ಕೆ ಮೊದಲನೆಯ ಹೆಗ್ಗುರುತಾಗಿದೆ ಎಂಬುದು ಖಚಿತ. ಈ ದಾರಿಗೆ ತಡೆ ಹಾಕಬೇಕಾದರೆ ನಮ್ಮ ರಾಷ್ಟ್ರದ ಪ್ರಜಾಪ್ರಭುತ್ವವಾದಿಗಳು, ಸೆಕ್ಯುಲರಿಸ್ಟರು ಹಾಗೆಯೇ ಇಂತಹ ಸರ್ವಾಧಿಕಾರವನ್ನು ಪ್ರಾಮಾಣಿಕವಾಗಿ ವಿರೋಧಿಸುವ ರಾಜಕೀಯ ಪಕ್ಷಗಳು ಸಹಮತದಿಂದ ಅವರನ್ನು ಎದುರಿಸುವ ಸಮಯವು ಈಗ ಪ್ರಾಪ್ತವಾಗಿದೆ. ಇದಕ್ಕೆ 'ಓ'ಗೊಡುವವರು ಎಷ್ಟು ಜನರು ಎಂಬುದೇ ಇಂದಿನ ಪ್ರಶ್ನೆ.

ಪಿ. ಎಂ. ಎನ್. ಮೂರ್ತಿ
೪-೨-೨೩೭/೨೪, ಭಾರತೀನಗರ, ಬಿಜೈ, ಮಂಗಳೂರು - ೫೭೫ ೦೦೪



# ಡಾ॥ ಎಂ. ಚಿದಾನಂದಮೂರ್ತಿಗಳ ಅನರ್ಥ ವಿಚಾರ ಪ್ರಣಾಳಿಕೆ

ಡಾ॥ ಟಿ. ಆರ್. ಚಂದ್ರಶೇಖರ

*(ಕಳೆದ ಸಂಚಿಕೆಯಿಂದ ಮುಂದುವರಿದಿದೆ)*

**ಡಾ॥** ಚಿದಾನಂದಮೂರ್ತಿಗಳು ಪ್ರಸ್ತುತ ಗ್ರಂಥದಲ್ಲಿ ಮಾಡಿರುವ ಕೆಲವು ಹೇಳಿಕೆಗಳನ್ನು ಇಲ್ಲಿ ಅಗತ್ಯವಾಗಿ ಪರಿಗಣಿಸಬೇಕಾಗಿದೆ. ವಚನ ಸಂಸ್ಕೃತಿಯು ಸಾಧಿಸಿದ ಸಿದ್ಧಿ-ಸಾಧನೆಗಳೆಲ್ಲವನ್ನೂ, ಅಲ್ಲಿ ಪ್ರತಿಪಾದಿಸಲಾಗಿದ್ದ ವಿಚಾರಗಳೆಲ್ಲವನ್ನೂ ಹನ್ನೆರಡನೆಯ ಶತಮಾನದ ಪೂರ್ವಕ್ಕೆ ಒಯ್ದು, ಅಲ್ಲಿ ನಡೆದ ಪ್ರಯತ್ನಗಳಿಗೆ ಅದರ ಕೀರ್ತಿ ಒಪ್ಪಿಸುವ, ಕಟ್ಟಿಹಾಕುವ ಕೆಲಸವನ್ನು ಇಲ್ಲಿ ವ್ಯವಸ್ಥಿತವಾಗಿ ಅವರು ನಡೆಸಿದ್ದಾರೆ. ಅವರ ಪ್ರಕಾರ ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು-ವಚನಕಾರರು ಮಾಡಿದ್ದೆಲ್ಲ ಹನ್ನೆರಡನೆಯ ಶತಮಾನದ ಪೂರ್ವದಲ್ಲಿನ ವೀರಶೈವವು ಆರಂಭಿಸಿದ್ದ ಸುಧಾರಣೆಗಳ ಮುಂದುವರಿಕೆಯಾಗಿದೆ. ಈ ಬಗ್ಗೆ ಪ್ರಸ್ತುತ ಗ್ರಂಥದಲ್ಲಿ ಅವರು ಮಾಡಿರುವ ಕೆಲವು ಹೇಳಿಕೆಗಳನ್ನು ಪರಿಶೀಲಿಸುವುದು ಉಪಯುಕ್ತವಾದೀತು.

೧. ''ಹಾಗಾದರೆ, ಹನ್ನೆರಡನೆಯ ಶತಮಾನದ ಶರಣರು ಸ್ಥಾವರ ಲಿಂಗಗಳನ್ನು ಪೂಜಿಸಬಾರದೆಂದು ಹಲವೆಡೆ ಕಂಠೋಕ್ತವಾಗಿ ಹೇಳಲು ಕಾರಣವೇನು ?'' ಹೀಗೆ ಪ್ರಶ್ನೆ ಹಾಕಿಕೊಂಡು ಅದಕ್ಕೆ ಅವರೇ ಉತ್ತರ ನೀಡುತ್ತಾ ''ಹಾಗೆ ಹೇಳಲು ಕಾರಣ, ಅಂತಹ ತತ್ವವು ಬಸವ ಪೂರ್ವಯುಗದ ವೀರಶೈವದಲ್ಲೇ ಇದ್ದುದು'' ಎಂದು ಬರೆಯುತ್ತಾರೆ (ಪುಟ ೨೭೭).

೨. ''ಹಿಂದೂಧರ್ಮದಂತೆಯೇ ವೀರಶೈವಧರ್ಮವು ಬಹುದೇವತಾ ವಾದವನ್ನು ಒಪ್ಪುತ್ತದೆ. ಅಂತೆಯೇ ಕರ್ಮಸಿದ್ಧಾಂತದಲ್ಲೂ ಅದಕ್ಕೆ ನಂಬಿಕೆ ಇದೆ'' (ಪುಟ ೨೮೪).

೩. ''ಜಾತಿಭೇದ ನಿವಾರಣೆ, ಹೆಣ್ಣು ಗಂಡು ಎಂಬ ಲಿಂಗಭೇದ ನಿರಾಕರಣೆಯು ವೀರಶೈವಧರ್ಮದ ವೈಶಿಷ್ಟ್ಯವೇನೂ ಅಲ್ಲ. ಏಕೆಂದರೆ ವೀರಶೈವದಂತೆಯೇ ಭಾರತದಲ್ಲಿ ಕಾಣಿಸಿಕೊಂಡ ಎಲ್ಲ ಭಕ್ತಿಪಂಥಗಳೂ ಜಾತಿಗಳ ಸಮಾನತೆಯನ್ನು ಹೆಣ್ಣು ಗಂಡುಗಳ ಸಮಾನತೆಯನ್ನು ಎತ್ತಿ ಹಿಡಿದಿವೆ.'' (ಪುಟ ೨೮೭)

೪. ''ಎಷ್ಟೇ ಟೀಕೆಗೆ ಒಳಗಾದರೂ ಬ್ರಾಹ್ಮಣನ ಸಾಮಾಜಿಕ ಸ್ಥಾನವು ಭದ್ರವಾಗೇ ಇದ್ದಿತು....... ಮುಂದೆ ನಾವು ನೋಡುವಂತೆ ಅಂದಿನ ಎಲ್ಲರ ಆದರ್ಶ ಬ್ರಾಹ್ಮಣನೇ. ನಿಜವಾದ ಅರ್ಥದ ಬ್ರಾಹ್ಮಣನೇ ಆಗುವುದಿತ್ತು.'' (ಪುಟ ೮೬)

೫. ''ಶಿವದಾರ, ಜನಿವಾರ ಧರಿಸಿದವರೆಲ್ಲರೂ ವೀರಶೈವದ ಕಕ್ಷೆಗೆ ಬರುತ್ತಾರೆ. ಬರುವಂತಹ ಪ್ರಯತ್ನವೂ ಆಗಬೇಕು.'' (ಪುಟ ೨೭೨)

೬. ''ಬಸವನಂತಹ ಕೆಲವರು ಶರಣರಲ್ಲಿ ವೇದಗಳ ಬಗ್ಗೆ ಕಟು ಟೀಕೆ ಬರೆದಿದ್ದರೆ ಅದು ಅಲ್ಲಿನ ಕರ್ಮ ಭಾಗಕ್ಕೆ........'ವೇದಕ್ಕೆ ಒರೆಯ ಕಟ್ಟುವೆ' ಎಂಬಂತಹ ಮಾತುಗಳನ್ನಿಟ್ಟುಕೊಂಡು ನಿರ್ಣಯಕ್ಕೆ ಬರುವುದೂ ಒಂದೇ,....... ಅವಿವೇಕವಾಗುತ್ತದೆ.'' (ಪುಟ ೨೮೩)

೭. ''ಬಸವಣ್ಣ ತಮಗಿಂತ ಹಿಂದೆ ಹೆಚ್ಚು ಪ್ರಚಲಿತವಿದ್ದ ಒಂದು ಧಾರ್ಮಿಕ ಪರಂಪರೆಯನ್ನು ಮುಂದುವರಿಸಿದುದಲ್ಲದೆ ಅದಕ್ಕೆ ಒಂದು ಜನಪ್ರಿಯತೆ, ಮೊನಚು ಅರ್ಥವಂತಿಕೆ ತಂದುಕೊಟ್ಟರು. ......... ಅವರು ಕೈಗೊಂಡ ಸಮಾಜ ಸುಧಾರಣೆಗೆ ಅವರ ವ್ಯಕ್ತಿತ್ವದಂತೆಯೇ ಅವರಿಗೆ ಪ್ರಾಪ್ತವಾಗಿದ್ದ ಭಂಡಾರಿ ಪದವಿ ಎರಡೂ ಸಹಾಯಕವಾಗಿದ್ದವು.'' (ಪುಟ ೬೦)

೮. ''ಗಮನಿಸಬೇಕಾದ ಸಂಗತಿಯೆಂದರೆ ವೀರಶೈವ ಸಾಹಿತ್ಯದಲ್ಲಿ ಬ್ರಾಹ್ಮಣರ ಹಾಗೂ ವೇದಗಳ ಬಗ್ಗೆ ಟೀಕೆ ಬಂದೇ ಇಲ್ಲವೆಂಬಷ್ಟು ಕಡಿಮೆ. ಹರಿಹರನನ್ನು ಹೊರತುಪಡಿಸಿ ವಚನ ವಾಙ್ಮಯಕ್ಕೂ ವಚನೇತರ ವೀರಶೈವ ವಾಙ್ಮಯಕ್ಕೂ ಮೇಲ್ನೋಟಕ್ಕೆ ಕಾಣುವ ವ್ಯತ್ಯಾಸವನ್ನು ಗಮನಿಸಬೇಕು. ವಚನ ವಾಙ್ಮಯವು ಭಿನ್ನ ಭಿನ್ನ ಸ್ವಭಾವಗಳ ವ್ಯಕ್ತಿಗಳ ಆಗಾಗ್ಗೆ ತಮಗೆ ಆದ ಅನುಭವ, ಆಲೋಚನೆಗಳನ್ನು ಒಳಗೊಂಡ ಬಿಡಿ ಕಿರು ಬರಹಗಳ ಮೊತ್ತ ವಚನಗಳ ಸಂಕಲನ. ಒಬ್ಬನೇ ವ್ಯಕ್ತಿಯ ವಚನಗಳಲ್ಲಿ ಪರಸ್ಪರ ವಿರೋಧವೆಂದು ಕಾಣುವ ಅನುಭವ-ಆಲೋಚನೆಗಳು ವ್ಯಕ್ತವಾಗಿರಬಹುದು. ಈ ದೃಷ್ಟಿಯಿಂದ ನೋಡಿದಾಗ ಇಡೀ ವಚನ ವಾಙ್ಮಯವನ್ನು ಒಂದು ಸಿದ್ಧಾಂತ ಗ್ರಂಥವಾಗಿ ನೋಡುವುದು ಕಷ್ಟ.'' (ಪುಟ ೧೪೫)

ಹೀಗೆ ಪ್ರಸ್ತುತ ಗ್ರಂಥದಲ್ಲಿ ವೈದಿಕತೆಯ-ಬ್ರಾಹ್ಮಣರ ವೈಭವೀಕರಣ, ವಚನಕಾರರ ಭರ್ತ್ಸನೆ, ಸಂಸ್ಕೃತದ ಆರಾಧನೆಗಳನ್ನು ಅವರು ನಡೆಸಿರುವುದನ್ನು ನೋಡಬಹುದು. ವಚನ ಸಂಸ್ಕೃತಿಗಿಂತ ಹೆಚ್ಚಾಗಿ ಹಿಂದೂಶಾಹಿಯ ಬಗ್ಗೆ ಅವರು ಚರ್ಚೆ ಮಾಡಿದ್ದಾರೆ.

೯. ''ಹಿಂದೂಧರ್ಮದ ಪ್ರಮುಖ ಲಕ್ಷಣವೆಂದರೆ ವೇದಗಳಲ್ಲಿ ಶ್ರದ್ಧೆ. ಬಸವಪೂರ್ವ ವೀರಶೈವ, ಬಸವ ಸಮಕಾಲೀನ ವೀರಶೈವ, ಬಸವೋತ್ತರ ಕಾಲೀನ ವೀರಶೈವ, ನಮ್ಮ ಸಮಕಾಲೀನ ಇಲ್ಲೆಲ್ಲ ವೇದಗಳ ಬಗ್ಗೆ ಅವುಗಳ ಅವಿರುದ್ಧವಾದ ಆಗಮಗಳ ಬಗ್ಗೆ ಶ್ರದ್ಧೆಯಿರುವುದನ್ನು ನಾವು ಹಿಂದಿನ ವಿಶ್ಲೇಷಣೆಯಿಂದ ಕಂಡಿದ್ದೇವೆ.'' (ಪುಟ ೨೮೩)

ತಮ್ಮ ವಿಚಾರ ಪ್ರಣಾಳಿಕೆಗೆ ಇತರರ ವಿಚಾರಗಳನ್ನು ವಿಕಾರಗೊಳಿಸಿ ಹೇಗೆ ಬಳಸಿಕೊಳ್ಳಬಹುದು ಎಂಬುದಕ್ಕೆ ಮೇಲಿನ ಉಲ್ಲೇಖ ಸಾಕ್ಷಿಯಾಗಿದೆ. ಬಸವಪೂರ್ವದ ಬಗ್ಗೆ ಮತ್ತು ಬಸವೋತ್ತರ ಕಾಲೀನದ ಬಗ್ಗೆ ಅವರು ಏನನ್ನಾದರೂ ಹೇಳಿಕೊಳ್ಳಲಿ. ಅದರ ಬಗ್ಗೆ ನಮ್ಮ ಭಿನ್ನಾಭಿಪ್ರಾಯವಿಲ್ಲ. ಏಕೆಂದರೆ ಅದು ಅವರದೇ ಸಾಮ್ರಾಜ್ಯ. ಆದರೆ ಅದೇ ರೀತಿ 'ಬಸವ ಸಮಕಾಲೀನ'ವನ್ನು ಅವುಗಳಿಗೆ ಸಂವಾದಿಯನ್ನಾಗಿ ಮಾಡಿಕೊಳ್ಳುವುದು ಮಾತ್ರ ಚರಿತ್ರೆಯ ವಿಕೃತಿ. ಇಲ್ಲೆಲ್ಲ ಅವರು ಅತ್ಯಂತ ಪ್ರಜ್ಞಾಪೂರ್ವಕವಾಗಿ ವೀರಶೈವದ ಬಗ್ಗೆ ಮಾತನಾಡುತ್ತಿದ್ದಾರೆ ವಿನಾ ವಚನ ಸಂಸ್ಕೃತಿ ವಿಚಾರ ಪ್ರಣಾಳಿಕೆ ಬಗ್ಗೆ ಮಾತನಾಡುತ್ತಿಲ್ಲ. ಇಡೀ ಗ್ರಂಥದಲ್ಲಿ ಅವರು ಇಲ್ಲಿ ಬ್ರಾಹ್ಮಣರ ಬಗ್ಗೆ ಟೀಕೆಗಳಿಲ್ಲ, ವೇದಾಗಮಗಳ ಬಗ್ಗೆ ಟೀಕೆಗಳಿಲ್ಲ, ಸಂಸ್ಕೃತದ ಬಗ್ಗೆ ಜ್ಞಾನವಿದೆ, ಸಂಸ್ಕೃತವನ್ನು ಉಲ್ಲೇಖಿಸುತ್ತಾರೆ ಎಂಬ ಸಂಗತಿಗಳನ್ನು ಬೇಸರ ಬರುವಷ್ಟು ಸಾರಿ ಮಂಡಿಸಿದ್ದಾರೆ. ಲಿಂಗಾಯತರು ಹಿಂದೂಗಳೋ ಅಲ್ಲವೊ ಎಂಬುದೂ ಸಹ ಇಲ್ಲಿ ಪ್ರಾಸಂಗಿಕವಾಗಿ, ಒಟ್ಟು ವೈದಿಕತೆಯ-ಪೌರೋಹಿತ್ಯದ ಆರಾಧನೆಯು ವಿಜೃಂಭಿಸಿಬಿಟ್ಟಿದೆ. ಚಿದಾನಂದಮೂರ್ತಿಗಳ ಬ್ರಾಹ್ಮಣರ ಬಗೆಗಿನ ಭ್ರಮೆಯನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ. ಆದರೆ ತಮ್ಮ ಭ್ರಮೆಯನ್ನು, ಹುಟ್ಟಿನಿಂದ ಪ್ರಾಪ್ತವಾಗುವ ಸಂಗತಿಗಳ ಬಗೆಗಿನ ಹೆಮ್ಮೆಯನ್ನು ಇಡೀ ಲಿಂಗಾಯತ ಸಮುದಾಯಕ್ಕೆ ಆರೋಪಿಸುವುದು ಖಂಡನೀಯ. ಅವರ ವಿಚಾರಗಳಲ್ಲಿ ವೈರುಧ್ಯಗಳಿರುವುದನ್ನು ನಾವು ಗುರುತಿಸಬಹುದಾಗಿದೆ. ಪ್ರಸ್ತುತ ಗ್ರಂಥದಲ್ಲಿ ''ಜಾತಿಭೇದ ನಿರಾಕರಣೆ, ಹೆಣ್ಣುಗಂಡು ಎಂಬ ಲಿಂಗಭೇದ ನಿರಾಕರಣೆಯು ವೀರಶೈವದ ವೈಶಿಷ್ಟ್ಯವೇನೂ ಅಲ್ಲ'' (ಪುಟ ೨೮೭) ಎಂದು ಹೇಳುವ ಚಿದಾನಂದಮೂರ್ತಿಗಳು ತಮ್ಮ ನಾಲ್ಕನೆಯ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ಅದಕ್ಕೆ ವಿರುದ್ಧವಾದ ವಿಚಾರಗಳನ್ನು ಮಂಡಿಸಿದ್ದಾರೆ. ಅಲ್ಲಿ ಅವರು ಹೀಗೆ ಹೇಳಿದ್ದಾರೆ :

> ''ಎಲ್ಲ ಭಕ್ತಿ ಪಂಥಗಳೂ ಎಲ್ಲ ಮನುಷ್ಯರ 'ಆಧ್ಯಾತ್ಮಿಕ ಸಮಾನತೆ'ಯನ್ನು ಪ್ರತಿಪಾದಿಸಿವೆ. ಆದರೆ ಸಾಮಾಜಿಕ ಸಮಾನತೆಯನ್ನು ಪ್ರತಿಪಾದಿಸಿದ್ದು ಮೊತ್ತ ಮೊದಲು ಶರಣ ಚಳುವಳಿಯೇ. ಬ್ರಾಹ್ಮಣರಿಗೂ ದಲಿತರಿಗೂ ಅವರು ಶಿವಭಕ್ತರಾಗಿದ್ದರೆ ಯಾವುದೇ ಭೇದ ಅವರ ಮಧ್ಯೆ ಇರುವುದಿಲ್ಲವೆಂದು ಪ್ರತಿಪಾದನೆ ಮಾಡಿದ್ದು ಮಾತ್ರವಲ್ಲದೆ ಆ ಎರಡು ಜಾತಿಗಳ ನಡುವೆ ವಿವಾಹ ಸಂಬಂಧಕ್ಕೆ ಒಪ್ಪಿಗೆ ಕೊಟ್ಟು ಅಂತಹ ಕಾರ್ಯಕ್ಕೆ ಮುಂದಾದ ಏಕೈಕ ಉದಾಹರಣೆ ಶರಣ ಚಳುವಳಿಯದು.''

ಯಾಕೆ ಹೀಗೆ ಅವರು ಪರಸ್ಪರ ವಿರುದ್ಧವಾದ ರೀತಿಯಲ್ಲಿ ಮಾತನಾಡುತ್ತಿದ್ದಾರೆ? ಇದನ್ನು ಅರ್ಥಮಾಡಿಕೊಳ್ಳಲು ನಾವು ತುಂಬಾ ಕಷ್ಟಪಡಬೇಕಾದ ಕಾರಣವಿಲ್ಲ. ಪ್ರಸ್ತುತ ಗ್ರಂಥದ ಹಿಂದೆ ಕೆಲಸ ಮಾಡುತ್ತಿರುವ ಚಾಲಕಶಕ್ತಿಯೇ ಬೇರೆ; ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದ ಹಿಂದೆ ಕೆಲಸ ಮಾಡಿದ ಚಾಲಕಶಕ್ತಿಯೇ ಬೇರೆ. ಅದನ್ನು ಪ್ರಸ್ತುತ ಗ್ರಂಥದ ಅನುಬಂಧದಲ್ಲಿ ನೀಡಿ ಅವರು ತಮ್ಮ ಎಡಬಿಡಂಗಿತನವನ್ನು ತೋರಿಸಿದ್ದಾರೆ.

ಅವರಿಗೆ ವಚನ ಸಂಸ್ಕೃತಿಯ 'ಪೂರ್ವ'ದ ಬಗ್ಗೆ ಅತಿಯಾದ ಮೆಚ್ಚಿಗೆಯಿದೆ ಹಾಗೂ ವಚನೋತ್ತರ 'ಕಾಲ'ದ ಬಗ್ಗೆ ಹೆಚ್ಚಿನ ಅಭಿಮಾನವಿದೆ. ಈ ಕಾರಣಕ್ಕೆ ಅವರು ಇಡೀ ಗ್ರಂಥದಲ್ಲಿ ವೀರಶೈವದ ಬಗ್ಗೆ ಹೆಚ್ಚು ಮಾತನಾಡಿದ್ದಾರೆ. ವಚನ ವಾಙ್ಮಯವನ್ನು ಒಂದು 'ಸಿದ್ಧಾಂತ'ವಾಗಿ ಪರಿಗಣಿಸಲು ಸಾಧ್ಯವಿಲ್ಲವೆಂಬ ತೀರ್ಮಾನಕ್ಕೆ ಅವರು ಬರುತ್ತಾರೆ. ಅವರಿಗೆ ಬೇಕಾದ ಸಿದ್ಧಾಂತ ಸಿಕ್ಕದ ಕಾರಣಕ್ಕೆ ಅವರಿಗೆ ವಚನ ವಾಙ್ಮಯವು ಕನಿಷ್ಠವಾಗಿಯೂ ವಚನ ಸಂಸ್ಕೃತಿಯ 'ಪೂರ್ವ' ಮತ್ತು 'ಉತ್ತರ' ಕಾಲಖಂಡಗಳು ಅತ್ಯಂತ ಮುಖ್ಯವಾಗಿಯೂ ಪರಿಣಮಿಸಿವೆ. ಅವರ ವಿಚಾರಕ್ಕೆ ಹೆಚ್ಚು ಇಂಬುಕೊಡುವಂತಹ ಸಂಗತಿಗಳು ಅವರಿಗೆ ಹನ್ನೆರಡನೆಯ ಶತಮಾನದ ಪೂರ್ವದಲ್ಲಿ ಮತ್ತು ನಂತರದಲ್ಲಿ ಹೇರಳವಾಗಿ ದೊರೆಯುತ್ತವೆ. ವೀರಶೈವದ ಬಗ್ಗೆ, ವೀರಶೈವ ಸಾಹಿತ್ಯದ ಬಗ್ಗೆ, ಇಲ್ಲಿ ಹೆಚ್ಚು ವ್ಯಾಮೋಹದಿಂದ ಅವರು ಯಾಕೆ ಮಾತನಾಡುತ್ತಿದ್ದಾರೆ ಎಂಬುದನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಾಗಬಾರದು. ಹನ್ನೆರಡನೆಯ ಶತಮಾನದ ನಂತರದ ಕಾಲಖಂಡ ಅವರಿಗೆ ಮುಖ್ಯ. ಯಾಕೆಂದರೆ ಅಲ್ಲಿ ವೈದಿಕತೆಯ ಭರ್ತ್ಸನೆ ಅಷ್ಟಾಗಿ ನಡೆದಿಲ್ಲ. ಹನ್ನೆರಡನೆಯ ಶತಮಾನದ ಪೂರ್ವವೂ ಅವರಿಗೆ ಮುಖ್ಯ. ಏಕೆಂದರೆ ಅಲ್ಲಿ ವೇದಾಗಮಗಳ ಬಗ್ಗೆ ಟೀಕೆ ಟಿಪ್ಪಣೆಗಳಿಲ್ಲ. ವೀರಶೈವ ಸಾಹಿತ್ಯ ಅವರಿಗೆ ವಚನ ವಾಙ್ಮಯಕ್ಕಿಂತ ಮುಖ್ಯವಾಗಿದೆ. ಏಕೆಂದರೆ ವಚನ ವಾಙ್ಮಯದಲ್ಲಿ ವೇದಾಗಮಗಳ, ವೈದಿಕತೆಯ ಉಗ್ರ ಟೀಕೆಯಿದೆ-ತಿರಸ್ಕಾರವಿದೆ. ಆದರೆ ವೀರಶೈವ ಸಾಹಿತ್ಯದಲ್ಲಿ ಅವುಗಳ ಬಗ್ಗೆ ಒಂದು ಬಗೆಯ ಸಮ್ಮತಿಯಿದೆ.




**ಉಪಸಂಹಾರ**

ಲಿಂಗಾಯತರ - ವಚನ ಸಂಸ್ಕೃತಿಯ ಬ್ರಾಹ್ಮಣೀಕರಣ ಯೋಜನೆಯನ್ನು ಪ್ರಸ್ತುತ ಗ್ರಂಥದಲ್ಲಿ ಚಿದಾನಂದಮೂರ್ತಿಗಳು ಅತ್ಯಂತ ಯಶಸ್ವಿಯಾಗಿ ಮಾಡಿದ್ದಾರೆ. ಲಭ್ಯವಿದ್ದ ಮಾಹಿತಿಯೆಲ್ಲವನ್ನೂ ಅವರು ತಮ್ಮ ವಾದಕ್ಕೆ ಅನುಕೂಲವಾಗುವಂತೆ ಮಣಿಸಿಕೊಂಡಿದ್ದಾರೆ. ಆದರೆ ಪ್ರಸ್ತುತ ಕೃತಿಯಿಂದ ಲಿಂಗಾಯತರಿಗಾಗಲಿ ಅಥವಾ ವಚನ ಸಂಸ್ಕೃತಿಗಾಗಲಿ ನ್ಯಾಯ ದೊರಕಿಲ್ಲ. ಹಿಂದೂಶಾಹಿ ವಿಚಾರ ಪ್ರಣಾಳಿಕೆಯ ಉಗ್ರ ಪ್ರತಿಪಾದಕರಿಗೆ ಇದೊಂದು ಅಸ್ತ್ರವಾಗುವುದರಲ್ಲಿ ಸಂಶಯವಿಲ್ಲ. ಇಂದು ಹಿಂದೂಶಾಹಿಯ ಸಂಗತಿಗಳೇ ಅವರ ಹೋರಾಟದ ಸಾಧನಗಳಾಗುತ್ತಿರುವುದಕ್ಕೂ ಮತ್ತು ವೇದಾಗಮ ಪ್ರಣೀತ ವೈದಿಕತೆಯ ವೈಭವೀಕರಣಕ್ಕೂ ಸಂಬಂಧವಿದೆ. ಸ್ವತಃ ಅವರು ಬ್ರಾಹ್ಮಣ್ಯಕ್ಕೆ ಹತ್ತಿರವಾಗಿರುವ ಸಂಗತಿಯೂ ಪ್ರಸ್ತುತ ಗ್ರಂಥದ ಹಿಂದೆ ಕೆಲಸಮಾಡಿರುವ ಸಾಧ್ಯತೆ ಇದೆ.

ವೀರಶೈವರು ಹಿಂದೂಗಳಲ್ಲ ಎಂದಾದರೆ ಏನೆಲ್ಲ ಅನಾಹುತಗಳಾಗುತ್ತವೆ ಎಂಬುದರ ಕಪೋಲಕಲ್ಪಿತ ಚಿತ್ರವೊಂದನ್ನು ಅವರು ಗ್ರಂಥದ ಒಂದು ಭಾಗದಲ್ಲಿ ಲಾಭ-ನಷ್ಟ ಎಂಬ ವಾಣಿಜ್ಯ ಪರಿಭಾಷೆಯ ಶೀರ್ಷಿಕೆಯಡಿ ನೀಡಿದ್ದಾರೆ.

ಅವರು ಹೇಳುತ್ತಾರೆ: 'ವೀರಶೈವ'ರು ಹಿಂದೂಗಳಲ್ಲವೆಂದಾದರೆ ''ಈಗ ನಡೆಯುತ್ತಿರುವ ವೇದ ಆಗಮ ಶಾಲೆಗಳನ್ನು ವೀರಶೈವ ಮಠಗಳು ಮುಚ್ಚಬೇಕಾಗುತ್ತದೆ''. ವೀರಶೈವರು ಹಿಂದೂಗಳಲ್ಲವೆಂದಾದರೆ ''ಸಾವಿರಾರು ದೇವಾಲಯಗಳಲ್ಲಿರುವ ವೀರಶೈವ ಅರ್ಚಕರನ್ನು ಹಿಂದೂಗಳು ಬಹಿಷ್ಕರಿಸಬಹುದು.'' (ಪುಟ ೫೩)

ಇಂತಹ ಮಾತುಗಳನ್ನು ಕೇಳಿ ನಗಬೇಕೋ ಅಳಬೇಕೋ ಒಂದೂ ಗೊತ್ತಾಗುವುದಿಲ್ಲ. ವೇದ-ಆಗಮ ಪಾಠಶಾಲೆಗಳು, ಅರ್ಚಕ ಹುದ್ದೆಗಳು ಯಾರ ಗುತ್ತಿಗೆ? ಯಾರನ್ನು ಮೆಚ್ಚಿಸಲು ಇವರು ಹೀಗೆ ಹೇಳುತ್ತಿದ್ದಾರೆ?

ವೀರಶೈವರು ಹಿಂದೂಗಳಾಗಿಬಿಟ್ಟರೆ ಅಥವಾ ಹಿಂದೂಗಳಾಗದಿದ್ದರೆ ಆಕಾಶವೇನೂ ಕಳಚಿ ಮೇಲೆ ಬೀಳುವುದಿಲ್ಲ. ವೀರಶೈವರು ಹಿಂದೂಗಳೋ ಅಥವಾ ಅಲ್ಲವೋ ಎಂಬುದಕ್ಕಿಂತ ಹೆಚ್ಚಾಗಿ ಅವರು ವಚನಕಾರರು ಹೇಳುವ ಶರಣರೋ ಅಲ್ಲವೋ ಎಂಬುದು ಮುಖ್ಯ. ಸಮಾನತೆಯೆಂಬ ಸಂವಿಧಾನಬದ್ಧ ಮೌಲ್ಯವನ್ನು ಒಪ್ಪಿಕೊಂಡಿದ್ದಾರೊ ಅಥವಾ ಇಲ್ಲವೊ ಎಂಬುದು ಮುಖ್ಯ. ಲಿಂಗ ಸಮಾನತೆಯನ್ನು ಒಪ್ಪಿದ್ದಾರೋ ಇಲ್ಲವೊ ಎಂಬುದು ಮುಖ್ಯ. ಹಿಂದೂಗಳಾಗುವುದು ಅಥವಾ ಹಿಂದೂಗಳಾಗದಿರುವುದು ಕೇವಲ ಒಂದು ತಾಂತ್ರಿಕ ಸಂಗತಿ. ಲಿಂಗಾಯತರನ್ನು ಹಿಂದೂಗಳನ್ನಾಗಿ ಮಾಡುವ ಸಲುವಾಗಿ ವಚನ ಸಂಸ್ಕೃತಿಯನ್ನು ವಿಕೃತಗೊಳಿಸುವ ಅಗತ್ಯವಿಲ್ಲ. ವಚನ ಸಂಸ್ಕೃತಿಯ ಸಿದ್ಧಿ-ಸಾಧನೆಗಳನ್ನು ಅದರಿಂದ ಕಿತ್ತುಕೊಳ್ಳುವ ಅಗತ್ಯವಿಲ್ಲ. ಅದಕ್ಕೆ ಅದೆಷ್ಟೇ ಇತಿ-ಮಿತಿಗಳಿರಲಿ, ವಚನ ಸಂಸ್ಕೃತಿ ಪ್ರತಿಪಾದಿಸಿರುವ ಲಿಂಗಸಂಬಂಧಿ ವಿಚಾರ ಪ್ರಣಾಳಿಕೆಯಂತಹ ಸಂಗತಿಯನ್ನು ವೈದಿಕ ಸಂಸ್ಕೃತಿಯ ಚೌಕಟ್ಟಿನಲ್ಲಿ ಊಹಿಸಿಕೊಳ್ಳುವುದೂ ಸಾಧ್ಯವಿಲ್ಲ.

ಅವರು ಅಂದುಕೊಂಡಿರಬಹುದು, ಶೂದ್ರ ಲಿಂಗಾಯತ ಮಂದಿಗೆ ತಮ್ಮ ರಾಜಕಾರಣ ತಿಳಿಯುವುದಿಲ್ಲವೆಂದು. ಚಿದಾನಂದಮೂರ್ತಿಗಳ ರಾಜಕಾರಣವನ್ನು ಅರಿಯಲು ಬ್ರಹ್ಮವಿದ್ಯೆಯೇನೂ ಬೇಕಾಗಿಲ್ಲ. ಲಿಂಗಾಯತರು ತಮ್ಮ ಒಂದು ವಿದ್ವತ್ ಪ್ರಭಾವದಿಂದಾಗಿ ವೀರಶೈವರಾಗಿಬಿಟ್ಟರೆಂಬ ಸಮಾಧಾನ ಅವರಿಗಾಗಿರಬಹುದು. ವೀರಶೈವರು ಹಿಂದೂಗಳಾಗಿ ಮುಂದುವರಿಯುವುದರ ಬಗ್ಗೆಯೂ ಅವರು ಸಂತೋಷವಾಗಿರಬಹುದು. ಲಿಂಗಾಯತರ ವಿಗ್ರಹಭಂಜತನಕ್ಕೆ ೮೦೦ ವರ್ಷಗಳ ಭವ್ಯ ಇತಿಹಾಸವಿದೆ. ವಚನ ಸಂಸ್ಕೃತಿಯಂತಹ ವಿಚಾರ ಪ್ರಣಾಳಿಕೆ ಅವರ ಬೆನ್ನಿಗಿದೆ. ಈ ವಿದ್ವಾಂಸರು ತಿಳಿದುಕೊಂಡಿರುವಂತೆ ಅದೇನು ಗತಕ್ಕೆ ಸೇರಿದ ಸಂಗತಿಯಲ್ಲ. ಅದೊಂದು ಜೀವಂತಧಾರೆ. ಚಿದಾನಂದ ಮೂರ್ತಿಯವರಷ್ಟು ವಚನ ವಾಙ್ಮಯವನ್ನು ಶೂದ್ರ ಲಿಂಗಾಯತರು ಅರೆದು ಕುಡಿದಿರಲಿಕ್ಕಿಲ್ಲ. ಆದರೆ ಶೂದ್ರ ಲಿಂಗಾಯತರು ವಚನ ಸಂಸ್ಕೃತಿಯನ್ನು ಬದುಕುತ್ತಿದ್ದಾರೆ. ವಚನಸಂಸ್ಕೃತಿಯು ನೀಡಿದ ಪೆಟ್ಟಿನಿಂದ ವೇದಾಗಮ ಪ್ರಣೀತ ವೈದಿಕತೆ ಜರ್ಝರಿತವಾಗಿದೆ. ಸಂಸ್ಕೃತದ ಬಗ್ಗೆ ಇವರಂತಹ ನೂರಾರು ವಿದ್ವಾಂಸರು ಭಾರತಾದ್ಯಂತ ಏನೆಲ್ಲ ಜೋರು ಮಾಡಿದರೂ ಅದು ನಮ್ಮ ಭವಿಷ್ಯದ ಭಾಷೆಯಾಗಲು ಸಾಧ್ಯವಿಲ್ಲ. ಅದರ ಮೌಲ್ಯ-ಮಹತ್ವ ಕೇವಲ ಪಳೆಯುಳಿಕೆ ಸ್ವರೂಪದ್ದು ಎಂಬುದು ನಮ್ಮ ದೇಶದ ಶೂದ್ರರೆಲ್ಲರಿಗೂ-ದಲಿತರೆಲ್ಲರಿಗೂ ತಿಳಿದಿದೆ. ವಚನ ಸಂಸ್ಕೃತಿಯು ವೈದಿಕತೆಗೆ ಸಂಬಂಧಿಸಿದಂತೆ ಒಂದು ಮಹತ್ವದ ಪಾಠ ಹೇಳಿಕೊಟ್ಟಿದೆ. ಅದೆಂದರೆ ಅಪವಿತ್ರೀಕರಣ. ಯಾವುವನ್ನು ವೈದಿಕತೆ ಪವಿತ್ರವೆಂದು ಹೇಳಿಕೊಂಡು ಬರುತ್ತಿದೆಯೋ ಅವುಗಳನ್ನು ಅಪವಿತ್ರೀಕರಣಕ್ಕೆ ಒಳಪಡಿಸುವುದೇ ಆ ತಂತ್ರ. ಅಪವಿತ್ರರಾಗುವ ಮೂಲಕ, ಅಪವಿತ್ರತೆಯ ಮೂಲಕ, ಪವಿತ್ರರಾಗುವ ತಂತ್ರ ವಚನಕಾರರದ್ದಾಗಿದೆ. ಈ ಕೆಳಗೆ ನೀಡಿರುವ ಅಲ್ಲಮ ಮತ್ತು ಬಸವನ ವಚನಗಳು ಇದನ್ನು ದೃಢಪಡಿಸುತ್ತವೆ.

ಆವ ಜಾತಿಯಾದರೂ ಆಗಲಿ
ಪುರಾತನರ ಚಾರಿತ್ರದಲ್ಲಿ ನಡೆದು
ಗುರುಲಿಂಗ ಜಂಗಮಕ್ಕೆ ಅರ್ಥ ಪ್ರಾಣಾಭಿಮಾನವಂ ಕೊಟ್ಟು
ಅಹಂಕಾರವಳಿದಂತಹ ಮಹಾತ್ಮರ
ಬಾಯ ತಂಬುಲವ ಮೆಲುವೆ, ಬೀಳುಡುಗೆಯ ಹೊದಿವೆ
ಅವರ ಪಾದರಕ್ಷೆಗಳೆರಡನೂ
ಮಂಡೆಯ ಮೇಲೆ ಹೊತ್ತುಕೊಂಡು ಬದುಕುವೆನಯ್ಯಾ
ಆ ಗಣಂಗಳ ದಾಸನ ದಾಸ ನಾನು
ಜನ್ಮ ಜನ್ಮದಲಿ ಆಗುವೆ ಗುಹೇಶ್ವರಾ.

ಆವನಾದಡೇನು ಶ್ರೀ ಮಹಾದೇವನ ನೆನೆವನ
ಬಾಯ ತಂಬುಲವ ಮೆಲುವೆ, ಬೀಳುಡೆಯ ಹೊದೆವೆ,
ಪಾದರಕ್ಷೆಯ ಕಾಯ್ದು ಬದುಕುವೆ
ಕೂಡಲಸಂಗಮದೇವಾ.

ವೈದಿಕತೆಯು ಮೈಲಿಗೆಯೆಂದು ಪರಿಗಣಿಸಿದ್ದ ಎಲ್ಲ ಆಚರಣೆಗಳನ್ನು ಆಚರಿಸುವುದರ ಮೂಲಕ ಶರಣರು ಪವಿತ್ರರಾಗುತ್ತಿದ್ದಾರೆ. ಇದು ವಚನಕಾರರು ವೈದಿಕತೆಗೆ ಇಟ್ಟ ಕಿಚ್ಚು. ಇದನ್ನು ಅರಗಿಸಿಕೊಳ್ಳಲಾರದ, ಸಹಿಸಿಕೊಳ್ಳಲಾರದ, ವೈದಿಕತೆಯು ಇಂದು ವೈದಿಕವಾದಿ ವಿದ್ವಾಂಸರ ಮೂಲಕ ಲಿಂಗಾಯತರ ಬ್ರಾಹ್ಮಣೀಕರಣವೆಂಬ ಯೋಜನೆಯನ್ನು ಕೈಗೆತ್ತಿಕೊಂಡಿದೆ. ಇದೊಂದು ಅಖಿಲ ಭಾರತವಾದಿ ಷಡ್ಯಂತ್ರವಾಗಿದೆ. ಶೂದ್ರ-ದಲಿತ ಶಕ್ತಿಯನ್ನು ಒಡೆಯುವ ಒಂದು ಹುನ್ನಾರ ಇದಾಗಿದೆ.

ಡಾ|| ಚಿದಾನಂದಮೂರ್ತಿಗಳಿಗೆ ಒಂದು ಸಮಸ್ಯೆಯಿದೆ. ವಚನ ಸಂಸ್ಕೃತಿಯ ಆಶಯ, ಅದರ ಪರಿಭಾಷೆ, ಅದರ ಸೈದ್ಧಾಂತಿಕ ಭೂಮಿಕೆಗಳನ್ನು ಅದರದೇ ಚೌಕಟ್ಟಿನಲ್ಲಿ ಹಿಡಿದಿಡುವುದು ಅವರಿಗೆ ಸಾಧ್ಯವಾಗಿಲ್ಲ. ಏಕೆಂದರೆ ವಚನ ಸಂವಿಧಾನವು ಅವರಿಗೆ ಎರಡನೆಯ ದರ್ಜೆಯ ಸಂಗತಿಯಾಗಿದೆ. ಹನ್ನೆರಡನೆಯ ಶತಮಾನ, ಅಂದರೆ ಬಸವ ಸಮಕಾಲೀನ, ಅವರಿಗೆ ತಿರಸ್ಕಾರ ಯೋಗ್ಯವಾದುದಾಗಿದೆ. ವೇದಾಗಮ ಸಂವಿಧಾನವು ಅವರಿಗೆ ಪ್ರಧಾನವೂ-ಪ್ರಾಥಮಿಕವೂ ಆದುದಾಗಿದೆ. ಬಸವಪೂರ್ವ ಹಾಗೂ ಬಸವೋತ್ತರ ಕಾಲ ಅವರಿಗೆ ಅಗ್ರಗಣ್ಯವಾದುದಾಗಿದೆ. ವಚನ ಸಂಸ್ಕೃತಿಯ ಪರಿಭಾಷೆಗೆ ಅದರದೇ ಆದ ಒಂದು ನಿರ್ವಚನವಿದೆ. ಅದರದೇ ಆದ ಒಂದು ಸೈದ್ಧಾಂತಿಕ ಅಡಿಪಾಯವಿದೆ. ಲಿಂಗಾಯತ ಸಮುದಾಯ ಅವುಗಳನ್ನು ಬಲವಾಗಿ ನಂಬಿಕೊಂಡು ಬಂದಿದೆ. ಲಿಂಗಸಮಾನತೆ, ದೇವಾಲಯ ನಿರಾಕರಣೆ, ಜಾತಿಭೇದ ನಿರಾಕರಣೆ, ಸೂತಕ ನಿರಾಕರಣೆ, ಹುಟ್ಟಿನಿಂದ ಪ್ರಾಪ್ತವಾಗುವ ಉಪಾಧಿಗಳ ನಿರಾಕರಣೆ – ಮುಂತಾದವು ಅವರು ತಿಳಿದುಕೊಂಡಿರುವಂತೆ ಕೇವಲ ವಾಗಾಡಂಬರದ ಸಂಗತಿಗಳಲ್ಲ. ಅವುಗಳು ಲಿಂಗಾಯತ ಜನಸಮುದಾಯದ ನಂಬಿಕೆಗಳಾಗಿವೆ. ಆ ನಂಬಿಕೆಗಳಿಗೆ ಚಾರಿತ್ರಿಕ ಮಹತ್ವವಿದೆ - ಸಮಕಾಲೀನ ಪ್ರಸ್ತುತತೆ ಯಿದೆ. ಈ ನಂಬಿಕೆಗಳು ಇಲ್ಲವಾದರೆ ಲಿಂಗಾಯತ ಸಮುದಾಯಕ್ಕೆ ಅನನ್ಯತೆ - ವಿಶಿಷ್ಟತೆಯೇ ಉಳಿಯುವುದಿಲ್ಲ.

ಲಿಂಗಾಯತರಿಗೊಂದು ವಿಶಿಷ್ಟತೆಯಿದೆ. ಅವರಿಗೊಂದು ಸಾಂಸ್ಕೃತಿಕ ಅನನ್ಯತೆಯಿದೆ. ಅವರಿಗೊಂದು ಸೈದ್ಧಾಂತಿಕ ವಿಚಾರ ಪ್ರಣಾಳಿಕೆಯಿದೆ. ಅವರದೊಂದು ಸಂದೇಶವಿದೆ. ಅವರಿಗೊಂದು ಹೊಣೆಯಿದೆ. ಇವೆಲ್ಲವೂ ವಚನ ಸಂಸ್ಕೃತಿಯಿಂದ ಅವರಿಗೆ ಪ್ರಾಪ್ತವಾಗಿವೆ. ಇಂದಿನ ಜನತಂತ್ರದ ಎಲ್ಲ ಗುಣಗಳೂ ಅದಕ್ಕಿವೆ. ಅದೊಂದು ಜನರನ್ನು ಒಳಗೊಳ್ಳುವ ವಿಚಾರಧಾರೆಯಾಗಿದೆ. ಸಮಾನತೆಯು ಅದರ ವಿಚಾರ ಪ್ರಣಾಳಿಕೆಯಾಗಿದೆ. ಒಂದು ವೇಳೆ ಲಿಂಗಾಯತರು ಹಿಂದೂಗಳೆಂದು ಒಪ್ಪಿಕೊಂಡುಬಿಟ್ಟರೆ ಲಿಂಗಾಯತವು ವೈದಿಕತೆಯ ಅನುಬಂಧವಾಗಿಬಿಡುತ್ತದೆ. ವಚನ ಸಂಸ್ಕೃತಿಯಿಂದ ಅದು ಪಡೆದು ಕೊಂಡ ಜನತಂತ್ರದ - ಸಮಾನತಾವಾದಿಯಾದ - ಲಿಂಗಸಂಬಂಧಿ ಗುಣಗಳೆಲ್ಲವೂ ನಿರ್ನಾಮವಾಗಿಬಿಡುತ್ತವೆ.

ನಂಬಿಕೆ - ಆಶಯಗಳು ಎರಡು ರೀತಿಯಲ್ಲಿರುತ್ತವೆ. ಮೊದಲನೆಯದಾಗಿ, ಅವು ಜನರ ಪ್ರಜ್ಞೆಯ - ಅರಿವಿನ ಭಾಗಗಳಾಗಿರುತ್ತವೆ. ಅವುಗಳ ಬಗ್ಗೆ ಜನರು ತುಂಬಾ ಜಾಗೃತರಾಗಿರುತ್ತಾರೆ. ಇದು ಒಂದು ಬಗೆ. ಎರಡನೆಯದು, ಜನರ ನಂಬಿಕೆ- ಆಶಯಗಳು ಕೇವಲ ಆಚರಣೆಯಲ್ಲಿರುತ್ತವೆ. ಅವುಗಳಿಗೆ ಕ್ರಿಯಾರೂಪವಿರುತ್ತದೆ. ಅನೇಕ ಸಂದರ್ಭಗಳಲ್ಲಿ ಅವುಗಳ ಸೈದ್ಧಾಂತಿಕ ಸಂಗತಿಗಳ ಅರಿವು ಅವುಗಳನ್ನು ನಂಬಿರುವವರಿಗೆ ಇರಲಿಕ್ಕಿಲ್ಲ. ಕೆಲವೊಮ್ಮೆ ಅವು ಜನರ ಅರಿವಿನ ಭಾಗವೂ ಆಗಿರಲಿಕ್ಕಿಲ್ಲ. ಆದರೆ ಅವುಗಳ ಇರುವಿಕೆ ಬಗ್ಗೆ ಒಂದು ಸ್ಥೂಲ ಚಿತ್ರಣ ಜನರಿಗಿರುತ್ತದೆ. ಈ ಬಗೆಯ ನಂಬಿಕೆಗಳೇ ಜನ ಸಮುದಾಯಕ್ಕೆ ಅನನ್ಯತೆಯ-ವಿಶಿಷ್ಟತೆಯ ಗುಣವನ್ನು ಒದಗಿಸುತ್ತದೆ. ಉಳಿದವರಿಗಿಂತ, ಉಳಿದ ವಿಚಾರಧಾರೆಗಿಂತ ಅವರನ್ನು ಭಿನ್ನವಾಗಿಸುವ ಸಂಗತಿಗಳು ಇವಾಗಿವೆ. ಚಿದಾನಂದ ಮೂರ್ತಿಯವರು ಲಿಂಗಾಯತತನಕ್ಕೆ ಕೊಡಲಿ ಏಟು ಹಾಕುತ್ತಿದ್ದಾರೆ. ಏಕೆಂದರೆ ವಚನ ಸಂಸ್ಕೃತಿಯ ನಂಬಿಕೆ - ಸಿದ್ಧಾಂತ - ಆದರ್ಶಗಳಿಲ್ಲದೆ ಲಿಂಗಾಯತ ಸಮುದಾಯವು ಭಿನ್ನ - ವಿಶಿಷ್ಟವಾಗಿ ಉಳಿಯಲು ಸಾಧ್ಯವಿಲ್ಲ. ಶೂದ್ರ - ದಲಿತ ಶಕ್ತಿ ಸಂಚಯನಕ್ಕೆ ಇದು ವಿಷಪ್ರಾಯವಾಗುವ ಸಾಧ್ಯತೆಯಿದೆ.

(ಮುಗಿಯಿತು)

ಡಾ|| ಟಿ. ಆರ್. ಚಂದ್ರಶೇಖರ
ಪ್ರವಾಚಕರು, ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬, ಹೊಸಪೇಟೆ ತಾ||, ಬಳ್ಳಾರಿ ಜಿಲ್ಲೆ



## ತಣ್ಣಗಾಗಲಿ ಒಡಲು

ಅದೇ ಹಳೆಯ ಬುಡ್ಡಿ
ಕರಟು ಹತ್ತಿದೆ ಕುಡಿ
ಬತ್ತಿ ಹೊಸಕಿ ಇನ್ನಿಷ್ಟು ಎಣ್ಣೆ ಎರೆದು
ಇರುವುದೇ ಮಾತುಗಳ ಮಸಿಯ
ಹೊಳಪಿಸಲು ಕಟುಕದ ಪುಡಿ
ಉಜ್ಜಿದರೂ ಹೊಳಪಿಲ್ಲದ ಗಾಜಿನ ಬುರುಡೆ

ಬೀದಿ ಬೀದಿಗಳು ಹತ್ತಿ ಉರಿಯುತ್ತಿವೆ
ಬೆಳಕಿನ ಕಿಡಿಯನೆಲ್ಲಿಂದ ತರಲಿ
ನಂದಿ ಹೋಗಿವೆ ಗರ್ಭಗುಡಿಯ ನಂದಾದೀಪಗಳು
ಕವಿಯ ಮನಸ್ಸಲ್ಲೂ ಅದೇ ಪಾಡು
ದೀಪ ಮುಟ್ಟಿಸಲೂ ಮಾತುಗಳಿಲ್ಲ
ಸೊಲ್ಲ ಗದ್ದುಗೆಯ ಮೇಲೆ ಮಣ್ಣದೀವಿಗೆಯಿಲ್ಲ

ಉಕ್ಕೆಗೆರೆಯಡಿ ಕೂತಿದೆ ಬರಬೀಜ
ಬಾಯಿಗೆ ಸೆರಗ ಗಿಡಿದಿದ್ದಾಳೆ ಕೂರಿಗೆಯವ್ವ
ಹತ್ತು ಬಾಯಲಿ ಮಾತು ಬಿತ್ತುವ ತಾಯಿ
ಕುಡಿ ನೀರ ಕಟ್ಟೆಯಲಿ ಬೊಗಸೆ ನೀರಿಲ್ಲ
ಗುಂಡು ತೋಪಿನಲಿ ಕುಲಾಂತರಿಗಳ ಕುಡಿ
ನೆಡು ತೋಪಿನಲ್ಲಿ ತೂಗಿದೆ ಖಾಲಿ ಜೋಲಿ

ಪಕ್ಕದಲ್ಲಿ ಕೂತು ಚಳು ಕಾಸುವ ಕೇಡಿಗೆ
ಇನ್ನೇನು ಧಗ್ಗೆನ್ನಲಿದೆ ಧರೆಯೆಂಬ ಪುರಲೆ
ಕನಲಿದ್ದಾಳೆ ಇಳೆ ಕೆಂಡ ಕಾರಿದೆ ಬಯಲು
ಭರಣಿಯಾದರು ಬರಲಿ ತಣ್ಣಾಗಲಿ ಒಡಲಿ

ಎಸ್. ನಟರಾಜ ಬೂದಾಳು
ತಂತಿ ಕ್ವಾರ್ಟರ್ಸ್ ಅಂಚೆ, ಶೆಟ್ಟಿಹಳ್ಳಿ ರಸ್ತೆ, ತುಮಕೂರು - ೫೭೨ ೧೦೨

# ಪುರಾತನ ಕಾಲದ ಜನಜೀವನದ ಒಂದು ಮುಖ

**ನಿಜವಾಗಿಯೂ ಪ್ರಾಚೀನ ಕಾಲದಲ್ಲಿ ಭಾರತದ ಜನಜೀವನ ಉತ್ತಮ ಸ್ಥಿತಿಯಲ್ಲಿತ್ತೆ? ಆದಿಕಾಲದ ಬದುಕು ಎಲ್ಲರಿಗೂ ಸೌಲಭ್ಯವನ್ನು ಒದಗಿಸಿತ್ತೆ? ಎಲ್ಲವೂ ಇರಲಿಲ್ಲವೆನ್ನುವುದಕ್ಕೆ ವೈದಿಕ ಸಾಹಿತ್ಯವೇ ಸಾಕ್ಷಿ ಒದಗಿಸುತ್ತದೆ. ಜೀವನಕ್ಕೆ ಆಧಾರವಾದ ಆಸ್ತಿ ಇಲ್ಲದಿದ್ದರೆ, ಆಲೋಚನೆಗೆ ಪ್ರೇರೇಪಿಸದಂತೆ ಮಾಡಲು ವಿದ್ಯೆಯಿಂದ ವಂಚಿಸಿದರೆ ಮನುಷ್ಯ ಹೇಳಿದಂತೆ ಕೇಳುತ್ತಾನೆಂಬುದನ್ನು ಮೇಲ್ವರ್ಗ ಚೆನ್ನಾಗಿ ಅರಿತಿತ್ತು. ಹೀಗಾಗಿ ಅವರನ್ನು ಆಸ್ತಿ ಹೊಂದಲಷ್ಟೇ ಅನರ್ಹರನ್ನಾಗಿ ಮಾಡದೆ ವಿದ್ಯೆಯನ್ನೂ ನಿರಾಕರಿಸಿತು.**

■

**ಶ್ರೀಶ ಅಜೆಕಾರು**

**ಕಾ**ಲ ಹಾಳಾಗಿದೆ !

ಯಾಕೆ, ಹೇಗೆ, ಎಂದು ತಿಳಿದಿಲ್ಲವಾದರೂ ಕಾಲ ಹಾಳಾಗಿದೆ! ಇದೇ ಮಾತನ್ನು ಸುಮಾರು ಎರಡು ಸಾವಿರ ವರ್ಷದಷ್ಟು ಹಿಂದೆ ಪ್ಲೇಟೋ ತನ್ನ ಪುಸ್ತಕದಲ್ಲಿ ಹೇಳಿದ್ದಾನೆ. ಇಂದಿನವರೆಗೂ ಇದನ್ನೇ ಅನೇಕರು ಹೇಳುತ್ತಾ ಬಂದಿದ್ದಾರೆ. ಅಂತಹವರನ್ನೊಮ್ಮೆ ಕೇಳಿ ನೋಡಿದರೆ ರಾಮಾಯಣ ಕಾಲದ ನೀತಿ-ಶಾಂತಿ-ಸುಭಿಕ್ಷಗಳ ರಾಜ್ಯವನ್ನು ಮಾತುಗಳಿಂದಲೇ ಸೃಷ್ಟಿಸುತ್ತಾರೆ.

ನಿಜವಾಗಿಯೂ ಪ್ರಾಚೀನ ಕಾಲದಲ್ಲಿ ಭಾರತದ ಜನಜೀವನ ಉತ್ತಮ ಸ್ಥಿತಿಯಲ್ಲಿತ್ತೆ? ಆದಿಕಾಲದ ಬದುಕು ಎಲ್ಲರಿಗೂ ಸೌಲಭ್ಯವನ್ನು ಒದಗಿಸಿತ್ತೆ? ಎಲ್ಲವೂ ಇರಲಿಲ್ಲವೆನ್ನುವುದಕ್ಕೆ ವೈದಿಕ ಸಾಹಿತ್ಯವೇ ಸಾಕ್ಷಿ ಒದಗಿಸುತ್ತದೆ.

ವೈದಿಕ ಸಾಹಿತ್ಯವನ್ನು ಶ್ರುತಿ ಹಾಗೂ ಸ್ಮೃತಿಗಳೆಂದು ಎರಡು ಗುಂಪು ಮಾಡಲಾಗಿದೆ. ಸ್ಮೃತಿಗಳು ವೇದೋತ್ತರದ ಕಾಲದವು. ವೇದ ಹಾಗೂ ಇನ್ನಿತರ ಪೂರ್ವ ವೈದಿಕ ಸಾಹಿತ್ಯಗಳು ಅತ್ಯಂತ ಪ್ರಾಚೀನವಾದವು. ಅವು ಬರವಣಿಗೆ ಇನ್ನೂ ಆರಂಭವಾಗದಿದ್ದಾಗಿನ ಪಶುಪಾಲಕ ಜನಾಂಗವೊಂದು ಮೌಖಿಕವಾಗಿ ರಚಿಸಿದ್ದ ಹಾಡುಗಳು ಹಾಗೂ ಸ್ತುತಿಗೀತೆಗಳೆಂದು ಹೇಳಬಹುದು. ಆ ಜನಾಂಗದವರು ಆ ಕಾಲದಲ್ಲಿ ಪ್ರಾಕೃತಾವಸ್ಥೆಯ ಒಂದು ಘಟ್ಟದಲ್ಲಿದ್ದು ತಮ್ಮನ್ನು ಆರ್ಯರೆಂದು ಕರೆದುಕೊಳ್ಳುತ್ತಿದ್ದರು. ಈ ಸ್ತುತಿಗೀತೆಗಳನ್ನು ಒಂದು 'ವಿಶಿಷ್ಟ ವಿಧಾನ'ದಲ್ಲಿ ಮುಂದಿನ ತಲೆಮಾರುಗಳಿಗೆ ಬೋಧಿಸಲಾಗುತ್ತಿತ್ತು. ಹೀಗಾಗಿ ಇವುಗಳನ್ನು 'ಶ್ರುತಿ', ಅಂದರೆ 'ಕೇಳಿ ತಿಳಿದದ್ದು' ಎನ್ನುತ್ತಾರೆ.

ಸ್ಮೃತಿ ಗ್ರಂಥಗಳ ಸಾರರೂಪವಾಗಿ, ಅತ್ಯಂತ ಪ್ರಾತಿನಿಧಿಕವಾಗಿರುವ ಮನುಸ್ಮೃತಿಯು ಮನುವಿನಿಂದ ರಚಿತವಾದುದು. ಕೆಲವು ಇತಿಹಾಸಕಾರರು ಭಾರತದಲ್ಲಿ ಗುಲಾಮಗಿರಿ ಪದ್ಧತಿ ಇರಲಿಲ್ಲವೆಂದು ಹೇಳಿದರೂ ಕೂಡ, ಚಾತುರ್ವರ್ಣ್ಯ ವ್ಯವಸ್ಥೆ ಅಂದರೆ ಗುಲಾಮಗಿರಿ ವ್ಯವಸ್ಥೆ ಎಂಬುದನ್ನು ಮನುಸ್ಮೃತಿಯಿಂದ ಸ್ಪಷ್ಟವಾಗಿ ತಿಳಿಯಬಹುದು.

''ಮಾನವ ಮಹಿಮೆಯನ್ನು ಹಿಂದೂ ಧರ್ಮದಷ್ಟು ಉದಾತ್ತ ವಾಣಿಯಲ್ಲಿ ಪ್ರಪಂಚದ ಬೇರಾವ ಧರ್ಮವೂ ಬೋಧಿಸುವುದಿಲ್ಲ, ಆದರೆ ಬಡಬಗ್ಗರ ಹಾಗೂ ದೀನ ದಲಿತರ ಕುತ್ತಿಗೆಯನ್ನು ಹಿಂದೂ ಧರ್ಮ ಮೆಟ್ಟಿ ತುಳಿಯುವಂತೆ ಬೇರಾವ ಧರ್ಮವೂ ತುಳಿಯುವುದಿಲ್ಲ'' ಎಂದಿದ್ದಾರೆ ವಿಶ್ವಧರ್ಮವನ್ನು ಸಾರಿದ ಸ್ವಾಮಿ ವಿವೇಕಾನಂದರು. ಅವರು ಮುಂದುವರಿಯುತ್ತಾ: ಇದು ಧರ್ಮದ ತಪ್ಪಲ್ಲ, ಪಾರಮಾರ್ಥಿಕ ಹಾಗೂ ವ್ಯಾವಹಾರಿಕ ಎಂಬ ಸಿದ್ಧಾಂತಗಳ ಹೆಸರಿನಲ್ಲಿ ನಾನಾ ಬಗೆಯ ದಬ್ಬಾಳಿಕೆ ಸಾಧನಗಳನ್ನು ಸೃಷ್ಟಿಸುವ ಹಿಂದೂ ಧರ್ಮದ ಪೂಜಾರಿಗಳು, ಜೋಯಿಸರು ಮತ್ತು ಕಡಚಿಗಳದು, ಎನ್ನುತ್ತಾರೆ.

ಧರ್ಮ ಎಂದರೆ ಜನರನ್ನು ಒಟ್ಟುಗೂಡಿಸುವ ಸಾಧನವಾಗಬೇಕು. ಅಲೆಮಾರಿಯಾಗಿದ್ದ ಮಾನವ ಜೀವನವನ್ನು ಸುಗಮವಾಗಿಸಲು ಕುಟುಂಬವನ್ನು ಸ್ಥಾಪಿಸಿದಂತೆ ಅನ್ಯರ ಆಕ್ರಮಣವನ್ನು ತಡೆಯುವ ಸಲುವಾಗಿ, ತನ್ನ ಆಚಾರ-ವಿಚಾರ-ಸಂಸ್ಕೃತಿಗಳನ್ನು ರಕ್ಷಿಸಲು ಜನರನ್ನು ಧರ್ಮದಡಿ ತಂದ. ಆದರೆ ಹಿಂದೂ ಧರ್ಮದಲ್ಲಿ ಜಾತಿ ಹುಟ್ಟಿಬಿಟ್ಟಿತು. ಜಾತಿಯ ಮೂಲದ ಬಗ್ಗೆ ಏನೇ ಇದ್ದರೂ ಅದು ಪ್ರಚಲಿತವಾದದ್ದು, ಹುಟ್ಟಿನ ಮೂಲಕ ಗುರುತಿಸಿಕೊಳ್ಳುವಲ್ಲಿ. ಜಾತಿಯೇ ಅಳತೆಗೋಲು; ಇಲ್ಲಿ ಜಾತಿ ಇಲ್ಲದಿದ್ದರೆ ಏನೂ ಇಲ್ಲ. ಅರ್ಥಾತ್ ಜಾತಿಯೇ ಎಲ್ಲವೂ ಆಗಿದ್ದಿತು. ಚಾತುರ್ವರ್ಣ್ಯ ಪದ್ಧತಿಯಲ್ಲಿ ನಂಬಿಕೆಯೇ ಆಸ್ತಿಕತೆಯ ಮೂಲ ಸೆಲೆಯಾಗಿದೆ. ಇದನ್ನು ಪುಷ್ಟೀಕರಿಸಲು ಮನುಸ್ಮೃತಿಯಲ್ಲಿ 'ನಾಸ್ತಿಕೋ ವೇದ ನಿಂದಕಃ' ಎನ್ನಲಾಗಿದೆ. ಹೀಗೆ ಹಿಂದೂ ಧರ್ಮ, ಸ್ಮೃತಿಪುರಾಣಗಳು, ಜಾತಿವ್ಯವಸ್ಥೆಯನ್ನು ಪೋಷಿಸುತ್ತಾ ಹೋಗುತ್ತವೆ. (ಇದರ ಬಗ್ಗೆ ವಿವೇಕಾನಂದರು – ''ಸ್ಮೃತಿ ಪುರಾಣಗಳೆಲ್ಲ ಅಲ್ಪಮತಿಗಳಿಂದ ರಚಿತವಾದವುಗಳು. ಅವುಗಳಲ್ಲಿ ಬೇಕಾದಷ್ಟು ತಪ್ಪುಗಳಿವೆ. ಜಾತಿ, ಕುಲಗಳ ಹೆಮ್ಮೆ, ಅಸೂಯೆಗಳು ತುಂಬಿವೆ'' ಎಂದಿದ್ದಾರೆ.)

**ಶೂದ್ರರು ಯಾರು ?**

ಆರ್ಯ ಸಮಾಜದಲ್ಲಿ ಯಾರು ಯಾರೆಲ್ಲಾ ಶೂದ್ರರು ಎಂಬುದಕ್ಕೆ ಸ್ಮೃತಿಕಾರ ಮನುವು ಹೀಗೆ ಹೇಳುತ್ತಾನೆ :

'ಯುದ್ಧದಲ್ಲಿ ಸೋತು ಸಿಕ್ಕವರು, ದಾನ ರೂಪದಲ್ಲಿ ಬಂದವರು, ಪಿತೃವಿನ ದಾಸರು, ಅಪರಾಧದಿಂದ ದಂಡಿಸಿ ಬಂದವರು, ಕ್ರಯಕ್ಕೆ ಸಿಕ್ಕಿದವರು, ದಾಸಿಯಲ್ಲಿ ಹುಟ್ಟಿದವರು ಹಾಗೂ ಅನ್ನಕ್ಕಾಗಿ ಸೇರಿದವರು' ಅರ್ಥಾತ್ ಶ್ರಮಜೀವಿಯನ್ನು ಶೂದ್ರರೆಂದು ಸಮಾಜ ಸ್ವೀಕರಿಸಿತ್ತು (೮.೪೧೫). ಇದರಿಂದ ಸಮಾಜದ ಬಹುಪಾಲು ಜನರು ಶೂದ್ರರಾಗಿದ್ದರು ಎಂದು ತಿಳಿದುಬರುತ್ತದೆ. 'ಕ್ರೀತ' ಎಂಬ ಶಬ್ದವು 'ಮಾರಲ್ಪಟ್ಟ' ಎಂಬ ಅರ್ಥವನ್ನು ಕೊಡುವುದರಿಂದ ಭಾರತದಲ್ಲಿಯೂ ಗುಲಾಮರ ಮಾರುಕಟ್ಟೆ ಇತ್ತೆಂದು ತಿಳಿದುಬರುತ್ತದೆ. (ಸತ್ಯಹರಿಶ್ಚಂದ್ರನ ಕಥೆಯೂ ಇದನ್ನು ಸಮರ್ಥಿಸುತ್ತದೆ.) ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಶೋಷಣಾ ವ್ಯವಸ್ಥೆ ಹೆಚ್ಚು ಬದಲಾವಣೆಯನ್ನು ಕಂಡಿಲ್ಲ. ಇಂದಿನ ಬಂಡವಾಳಶಾಹಿಗಳೂ, ಹಿಂದಿನ ಪುರೋಹಿತಶಾಹಿಗಳೂ ತಮ್ಮ ಹಿತಾಸಕ್ತಿಗಾಗಿ ಬಲಿ ಕೊಟ್ಟದ್ದು ಶ್ರಮಿಕವರ್ಗದ ಸೌಖ್ಯವನ್ನೇ. ಇಂದು ಇದರ ಗುರಿ ನೇರವಾಗಿ ಆರ್ಥಿಕ ಲಾಭ; ಆದರೆ ಪುರೋಹಿತಶಾಹಿ ಆರ್ಥಿಕ ಲಾಭಕ್ಕೆ ಪಾರಮಾರ್ಥಿಕ ಮುಸುಕು ತೊಡಿಸಿತ್ತು.

ಶೂದ್ರನ ಕರ್ತವ್ಯದ ಬಗ್ಗೆ ಮನುವು ಹಲವು ಶ್ಲೋಕಗಳಲ್ಲಿ ವಿವರವನ್ನು ಕೊಡುತ್ತಾನೆ.

'ದ್ವಿಜರ ದಾಸನಾಗಿ ಶೂದ್ರನು ಸೇವೆಯನ್ನು ಮಾಡಬೇಕು' (೮.೪೧೦). ಇನ್ನೊಂದೆಡೆ ಆತ ಹೀಗೆ ಹೇಳುತ್ತಾನೆ : ಶೂದ್ರನಿಗೆ ದೇವರು ವಿಧಿಸಿದ ಒಂದೇ ಒಂದು ಕಸುಬೆಂದರೆ ದ್ವಿಜರನ್ನು ಅನಸೂಯನಾಗಿ ಸೇವೆ ಮಾಡುವುದು (೧೦.೪). ಇಲ್ಲಿ 'ದ್ವಿಜ' ಎಂದರೆ ಬ್ರಾಹ್ಮಣರೆಂದೇ ತಿಳಿಯಬೇಕಿಲ್ಲ.

'ಬ್ರಾಹ್ಮಣ, ಕ್ಷತ್ರಿಯ, ವೈಶ್ಯ – ಈ ಮೂರು ವರ್ಣದವರು ದ್ವಿಜರು'. 'ದ್ವಿಜ' ಎಂದರೆ ಎರಡು ಜನ್ಮಗಳವರು. ಆದರೆ ಶೂದ್ರನಿಗಿರುವುದು ಒಂದೇ ಜನ್ಮ. ಸಮಾಜದ ಮೇಲ್ವರ್ಗದವರಿಗೆ ಬೇಕಾದುದೆಲ್ಲವನ್ನೂ ಒದಗಿಸುವುದೇ ಶೂದ್ರನಾದವನ ಪರಮ ಕರ್ತವ್ಯ.

'ಜ್ಞಾನವೇ ಬ್ರಾಹ್ಮಣನ, ರಕ್ಷಣೆಯೇ ಕ್ಷತ್ರಿಯನ, ವ್ಯಾಪಾರವೇ ವೈಶ್ಯನ ಹಾಗೂ ಸೇವೆಯೇ ಶೂದ್ರನ ತಪಸ್ಸು ' (೧೧.೨೩೫) ಎಂದು ಮನುವು ನಾಲ್ಕು ವರ್ಣದವರ ಕೆಲಸದ ಬಗ್ಗೆ ಹೇಳುತ್ತಾನೆ.

'ಸ್ವರ್ಗ ಲಾಭಕ್ಕಾಗಿ ಅಥವಾ ಇಹದ ಸುಖಕ್ಕಾಗಿ ಶೂದ್ರನು ಬ್ರಾಹ್ಮಣನ ಸೇವೆ ಮಾಡಬೇಕು. ಏಕೆಂದರೆ ಅವನು ಹುಟ್ಟಿನಿಂದಲೇ ಬ್ರಾಹ್ಮಣನ ಸೇವಕ' (೧೦.೧೨೨). ಇದರಿಂದ ಪುಣ್ಯ ದೊರಕುತ್ತದೆ. ಇದನ್ನು ಬಿಟ್ಟು ಬೇರೇನೇ ಮಾಡಿದರೂ ಅವನಿಗೆ ಫಲವಿಲ್ಲ. ಆದರೆ ಶೂದ್ರರು ಮುದಿತನದಲ್ಲಿ, ಅಶಕ್ತಿಯ ಕಾರಣದಿಂದಾಗಿ ತಮ್ಮ ಕರ್ತವ್ಯದಿಂದ ವಿಮುಖರಾಗಬೇಕಿತ್ತು. ಸೇವೆಯಿಂದಲೇ ಮೋಕ್ಷ ಎಂಬ ಕಾರಣಕ್ಕಾಗಿ ಅವರು ತಮ್ಮ ಮಗನನ್ನು ಇದೇ ಕಾರ್ಯಕ್ಕೆ ಕಳುಹಿಸುತ್ತಿದ್ದರು. ಮಗನೇ ಮೋಕ್ಷದ ಹಾದಿ ಎಂಬ ಕಲ್ಪನೆ ಈ ರೀತಿ ಉದ್ಭವಿಸಿದ ನಂತರ ಕ್ರಮೇಣ ಎಲ್ಲಾ ವರ್ಗಗಳಿಗೆ ಪಸರಿಸಿರಬಹುದಾದ ಸುಳಿವು ಇಲ್ಲಿ ದೊರಕುತ್ತದೆ.

ಇನ್ನೊಂದೆಡೆ ಮನು ಹೇಳುತ್ತಾನೆ :

'ಶೂದ್ರ ಜೀತಕ್ಕಿರಲಿ, ಇಲ್ಲದಿರಲಿ, ಅವನನ್ನು ಸೇವೆ ಮಾಡುವಂತೆ ಬಲವಂತ ಪಡಿಸಬೇಕು. ಏಕೆಂದರೆ ಶೂದ್ರನನ್ನು ದೇವರು ಸೃಷ್ಟಿಸಿರುವುದೇ ಬ್ರಾಹ್ಮಣನ ಸೇವೆ ಮಾಡುವುದಕ್ಕಾಗಿ' (೮.೪೧೩). ಕರ್ತವ್ಯವಾಗಿದ್ದ ಸೇವೆ ಇಲ್ಲಿ ಆಜ್ಞೆಯಾಗುವುದನ್ನು ಗಮನಿಸಬಹುದು. ಇದನ್ನೇ ಇನ್ನೊಂದು ಶ್ಲೋಕವೂ ಹೇಳುತ್ತದೆ (೧೦.೧೨೯) :

'ಹಣ ಮಾಡುವ ಶಕ್ತಿಯಿದ್ದರೂ ಶೂದ್ರನು ಹಣ ಮಾಡಬಾರದು. ಶೂದ್ರನು ಹಣ ಮಾಡಿದರೆ ಅದು ಬ್ರಾಹ್ಮಣನನ್ನು ಬಾಧಿಸುತ್ತದೆ.' ಏಕೆಂದರೆ ಶೂದ್ರ ಹಣವಂತನಾದರೆ ಜೀತಗಾರನಾಗುವುದಿಲ್ಲ! ಒಂದು ವೇಳೆ ಶೂದ್ರನು ಈ ನಿಯಮವನ್ನು ಉಲ್ಲಂಘಿಸಿ ಹಣವನ್ನು ಸಂಪಾದಿಸಿ ಸಂಗ್ರಹಿಸಿದನೆಂದು ಇಟ್ಟುಕೊಳ್ಳಿ. ಆಗ, ಬ್ರಾಹ್ಮಣನು ಸಂಶಯಪಡದೆ ಶೂದ್ರನ ಹಣವನ್ನು ಕಿತ್ತುಕೊಳ್ಳಬೇಕು. ಕಾರಣ, 'ಶೂದ್ರನಿಗೆ ಸಂಪತ್ತೆಂಬುದೇ ಇಲ್ಲ, ಅವನ ಐಶ್ವರ್ಯವೆಲ್ಲವೂ ಬ್ರಾಹ್ಮಣನಿಗೇ ಸೇರತಕ್ಕದ್ದು' (೮.೪೧೭). ಕೆಳವರ್ಗದಲ್ಲಿ ಕ್ರಾಂತಿಯ ಕುರುಹು ಸಿಕ್ಕತಕ್ಷಣ ಅದನ್ನು ಚಿಗುರಿನಲ್ಲೇ ಚಿವುಟಿಹಾಕಲು ಮನುವು ಹೀಗೆ ಹೇಳುತ್ತಾನೆ :

'ಮೇಲು ಜಾತಿಯವರ ಕೆಲಸವನ್ನು ಮಾಡಲು ಶೂದ್ರನು ತಿರಸ್ಕರಿಸಿದರೆ ಅವನ ಆಸ್ತಿಪಾಸ್ತಿಯನ್ನು ರಾಜನು ಮುಟ್ಟುಗೋಲು ಹಾಕಿಕೊಂಡು ಅವನನ್ನು ಕೂಡಲೆ ರಾಜ್ಯದಿಂದ ಹೊರಗಟ್ಟಬೇಕು' (೧೦.೯೬). ಜನ ನಿಬಿಡತೆ ಇರದೆ, ಪರಸ್ಪರ ಅಂತರದ ಕಾರಣ ಹಳ್ಳಿಯ ಬದುಕೇ ದುಸ್ತರವಾಗಿದ್ದರೆ, ಹೊರಹಾಕಲ್ಪಟ್ಟವನು ಬದುಕಲುಂಟೆ ? ಹೀಗಾಗಿ ಎದುರು ಮಾತನಾಡದೆ ಆಜ್ಞಾಧಾರಕವಾಗಿರುವ ಜೀವನವನ್ನು ಸವೆಸಬೇಕಿತ್ತು. ಇಂಥಾ ಜೀವನವೂ ಹೇಗಿತ್ತು? ಚಂಡಾಲರು ಊರ ಹೊರಗೆ ವಾಸಿಸಬೇಕು. ಒಳ್ಳೆಯ ಪಾತ್ರೆಗಳನ್ನು ಅವರು ಉಪಯೋಗಿಸಬಾರದು. ಊಟಕ್ಕಾಗಿ ಒಡೆದ ಮಡಕೆಯನ್ನು ಬಳಸಬೇಕು. ಅವರು ಹೆಣದ ಬಟ್ಟೆಗಳನ್ನು ತೊಟ್ಟುಕೊಳ್ಳಬೇಕು. ಯಾವಾಗಲೂ ಹರಿದ ಬಟ್ಟೆಗಳನ್ನು ಉಡಬೇಕು. ನಾಯಿ, ಕತ್ತೆಗಳಷ್ಟೇ ಅವರ ಆಸ್ತಿ, ಕಬ್ಬಿಣದ ಬಳೆಗಳನ್ನು ಧರಿಸಿ ಸದಾ ಅಲೆಮಾರಿಗಳಾಗಿರಬೇಕು. ಮೇಲ್ಜಾತಿಯವರು ತಾವು ತಿಂದುಳಿದ ಎಂಜಲನ್ನು, ಕಾಳುಕಡ್ಡಿಯನ್ನು, ಶೂದ್ರನಿಗೆ ಕೊಡಬೇಕು (೧೦.೫೧, ೫೨, ೧೨೫). ಈ ಪ್ರಕಾರವಾಗಿ ದೇಶದ ಸರ್ವೈಶ್ವರ್ಯವನ್ನು ಉತ್ಪಾದಿಸಿ ಚುಕ್ಕಾಣಿ ಹಿಡಿಯಬೇಕಾದ ಶ್ರಮಿಕವರ್ಗವನ್ನು ಸ್ಮೃತಿಗಳಲ್ಲಿ ಕೀಳೆಂದು ಪರಿಗಣಿಸಿ ಅವಮಾನಿಸಲಾಗಿದೆ.

ಜೀವನಕ್ಕೆ ಆಧಾರವಾದ ಆಸ್ತಿ ಇಲ್ಲದಿದ್ದರೆ, ಆಲೋಚನೆಗೆ ಪ್ರೇರೇಪಿಸದಂತೆ ಮಾಡಲು ವಿದ್ಯೆಯಿಂದ ವಂಚಿಸಿದರೆ ಮನುಷ್ಯ ಹೇಳಿದಂತೆ ಕೇಳುತ್ತಾನೆಂಬುದನ್ನು ಮೇಲ್ವರ್ಗ ಚೆನ್ನಾಗಿ ಅರಿತಿತ್ತು. ಹೀಗಾಗಿ ಅವರನ್ನು ಆಸ್ತಿ ಹೊಂದಲಷ್ಟೇ ಅನರ್ಹರನ್ನಾಗಿ ಮಾಡದೆ ವಿದ್ಯೆಯನ್ನೂ ನಿರಾಕರಿಸಿತು. ನ ಶೂದ್ರಾಯ ಮತಿಂ ದದ್ಯಾತ್ (೪.೮೦) ಎಂದು ಮನುವು ಘೋಷಿಸುತ್ತಾನೆ. ಅಕಸ್ಮಾತ್ ಇದನ್ನು ಮೀರಿ ಶೂದ್ರನೊಬ್ಬ ವಿದ್ಯೆಯನ್ನು ಹೊಂದಿದರೆ ಏನಾಗುತ್ತದೆ ಎಂಬುದನ್ನು ಗೌತಮ ಧರ್ಮಸೂತ್ರ (೨.೩.೪) ಹೇಳುತ್ತದೆ :

ಶೂದ್ರರು ವೇದವನ್ನು ಕೇಳಿದರೆ ಕರಗಿಸಿದ ಸೀಸ ಹಾಗೂ ಅರಗುಗಳಿಂದ ಅವರ ಕಿವಿಯನ್ನು ತುಂಬಬೇಕು. ಅವರು ವೇದೋಚ್ಚಾರಣೆಯನ್ನು ಮಾಡಿದರೆ ನಾಲಿಗೆಯನ್ನು ಕತ್ತರಿಸಿಹಾಕಬೇಕು. ಕಂಠಪಾಠ ಮಾಡಿ ಹೃದಯ ಸೇರಿಬಿಟ್ಟಿದ್ದರೆ ದೇಹವನ್ನೇ ಕತ್ತರಿಸಿ ಎಸೆಯಬೇಕು ! 'ಸತ್ಯ-ನೀತಿ-ಅಹಿಂಸೆ' ಎಂದು ಬಾಯಲ್ಲಿ ಬಡಬಡಿಸುತ್ತಾ 'ಸ್ತ್ರೀಯರನ್ನೂ ಶೂದ್ರರನ್ನೂ ಕೊಲ್ಲುವುದು ಪಾಪವಲ್ಲ' (ಮನು · ೧೧.೬೬) ಎಂದು ಹೇಳಿಸಿತು.

ಹೀಗೆ ಕಾನೂನು ನಿರ್ಮಾಪಕರು, ಕಾನೂನು ವ್ಯಾಖ್ಯಾನದ ಹಕ್ಕನ್ನು ತಮ್ಮಲ್ಲೇ ಉಳಿಸಿಕೊಂಡು ತಮ್ಮ ಹಿತವನ್ನು ಕಾಪಾಡಿಕೊಂಡಿದ್ದಾರೆ; ದುಡಿಮೆಗೆ ಬೇಕಾದ ಶ್ರಮಿಕವರ್ಗವನ್ನು ಅಜ್ಞಾನದ ಕತ್ತಲೆಯಲ್ಲೇ ಇಡಲು ಪ್ರಯತ್ನಿಸಿದ್ದಾರೆ. ಪಾರಮಾರ್ಥಿಕತೆಯ ಪ್ರತಿಪಾದನೆಯ ಮೂಲಕ ಶೋಷಣೆಯ ವಿಧಾನವನ್ನು ಕಂಡುಕೊಂಡು ಪ್ರವಾಹಣನೆಂಬ ಋಷಿಯ ಬಗ್ಗೆ ಬರೆಯುತ್ತಾ, ಆತನು ತನ್ನ ಪತ್ನಿ ಲೋಪಾಳೊಂದಿಗೆ ನಡೆಸಿದ ಸಂವಾದವನ್ನು ಪಂಡಿತ ರಾಹುಲ ಸಾಂಕೃತ್ಯಾಯನರು 'ವೋಲ್ಗಾ-ಗಂಗಾ'ದಲ್ಲಿ ಈ ರೀತಿ ಶ್ರುತಪಡಿಸಿದ್ದಾರೆ :

ಪ್ರವಾಹಣ : ಬ್ರಹ್ಮವಿದ್ಯೆಗೂ ಮಿಗಿಲಾದ ಆವಿಷ್ಕಾರ ಇನ್ನೊಂದಿದೆ ಲೋಪಾ.

ಲೋಪಾ : ಯಾವುದು ಪ್ರವಾಹಣ ?

ಪ್ರವಾಹಣ : ಸತ್ತ ಮೇಲೆ ಈ ಲೋಕದಲ್ಲಿ ಜನ್ಮ ತಾಳುವುದು.

ಲೋಪಾ : ಎಲ್ಲಕ್ಕಿಂತಲೂ ದೊಡ್ಡ ಮಾಯಾ ಜಾಲವಿದು.

ಪ್ರವಾಹಣ : ಅಲ್ಲದೆ ಎಲ್ಲಕ್ಕಿಂತಲೂ ಪರಿಣಾಮಕಾರಿಯೂ ಆಗಿದೆ ಲೋಪಾ.

ಇಂತಹ ಮೂಢನಂಬಿಕೆಗಳನ್ನು 'ಕಾನೂನುಗಳು' ಗ್ರಂಥದಲ್ಲಿ ಪ್ಲೇಟೋ 'ಉಪಯುಕ್ತವಾದ ಸುಳ್ಳು' ಎನ್ನುತ್ತಾನೆ. ಪೊಲಿಬಿಯಸ್ ನಾಲ್ಕು ಸಾವಿರ ವರ್ಷಗಳ ಹಿಂದೆ ಹೇಳಿದ್ದಿದು : ''ಈಗ ಒಂದು ರಾಜ್ಯದಲ್ಲಿರುವ ನಾಗರಿಕರೆಲ್ಲಾ ತತ್ವಜ್ಞಾನಿಗಳಾಗಿರುವ ಸಾಧ್ಯತೆ ಇದ್ದರೆ ಆಗ ಇಂತಹ ಯೋಜನೆಯನ್ನು ನಾವು ಸಂಪೂರ್ಣವಾಗಿ ಕೈಬಿಡಬೇಕಾದೀತು. ಆದರೆ ಎಲ್ಲ ರಾಜ್ಯದಲ್ಲಿರುವ ಜನಸಾಮಾನ್ಯರು ಅಸ್ಥಿರ ಮನೋಭಾವದವರು.... ನಿಯಮಹೀನ ಆಮಿಷಗಳಿಗೆ ಬಲಿಯಾದವರು.... ಆದ್ದರಿಂದ ಅಗೋಚರ ವಸ್ತುವಿನ ಬಗೆಗೆ ಭಯವನ್ನು ಹುಟ್ಟಿಸುವುದರಿಂದ ಅಥವಾ ಅಂತಹುದೇ ಯಾವುದಾದರೂ ಬೇರೆ ಠಕ್ಕಿನ ಮಾರ್ಗಗಳಿಂದ ಜನರನ್ನು ಹಿಡಿತದಲ್ಲಿಟ್ಟುಕೊಳ್ಳಬೇಕು. ನಮ್ಮ ಹಿರಿಯರು ಜನಸಾಮಾನ್ಯರಿಗೆ ದೇವಾನುದೇವತೆಗಳ ಹಾಗೂ ಮರಣದ ನಂತರದ ಕಲ್ಪನೆಯನ್ನು ಪರಿಚಯಿಸಿದ್ದು ಇಂತಹ ನಿರ್ದಿಷ್ಟ ಉದ್ದೇಶಗಳಿಂದಲೇ ಹೊರತು ಬೇರೆ ಕಾರಣದಿಂದಲ್ಲ. ಈ ರೀತಿಯ ಭ್ರಾಮಕ ಕಲ್ಪನೆಗಳನ್ನು ಹೋಗಲಾಡಿಸ ಬೇಕೆನ್ನುವುದು ನಮ್ಮ ಬೇಹುಷಾರಿಯ ಮತ್ತು ಮೂರ್ಖತನದ ಕೆಲಸವಾದೀತು ಅಷ್ಟೆ''

ಇವೆಲ್ಲಾ ಶೋಷಣಾ ಅಸ್ತ್ರಗಳಿಗೆ, ಮೇಲ್ವರ್ಗದ ಕೋಪಕ್ಕೆ ಇವರು ಗುರಿಯಾದುದಕ್ಕೆ ಕಾರಣವೇನು ? ಮೂಲತಃ ಶೂದ್ರರು ಯಾರು ಎನ್ನುವುದಕ್ಕೆ ಕೆಲವು ವಿದ್ವಾಂಸರು ಹೀಗೆ ಹೇಳಿದ್ದಾರೆ : ಆರ್ಯರು ಭಾರತಕ್ಕೆ ಪ್ರವೇಶಿಸುವಾಗ ಅವರಿಗೂ ಹರಪ್ಪಾ ಸಂಸ್ಕೃತಿಯ ಜನರಿಗೂ ಯುದ್ಧವಾಯಿತು. ಆರ್ಯರ ಕುದುರೆ ಹೂಡಿದ ರಥಗಳು, ಬಿಲ್ಲುಬಾಣಗಳೆದುರು ಹರಪ್ಪೀಯ ಜನರ ಈಟಿ, ಭರ್ಜಿಗಳು ನಿಲ್ಲದೇ ಕೆಲವರು ಹತರಾದರು. ಇನ್ನು ಕೆಲವರು ದಕ್ಷಿಣದತ್ತ ಪಲಾಯನ ಮಾಡಿದರು. ಉಳಿದವರು ದಾಸರಾಗಿ ಸೆರೆಸಿಕ್ಕು 'ದಸ್ಯು'ಗಳೆಂದು ಕರೆಯಲ್ಪಟ್ಟರು. ಅವರೇ ಶೂದ್ರರು, ಭಾರತದ ಮೂಲನಿವಾಸಿಗಳು.

ಆದರೆ ಡಾ॥ ಅಂಬೇಡ್ಕರರು ಈ ವಾದವನ್ನು ಒಪ್ಪುವುದಿಲ್ಲ. ಮೊದಲನೆಯದಾಗಿ ಶೂದ್ರರು ಬೇರೆ, ದಾಸ-ದಸ್ಯುಗಳು ಬೇರೆ ಎಂಬುದರ ಬಗ್ಗೆ ಅಂಬೇಡ್ಕರರ ವಿಚಾರಸರಣಿ ಹೀಗಿದೆ : '''ಝೆಂಡ್ ಅವೆಸ್ತಾ'ದ 'ದಾಹಕ'ನೆಂಬುವವನೂ, ಋಗ್ವೇದದ 'ದಾಸ' ಎನ್ನುವವನೂ ಒಬ್ಬನೇ ವ್ಯಕ್ತಿಯೆ? ನಾಮಸಾದೃಶ್ಯವನ್ನು




**ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯ ಸಾಹಿತ್ಯ ಪ್ರಚಾರ ಆಂದೋಲನ**

ತಾ. ೨೮-೭-೦೩ರಂದು ನಗರದ ಕೆ. ಸಿ. ಜನರಲ್ ಆಸ್ಪತ್ರೆಯಲ್ಲಿ ಕರ್ನಾಟಕ ಸರ್ಕಾರದ ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ನಿರ್ದೇಶಕರಾದ ಡಾ॥ ಎಂ. ವಿ. ಮುರುಗೇಂದ್ರಪ್ಪ ಅವರು ವೈದ್ಯಕೀಯ ಪುಸ್ತಕ ಪ್ರದರ್ಶನವನ್ನು ಉದ್ಘಾಟಿಸಿದರು.

ಆಧಾರವಾಗಿಟ್ಟುಕೊಳ್ಳುವುದಾದರೆ ಆ ಹೆಸರುಗಳು ಒಬ್ಬನೇ ವ್ಯಕ್ತಿಯವು ಎಂಬ ತೀರ್ಮಾನಕ್ಕೆ ಎಡೆಮಾಡಿಕೊಡುತ್ತದೆ. ಸಂಸ್ಕೃತದ 'ದಾಸ' ಅವೆಸ್ತಾದಲ್ಲಿ 'ದಾಹ' ಆಗಿರಬಹುದು ('ಸ'ಪರ್ಶಿಯನ್ ಭಾಷೆಯಲ್ಲಿ 'ಹ' ಎಂದು ಪರಿವರ್ತನೆಗೊಳ್ಳುವುದರಿಂದ; ಉದಾ : ಸಿಂಧೂ-ಹಿಂದೂ)..... ಅವರಿಬ್ಬರೂ ಒಂದೇ ಎಂಬ ಬಗ್ಗೆ ಇದಲ್ಲದೆ ಬೇರೆ ಹಾಗೂ ಹೆಚ್ಚು ಸುಸಂಬದ್ಧ ಪ್ರಮಾಣಗಳು ಸಿಕ್ಕುತ್ತವೆ. ಯಾರ್ಸ್ಟರಲ್ಲಿ 'ಅಝಿದಾಹಕ' ಎಂಬಾತನು ಮೂರು ತಲೆ, ಮೂರು ಬಾಯಿ, ಆರು ಕಣ್ಣುಳ್ಳವನಾಗಿದ್ದನೆಂದು ಹೇಳಲಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿಯೇನೆಂದರೆ ಋಗ್ವೇದದಲ್ಲಿಯೂ (೧೦.೯೯.೬) ದಾಸನ ವರ್ಣನೆ ಇದೇ ಪ್ರಕಾರ ಬರುತ್ತದೆ. ಆತನಿಗೂ ಮೂರು ತಲೆ, ಆರು ಕಣ್ಣು ಅಂದಮೇಲೆ ಋಗ್ವೇದದ 'ದಾಸ' ಹಾಗೂ ಅವೆಸ್ತಾದ 'ದಾಹಕ' ಇಬ್ಬರೂ ಒಂದೇ ಎಂಬ ವಾದವನ್ನು ಒಪ್ಪಿಕೊಂಡಿದ್ದಾದರೆ ದಾಸರು ಭಾರತದ ಮೂಲನಿವಾಸಿಗಳಲ್ಲವೆಂದೇ ಸಿದ್ಧವಾಗುತ್ತದೆ". (ಅಂಬೇಡ್ಕರ್ ಸಂ. ೭. ಪು - ೧೫೫ - ೧೫೬)

ಶೂದ್ರರೆಂದರೆ ದಾಸರು ಎಂಬ ವಾದ ಸತ್ಯಕ್ಕೆ ದೂರವಾದುದು. ಏಕೆಂದರೆ 'ಶೂದ್ರ' ಶಬ್ದ ಋಗ್ವೇದದಲ್ಲಿ ಒಂದೇ ಒಂದು ಸಾರಿ ಅದೂ ದಾಸ ಮತ್ತು ದಸ್ಯುಗಳಿಗೆ ಸಂಬಂಧಪಡದ ಸಂದರ್ಭದಲ್ಲಿ ಬಂದಿದೆ. ಆದರೆ 'ದಾಸ' ಶಬ್ದ ೫೪ ಬಾರಿ ಹಾಗೂ 'ದಸ್ಯು' ಶಬ್ದ ೭೮ ಬಾರಿ ಪ್ರಸ್ತಾಪಿಸಲ್ಪಟ್ಟಿದೆ. ಅಲ್ಲದೆ 'ದಸ್ಯು' ಉತ್ತರ ವೈದಿಕ ಸಾಹಿತ್ಯದಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಮಹಾಭಾರತದ ಶಾಂತಿಪರ್ವದಲ್ಲಿ "ಎಲ್ಲ ವರ್ಣಗಳಲ್ಲೂ, ಎಲ್ಲಾ ಆಶ್ರಮಗಳಲ್ಲೂ ದಸ್ಯುಗಳು ಇರುವುದನ್ನು ಕಾಣಬಹುದು" ಎಂದು ಹೇಳಿದೆ. ಅಂದರೆ ಅವರು ಬಹುಶಃ ವೇದ ಕಾಲದ ಆರ್ಯರೊಂದಿಗೆ ಸಂಪೂರ್ಣವಾಗಿ ಬೆರೆತುಹೋಗಿದ್ದರೆಂದು ತೋರುತ್ತದೆ. ನಂತರದ ವೈದಿಕ ಸಾಹಿತ್ಯದಲ್ಲಿ 'ಶೂದ್ರ' ಶಬ್ದದ ಪ್ರಸ್ತಾಪ ಹೇರಳವಾಗಿ ಕಂಡುಬರುತ್ತದೆ.

ಆರ್ಯರು ಬೇರೆ, ಶೂದ್ರರು ಬೇರೆ ಮತ್ತು ಪರಸ್ಪರ ವಿರೋಧಿಗಳು ಎಂದು ಆಗಾಗ ಪ್ರಸ್ತಾಪಿಸಲಾಗಿದೆ. ಆದರೆ ಆರ್ಯರಲ್ಲಿ ಎರಡು ಬಗೆಯ (ವೇದಕಾಲದ ಹಾಗೂ ವೇದಪೂರ್ವಕಾಲದ) ಬಣಗಳಿದ್ದವು. ಒಂದು ಬಣದ ಆರ್ಯರು ಇನ್ನೊಂದು ಬಣವನ್ನು ಬೇರೆ ಅಥವಾ ವಿರೋಧಿಗಳೆಂದು ಭಾವಿಸುವುದು ಅಸಹಜವೇನಲ್ಲ. ಈ ಹಿನ್ನೆಲೆಯಲ್ಲಿ ಶೂದ್ರರು ಆರ್ಯರಿಗೆ ವಿರೋಧಿಗಳಾಗಿದ್ದಂತೆ ನಿರೂಪಿಸುವ ಉಕ್ತಿಗಳು "ಶೂದ್ರರು ಆರ್ಯರಾಗಿರಲಿಲ್ಲ" ಎಂದು ಹೇಳುತ್ತವೆ ಎಂದರ್ಥವಲ್ಲ. ಅವುಗಳ ಉದ್ದೇಶ ಅವರು ಆರ್ಯರ ಬೇರೆಯೇ ಒಂದು ಬಣ ಅಥವಾ ವರ್ಗವಾಗಿದ್ದರು ಎಂದು ತಿಳಿಸುವುದಾಗಿರಬಹುದು ಎಂದು 'ವೇದಗಳಲ್ಲಿ ಜನಸಾಮಾನ್ಯರು' ಪುಸ್ತಕದಲ್ಲಿ ಬಿ. ವಿ. ವೀರಭದ್ರಪ್ಪನವರು ಅಭಿಪ್ರಾಯಪಡುತ್ತಾರೆ.

ಇಂಡೋ-ಆರ್ಯನ್ ಸಮಾಜದಲ್ಲಿ ಶೂದ್ರರು ಕ್ಷತ್ರಿಯ ವರ್ಣಕ್ಕೆ ಸೇರಿದ್ದರು ಮತ್ತು ಅವರು ಪ್ರತ್ಯೇಕ ವರ್ಣವಾಗಿರಲಿಲ್ಲ ಎಂಬ ಸಿದ್ಧಾಂತವನ್ನು ಪ್ರತಿಪಾದಿಸಿದ್ದೇ ಅಲ್ಲದೆ ಅದಕ್ಕೆ ಅಗತ್ಯವಾದ ಸಾಕ್ಷ್ಯಾಧಾರಗಳನ್ನು ಸಹ ಡಾ|| ಅಂಬೇಡ್ಕರರು ತಮ್ಮ 'ಯಾರು ಶೂದ್ರರಾಗಿದ್ದರು?' ಎಂಬ ಕೃತಿಯಲ್ಲಿ ಸುದೀರ್ಘವಾಗಿ ಚರ್ಚಿಸಿದ್ದಾರೆ. ಅವರ ಪ್ರಕಾರ –

೧. ಶೂದ್ರರು ಸೂರ್ಯವಂಶದ ಆರ್ಯ ಸಮುದಾಯದಲ್ಲಿ ಒಂದು ಸಮುದಾಯವಾಗಿದ್ದರು.

೨. ಇಂಡೋ-ಆರ್ಯ ಸಮಾಜದಲ್ಲಿ ಶೂದ್ರರು ಕ್ಷತ್ರಿಯ ವರ್ಣಕ್ಕೆ ಸೇರಿದ್ದರು.

೩. ಆರ್ಯ ಸಮಾಜವಲ್ಲಿ ಒಂದು ಕಾಲದಲ್ಲಿ ಮೂರೇ ವರ್ಣಗಳನ್ನು ಮಾನ್ಯ ಮಾಡಲಾಗಿತ್ತು. ಅವು ಬ್ರಾಹ್ಮಣ ಕ್ಷತ್ರಿಯ ಮತ್ತು ವೈಶ್ಯ ವರ್ಣಗಳಾಗಿದ್ದವು. ಆಗ ಶೂದ್ರರು ಪ್ರತ್ಯೇಕ ವರ್ಣದವರಾಗಿರದೆ ಕ್ಷತ್ರಿಯ ವರ್ಣದ ಒಂದು ಭಾಗವಾಗಿದ್ದರು.

೪. ಶೂದ್ರ ಅರಸರು ಮತ್ತು ಬ್ರಾಹ್ಮಣರ ನಡುವೆ ಚಿರಕಾಲದ ದ್ವೇಷವಿತ್ತು; ಬ್ರಾಹ್ಮಣರನ್ನು ಅತಿಯಾದ ಹಿಂಸೆಗೆ ಮತ್ತು ಅವಮಾನಕ್ಕೆ ಗುರಿಪಡಿಸಲಾಗಿತ್ತು.

೫. ಹಿಂಸೆ ಮತ್ತು ತುಳಿತದ ಪರಿಣಾಮವಾಗಿ ಶೂದ್ರರನ್ನು ದ್ವೇಷಿಸುತ್ತಿದ್ದ ಬ್ರಾಹ್ಮಣರು ಅವರಿಗೆ ಜನಿವಾರ ಕೊಡಲು ನಿರಾಕರಿಸಿದರು. ಮತ್ತು

೬. ಜನಿವಾರ ದೀಕ್ಷೆಯಿಂದ ವಂಚಿತರಾದ ಶೂದ್ರರು ಸಾಮೂಹಿಕವಾಗಿ ಅವಹೇಳನಗೊಂಡು, ವೈಶ್ಯರಿಗಿಂತಲೂ ಕೆಳಗಿಳಿದು ನಾಲ್ಕನೆ ವರ್ಣ ನಿರ್ಮಾಣ ಮಾಡಿದರು.

ಇದಕ್ಕೆ ಪೂರಕವಾಗಿ ಮನುಸ್ಮೃತಿಯಲ್ಲೂ ಆಧಾರ ಸಿಗುತ್ತದೆ. ಕ್ಷತ್ರಿಯರಿಗೆ ಉಪನಯನ ನಿರಾಕರಿಸಿದ್ದರಿಂದ ಅವರು ಶೂದ್ರರಾದರು ಎಂಬ ಮಾತನ್ನು ಮನು (೧೦.೪೩) ಹೇಳುತ್ತಾನೆ :

'ಹುಟ್ಟಿನಿಂದ ಕ್ಷತ್ರಿಯರಾದರೂ ಸಂಸ್ಕಾರ ಲೋಪದಿಂದಲೂ, ಬ್ರಾಹ್ಮಣರ ಒಡನಾಡಿತನ ಇಲ್ಲದೆಯೂ ಕ್ಷತ್ರಿಯರು ಶೂದ್ರರಾದರು.' ಈ ರೀತಿ ಶೂದ್ರರಾಗಿ ಅಮಾನವೀಯ ಅವಮಾನವನ್ನು ಅನುಭವಿಸಿದರು.

ಆದರೆ ಈ ದುರ್ಭರ ಬದುಕನ್ನು ಸವೆಸುವ ಸ್ಥಿತಿಯಲ್ಲಿ ಶೂದ್ರವರ್ಗವು ಇತ್ತು ಎಂಬ ಸತ್ಯಾಂಶವನ್ನು ಮುಚ್ಚಿಡುತ್ತಿರುವುದು ತರವಲ್ಲ. ತಮ್ಮ ಸ್ವಾರ್ಥ ಸಾಧನೆಗೋಸ್ಕರ ನಿಸ್ವಾರ್ಥದ ಸೋಗಿನಲ್ಲಿ ಅಂದಿನ ಸಮಾಜದ ಜನಜೀವನದ ಒಂದು ಪಾರ್ಶ್ವವನ್ನಷ್ಟೇ – ಮೇಲ್ವರ್ಗದ ಬದುಕನ್ನು – ಅದೂ ವೈಭವೀಕರಿಸಿ ಹೇಳಲಾಗುತ್ತಿದೆ. ಬ್ರಾಹ್ಮಣರಿಂದಾಗಿ ದೌರ್ಜನ್ಯವನ್ನು ಸಾಧ್ಯವಾದಷ್ಟು ನಿರಾಕರಿಸುವ ಪ್ರಯತ್ನ ನಡೆಯುತ್ತಿದೆ. ಇದನ್ನು ಇತಿಹಾಸದ ಬ್ರಾಹ್ಮಣೀಕರಣ ಎನ್ನಬಹುದೇನೋ! ಇದನ್ನೇ ಜನರಿಗೆ ಉದ್ದೇಶಪೂರ್ವಕವಾಗಿ ವ್ಯವಸ್ಥಿತ ರೀತಿಯಲ್ಲಿ ತಲುಪಿಸಲಾಗುತ್ತಿದೆ. ಈ ಪರಿಸ್ಥಿತಿಯಲ್ಲಿ ಇತಿಹಾಸದ ಕಟುಸತ್ಯಗಳನ್ನು ಹೊರಗೆಡಹುವವರು ಭಯೋತ್ಪಾದಕರಾಗಿ, ವಿಚಾರವಾದಿಗಳು ವಿಚಾರವ್ಯಾಧಿಗಳಾಗಿ ಕಾಣಿಸುವುದು ಸಹಜ. ಇಂತಹವರ ಬೌದ್ಧಿಕ ಮಟ್ಟವು ಅಷ್ಟರಲ್ಲೇ ಇರುತ್ತದೆ. ಜನರಿಗೆ ಇಂತಹವರೇ ನಾಯಕತ್ವ ಒದಗಿಸುವವರಾದರೆ ಅಸಂಬದ್ಧ ಪ್ರಲಾಪಗಳಲ್ಲದೆ ಇನ್ನೇನು ಬಂದೀತು?

*(ವಿವಿಧ ಮೂಲಗಳಿಂದ)*

**ಶ್ರೀಶ ಅಜೆಕಾರು**
'ಪುನೀತ ನಿಲಯ', ಅಜೆಕಾರು - ೫೭೪ ೧೦೧
ಉಡುಪಿ ಜಿಲ್ಲೆ

# ಧರ್ಮದ ವಸತಿ

ಮರಾಠಿ ಮೂಲ : ರಂಗನಾಥ ಪಠಾರೆ




ಸಂಜೆ ಕಾಲೇಜು ಬಿಟ್ಟ ಬಳಿಕ ಹೊರಬಿದ್ದ ಪ್ಯೂನ್ ಅಹಮದ ಸೈಕಲ್ಲೇರಿ ವೇಗವಾಗಿ ತುಳಿಯುತ್ತ ನಗರದ ಕಡೆ ಹೊರಟಾಗ ರಸ್ತೆಯಲ್ಲಿ ಜನ ಸಂಚಾರ ಅಷ್ಟೊಂದಿರಲಿಲ್ಲ. ವಾತಾವರಣದಲ್ಲಿ ಒಂದು ಬಗೆಯ ಕಾವಿತ್ತು. ಇದು ಸಹಜವಾಗಿದ್ದರೂ ನಗರದ ಕೆಳಭಾಗದಲ್ಲಿದ್ದ ಬಾಲಮ ಶೇಠನ ದಾರೂದಂಗಡಿ ತಲುಪುವ ಯೋಚನೆಯಷ್ಟೇ ಅವನ ತಲೆಯೊಳಗಿತ್ತು. ರಸ್ತೆ, ರಹದಾರಿ, ಜನ - ಇಂಥ ವಿಷಯವೆಲ್ಲ ಅವನ ತಲೆಯೊಳಗೆ ವಿಶೇಷವಾಗಿರಲಿಲ್ಲ. ಆದಷ್ಟು ಬೇಗ ಶೆರೆಯಂಗಡಿಗೆ ತೆರಳಿ ಒಂದೆರಡು ರೂಪಾಯಿಯ ಮಾಲು ಹೊಟ್ಟೆಗಿಳಿಸಿದರೆ ಸಾಕು, ಮೈಯಲ್ಲಿ ಚುರುಕುತನ ಅನುಭವಕ್ಕೆ ಬರುತ್ತದೆ. ಅದರೆದುರು ಉಳಿದದ್ದೆಲ್ಲ ಕ್ಷುಲ್ಲಕ. ಪ್ರಯೋಗ ಶಾಲೆಯೊಳಗಿನ ಇಡೀ ದಿನದ ಕೆಲಸ, ಟೇಬಲ್ ಒರೆಸುವುದು, ಉಪಕರಣಗಳನ್ನು ಜೋಡಿಸುವುದು, ಕಸ ಹೊಡೆಯುವುದು, ಪ್ರಾಧ್ಯಾಪಕರು ಉಗುಳಿ ಹೊಲಸು ಮಾಡಿದ ವಾಶ್‌ಬೇಸಿನ್ ತೊಳೆಯುವುದು, ಸಿಕ್ಕ ಸಿಕ್ಕ ಕೆಲಸ ಮಾಡಬೇಕು. ಅಲ್ಲಿ ಎಲ್ಲರೂ ಗಂಡಂದಿರೆ ! ಎದುರಿಗೆ ಬಂದ ಪ್ರತಿಯೊಬ್ಬನೂ ಕೆಲಸ ಹೇಳುತ್ತಾನೆ. ಇಲ್ಲ ಎನ್ನುವಂತಿಲ್ಲ ! - ಕಾರಣ : ಇದಕ್ಕೆಲ್ಲ ಸಂಜೆಯ ಎರಡು ರೂಪಾಯಿ ಮಾಲಿನ ರುಚಿ ಮನದಲ್ಲಿ ಮೂಡುತ್ತಿರುವುದೇ ಒಂದು ಸಮಾಧಾನದ ಸಂಗತಿ. ಅಲ್ಲದೆ ಎರಡು ರುಪಾಯಿ ಬರೇ ಒಂದು ಆರಂಭ ಅಷ್ಟೇ. ಅಲ್ಲಿ ಯಾರಾದರೂ ಭೆಟ್ಟಿಯಾಗುತ್ತಲೇ ಇರುತ್ತಾರೆ. ರುಪಾಯಿ - ಎಂಟಾಣೆಯ ಕುಡಿಯುವ - ಕುಡಿಸುವ ಆಗ್ರಹ ಮಾಡುತ್ತಿರುತ್ತಾರೆ. ಹಣ ಯಾರು ತಾನೆ ಖರ್ಚು ಮಾಡುತ್ತಾರೆ? ಬಹಳಷ್ಟು ಸಲ ಅಹಮ್ಮದನದ್ದೇ ಖರ್ಚಾಗುತ್ತದೆಯೇ ಆದರೂ - ಅದಕ್ಕೆ ಮಹತ್ವವಿಲ್ಲ. ಬಳಿಕ ಮಾತುಕತೆ ಆರಂಭ. ಮನದೊಳಗಿನದನ್ನು ಕಾರಿಕೊಳ್ಳುವುದು - ಭವಿಷ್ಯದ ಮನೋರಥ, ಭಾಗ್ಯೋದಯದ ಆಕಾಂಕ್ಷೆ. ನಿಶೆಯಲ್ಲಿ ಎಲ್ಲ ವಿಷಯ ಸಹಜ, ಸುಲಭ ಎಂದೆನಿಸುತ್ತದೆ. ಎಲ್ಲ ಅಡಚಣೆ ಸುಲಭವಾಗಿ ಪಾರುಮಾಡುವುದು ಸಾಧ್ಯವೆನಿಸುತ್ತದೆ. ಮನದೊಳಗೆ ಸಂತಸದ ಹೊರತು ಬೇರೇನೂ ಇರುವುದಿಲ್ಲ, ಕೊನೆಯ ಪಕ್ಷ ಮನೆ ತಲುಪುವವರೆಗಾದರೂ. ಮನೆಗೆ ಹೋದ ಬಳಿಕ ನೆಲಕ್ಕಪ್ಪಳಿಸಲಾಗುತ್ತಿತ್ತು. ಅದು ಬೇರೆ ವಿಷಯ.

ಅಹಮ್ಮದನ ಶೆರೆಯಂಗಡಿ ಬಳಿ ಇಳಿದು ಸೈಕಲ್ ಸ್ಟ್ಯಾಂಡಿಗೆ ಹಚ್ಚಿದ. ಅಲ್ಲಿ ನೀರವತೆ. ಆಳುಮಗ ಬೆದರಿದ ಮುಖ ಹೊತ್ತು ಕುಳಿತಿದ್ದ. ಉಳಿದ ಸಮಯದಲ್ಲಿ ಇಷ್ಟು ಹೊತ್ತಿಗೆ ಅಂಗಡಿ ಕಿಕ್ಕಿರಿದು ತುಂಬಿರುತ್ತಿತ್ತು. ಒಮ್ಮೊಮ್ಮೆ ನಿಂತೇ ಗಂಟಲಿಗೆ ಸುರಿಯಬೇಕಾಗುತ್ತಿತ್ತು. ಕಡಲೆಯ ಪಾಕೀಟು ಖರೀದಿಸಿ ಹೊರಗೇ ತಿನ್ನುತ್ತ ನಿಲ್ಲಬೇಕಾಗುತ್ತಿತ್ತು.

''ಏನೋ, ಪೋಲಿಸನವರು ಬಂದು ಹೋದರೇನು ಮತ್ತೆ? ಬಾ, ಹಾಕ ನನಗೆ ಎರ್ಡ ರೂಪಾಯಿದು'', ಅಹಮ್ಮದ ಎಂದಿನ ಅವಸರದಲ್ಲಿ ಹೇಳಿದ. ಅವನಿಗೇನೋ ಕುತೂಹಲ. ಇಲ್ಲದಿದ್ದರೆ ಅವನೆಂದೂ ತಲೆ ಕೆಡಿಸಿಕೊಳ್ಳುವ ಪೈಕಿಯವನಲ್ಲ. ನೌಕರ ಸ್ವಲ್ಪ ಹಿಂದೆ - ಮುಂದೆ ನೋಡಿದ. ಬಳಿಕ ಒಳಗೆ ಹೋಗಿ ಒಂದು ದೊಡ್ಡ ಬಾಟಲಿಯನ್ನೇ ತಂದ.

''ಬೇಗ, ಬೇಗ ಕುಡಿರಿ. ಇಂದ ಅಂಗಡಿಯೇನ ತೆರೆಯೋ ಹಾಂಗ ಕಾಣೋದಿಲ್ಲ. ಶೇಠ ಊರಾಗ ಹೋಗ್ಯಾರು, ಅಂಗಡಿ ಮುಚ್ಚಂತಾನೂ ಹೇಳ್ಯಾರ. ಮಾಲು ಬೇರೆ ಕಡೆ ಒಯ್ದಾರ. ನೀವು ನಮ್ಮ ಖಾಯಂ ಗಿರಾಕಿಯಂತ...''

''ಯಾಕೋ ? ಏನಾತು ?'' ಹೊಟ್ಟೆಯೊಳಗೆ ಒಂದು ಗ್ಲಾಸು ಇಳಿದ ಬಳಿಕ ಅಹಮ್ಮದ ಸ್ವಲ್ಪ ಚುರುಕಾದ.

''ಅಯ್ಯೋ ! ನಿಮ್ಗೇನೂ ಗೊತ್ತಿಲ್ಲ ಹಾಂಗಾದರ ! ನಿನ್ನಿ ರಾತ್ರಿ ಸಿನೇಮಾ ಥೇಟರ ಹತ್ತಿರ ಬಡಿದಾಟ, ಚೂರಿ ಇರಿತ ನಡೀತು. ಒಬ್ಬಂವ ನಮ್ಮ ಪೈಕಿ, ಮತ್ತೊಬ್ಬಂವ ಭಾಯಿಸಾಬ ಪೈಕಿ...''

ಈ ಸಂಗತಿ ಕೇಳಿ ಉಳಿದ ಹೊತ್ತಾಗಿದ್ದರೆ ಗಲಿಬಿಲಿಗೊಳ್ಳುತ್ತಿದ್ದ. ಆದರೆ ಅವನ ಲಕ್ಷ್ಯ ನೌಕರನ ಮಾತಿನ ಕಡೆಗಿರಲಿಲ್ಲ. ಅವನು ಸದಾ ಹೀಗೆಯೇ. ಏನೋ ಕೇಳಲು ಹೋಗುತ್ತಾನೆ. ಅವರು ಹೇಳುವಾಗ ಆ ಕಡೆ ಲಕ್ಷ್ಯವೇ ಇರುವುದಿಲ್ಲ.

ಹಿಂದಿನ ದಿನ ಸಿನೇಮಾ ಥೇಟರ ಬಳಿ ಇಬ್ಬರು ಗೂಂಡಾಗಳ ನಡುವೆ ಹೊಡೆದಾಟ ನಡೆಯಿತು. ಬಳಿಕ ಹಲವು ಗೂಂಡಾಗಳು ಸೇರಿ ಅವರ ನಡುವೆಯೂ ಬಡಿದಾಟ, ಚೂರಿ ಇರಿತ ನಡೆಯಿತು. ವಾತಾವರಣ ಪ್ರಕ್ಷುಬ್ಧಗೊಂಡಿತು. ಗೂಂಡಾಗಳಲ್ಲಿ ಕೆಲವರು ಹಿಂದೂ, ಕೆಲವರು ಮುಸ್ಲಿಂ. ಹೀಗಾಗಿ ಸಹಜವಾಗಿ ವಾತಾವರಣ ಕಾವೇರಿತು. ಈ ನಗರದಲ್ಲಿ ಯಾವ ಕ್ಷಣಕ್ಕೂ ವಾತಾವರಣ ಪ್ರಕ್ಷುಬ್ಧಗೊಳ್ಳಬಹುದು. ಇಲ್ಲಿ ಮುಸ್ಲಿಂರ ಸಂಖ್ಯೆ ಕಡಿಮೆ. ಅಲ್ಲದೆ ನಿರುದ್ಯೋಗಿ ಜನರಿಗಿಲ್ಲಿ ಸಾಕಷ್ಟು ಧಂದೆಗೂ ಅವಕಾಶವಿದೆ. ಸರಿಯಾಗಿ ಲಕ್ಷ್ಯ ವಹಿಸಲು ಪೋಲಿಸರ ಶಿಷ್ಟಮಂಡಳಿಯೂ ಇದೆ. ಧಂದೆಯ ಘನತೆಗೆ ತಕ್ಕಂತೆ ಜನರನ್ನೂ ಅವರು ಸಾಕಬೇಕಾಗುತ್ತದೆ. ಇಂಥ ಜನ ಇಲ್ಲಿ ಬಹಳ. ಕೋಳಿ ಕಾಳಗದಂತೆ ಅವರ

ಜಗಳವೂ ಬಹಳ. ''ಹೌದ ? ಹುಂ, ಹುಂ'' ಅಹಮ್ಮದ ನಿರರ್ಥಕವಾಗಿ ವಟಗುಟ್ಟಿದ. ಇಷ್ಟರವರೆಗೆ ಮೂರು ರುಪಾಯಿಯ ಶೆರೆ ಹೊಟ್ಟೆ ಸೇರಿತ್ತು.

''ಮತ್ತೇನ್ರಿ, ಭೈಯಾಸಾಬನ ಹುಡುಗರು ಚೂರಿ ಹಾಕಿ ಓಡಿ ಹೋದರರಿ. ನಮ್ಮ ಮಂದಿ ಬಂದ ಸೇರೋದರೊಳಗ ಪೊಲೀಸರು ಹಾಜರ್...'' ನೌಕರ ಕೆರಳಿದ ಸ್ವರದಲ್ಲಿ ಹೇಳುತ್ತಿದ್ದ. ನೌಕರ ಅಹಮ್ಮದನನ್ನು ಹಿಂದೂ ಎಂದುಕೊಂಡಿದ್ದ. ಇಲ್ಲದಿದ್ದರೂ ಹೆಸರು ಗೊತ್ತಿರದಿದ್ದರೆ ಹಿಂದೂ - ಮುಸ್ಲಿಂರಲ್ಲಿ ಎಲ್ಲಾದರೂ ವ್ಯತ್ಯಾಸ ಇರುತ್ತದೆಯೆ? ಅಹಮ್ಮದನಂತೂ ಸರಳ ಕುಲೀನ ಮನೆತನದವನಂತೆ ಕಾಣುತ್ತಿದ್ದ! ಅಂಥವನು ಮುಸ್ಲಿಂ ಹೇಗಿದ್ದಾನು ? ಯಾರ ಮನದಲ್ಲೂ ಸಹ ಬರಲಿಕ್ಕಿಲ್ಲ!

''ಭಾಳ ಸೊಕ್ಕ ಬಂದೈತ್ರಿ ಈ ಭೈಯಾ ಸಾಬಗ !'' ನೌಕರ ಹೇಳಿದ.

ಈಗೆಲ್ಲೋ ಅಹಮ್ಮದನ 'ಟ್ಯೂಬ್' ಹೊತ್ತಿತು.

ಹಿಂದೂಗಳ ಬಾಯಿಂದ ಇಂಥ ಮಾತು ಕೇಳುವುದು ಅವನಿಗೆ ಇದೇನು ಮೊದಲ ಸಲವಲ್ಲ. ಅವನನ್ನು ಹಿಂದೂ ಎಂದೇ ಭಾವಿಸಿ ಅವನೊಂದಿಗೆ ಬಹಳ ಜನ ಮುಕ್ತರಾಗಿ ಮಾತಾಡುತ್ತಿದ್ದರು. ಹೆಚ್ಚು ಪರಿಚಯವಿದ್ದವರಿಗೆ ಅವನ ಹೆಸರು ಗೊತ್ತಿರುವುದರಿಂದ ಈ ಪ್ರಶ್ನೆ ಉದ್ಭವಿಸುವಂತಿರಲಿಲ್ಲ. ಕಳೆದ ಒಂದು ವರ್ಷದಿಂದ ಅವನು ಈ ಶೆರೆಯಂಗಡಿಗೆ ಬರುತ್ತಿದ್ದ. ಆದರೆ ನೌಕರನಿಗೆ ಅವನ ಹೆಸರು ಗೊತ್ತಿರಲಿಲ್ಲ. ಹೀಗಾಗಿ ಅವನು ಮುಕ್ತವಾಗಿ ತನ್ನ ಭಾವನೆ ವ್ಯಕ್ತಪಡಿಸುತ್ತಿದ್ದ. ''ಬೇಗ ಹೋಗರಿ ಮನೀಗೆ. ಇಂದ ಗದ್ದಲ ಆಗತದ'' ನೌಕರ ಹೇಳಿದ.

ಅಹಮ್ಮದ ಸೈಕಲ್ಲೇರಿ, ಕತ್ತಲೆಯಲ್ಲಿ ಮಾಯವಾದ. ಇವತ್ತು ಅವನು ತುಂಬಾ ಬೇಗ ಮನೆ ಕಡೆ ಹೊರಟಿದ್ದ. ಇಲ್ಲದಿದ್ದರೆ ಸಾಮಾನ್ಯವಾಗಿ ತುಂಬಾ ಹೊತ್ತಾಗುತ್ತಿತ್ತು. ಅವನ ಬೀಬಿಯಂತೂ ನಿಷ್ಠೆಯಿಂದ ಹಾದಿ ಕಾಯುತ್ತಿರುತ್ತಾಳೆ. ಅಲ್ಲದೆ ಅವನ ಇಬ್ಬರು ಹೆಣ್ಣು ಮಕ್ಕಳೂ ಸಹ - ರುಕ್ಸಾನಾ, ಖುರ್ಶಿದ - ಅವನ ಹಾದಿಯ ಕಡೆಗೆನೆ ಕಣ್ಣು ಊರಿರುತ್ತಿದ್ದರು. ಅವನು ಮನೆ ತಲುಪಿದ ತಕ್ಷಣ ''ಅಬ್ಬಾ ಬಂದ ! ಅಬ್ಬಾ ಬಂದ !'' ಎಂದು ಕೊರಳಿಗೆ ಜೋತು ಬೀಳುತ್ತಿದ್ದರು. ಬಳಿಕ ಏನಾದರೂ ತಿಂಡಿ. ಬಹುಶಃ ಶೇವು, ಇಲ್ಲವೇ ಡಾಳ ಇಂಥದೇನಾದರೂ ಕೊಟ್ಟರೆ ಮಚ ಮಚ ತಿನ್ನುತ್ತ ಕೂಡುತ್ತಿದ್ದರು. ಮನೆ ನಗರದಿಂದ ಸ್ವಲ್ಪ ಹೊರಗೆ ಹೊಸ ಬಡಾವಣೆಯಲ್ಲಿತ್ತು. ಅವನು ಎರಡು - ಮೂರು ವರ್ಷಗಳ ಹಿಂದೆ ನೌಕರಿ ನಿಮಿತ್ತ ಈ ಶಹರಿಗೆ ಬಂದಾಗ ಅವನ ನೆಂಟರಿಷ್ಟರು ಮುಸ್ಲಿಂ ಮೊಹಲ್ಲಾದಲ್ಲೇ ಮನೆ ಹಿಡಿಯುವಂತೆ ಸಲಹೆ ನೀಡಿದ್ದರು. ಕೆಲವರಂತೂ ತುಂಬಾ ಒತ್ತಾಯಿಸಿದ್ದರು. ಆದರೆ, ಅಹಮ್ಮದ ಮಾತ್ರ ಈ ಹೊಸ ಬಡಾವಣೆಯಲ್ಲೇ ಮನೆ ಹಿಡಿದ. ಒಂದೇ ಕೋಣೆಯಿತ್ತು, ಆದರೂ ಸಾಕಷ್ಟು ದೊಡ್ಡದು. ನೆರೆ-ಹೊರೆ ಚೆನ್ನಾಗಿತ್ತು. ಅವನು ಯಾವ ಊರಿನಲ್ಲಿ ಬೆಳೆದು ದೊಡ್ಡವನಾದನೋ ಅಲ್ಲಿ ಮುಸಲ್ಮಾನರ ಒಂದೇ ಕುಟುಂಬವಿತ್ತು. ಉಳಿದವರೆಲ್ಲ ನೂರಾರು ಜಾತಿಯ ಹಿಂದೂಗಳು. ಅಲ್ಲಿ ಅವನಿಗೆ ಆರಾಮ ಎನಿಸುತ್ತಿತ್ತು. ಮನೆಯಲ್ಲಿದ್ದಂತೆ ಅನಿಸುತ್ತಿತ್ತು. ಮುಸ್ಲಿಂರ ಮೊಹಲ್ಲಾದಲ್ಲಿ ಎರಡೇ ಬಗೆ. ತುಂಬಾ ತುಂಬಾ ಶ್ರೀಮಂತರ ನಾಲ್ಕಾರು ದೊಡ್ಡ ದೊಡ್ಡ ಹವೇಲಿಗಳು, ಇನ್ನೊಂದು ಸಾಮಾನ್ಯ ಜನರ ದಾರಿದ್ರ್ಯ. ಮಧ್ಯಮ ವರ್ಗವೇ ಇಲ್ಲ. ಕೋಳಿಗೂಡಿನಂತಹ ಮನೆಗಳು. ಅಸಂಖ್ಯಾತ ದರಿದ್ರ ಸ್ತ್ರೀ - ಪುರುಷರು, ಸೀಮೆ ಎಣ್ಣೆಯಿಂದ ಉರಿವ ಚಿಮಣಿಗಳು, ಬೀಡಿಯ ಎಲೆಗಳು, ಬಳೆಯ ಅಂಗಡಿಗಳು, ಸಾಣೆ ಹಿಡಿಯುವ ಚಲಿಸುವ ಚಕ್ರಗಳು, ಸ್ಟೋವ್ ರಿಪೇರಿ ಮಾಡುವ ಕಪ್ಪು ಬಟ್ಟೆಗಳು, ಮುರುಕು ಸಾಮಾನುಗಳ ರಾಶಿ, ಕಸಾಯಿ ಖಾನೆ, ಎಲ್ಲೆಡೆ ಕೊಳಚೆಯ ಗಬ್ಬುನಾತ, ವಿಲಿವಿಲಿ ಒದ್ದಾಡುವ ಕ್ರಿಮಿಯಂತಹ ನೂರಾರು ಬತ್ತಲೆ ಹುಡುಗರು, ನಾಯಿ, ಆಡುಗಳು, ದನ-ಕರು, ಮನುಷ್ಯರು, ಕೋಳಿಗಳು... ಈ ಹೊಸ ಬಡಾವಣೆಯ ಮನೆಯ ಬಾಡಿಗೆ ಸ್ವಲ್ಪ ಹೆಚ್ಚಿತ್ತು. ಆದರೂ ಅದನ್ನು ಒಪ್ಪಿ ಅಹಮ್ಮದ ಇಲ್ಲೇ ವಾಸಿಸುವ ನಿಶ್ಚಯ ಮಾಡಿದ. ಇಲ್ಲಿ ಅವನಂಥ ಜನರಿದ್ದರು. ಶೆರೆ ಕುಡಿಯುವುದೊಂದೇ ಅವನ ಕೆಟ್ಟ ಅಭ್ಯಾಸ. ಆದರೆ ಕುಡಿದು ಗದ್ದಲ, ಬೈಗಳನ್ನು ಮಾಡುವ ಪೈಕಿ ಅವನಲ್ಲ. ಸರಳ - ಮಧ್ಯಮ ವರ್ಗದ ಸಮಾಧಾನದ ಬದುಕು ಸಾಗಿಸಲು ಈ ವಸತಿಯಲ್ಲೇ ನೆಲೆಸುವ ನಿರ್ಧಾರ ಮಾಡಿದ್ದ.

ಕತ್ತಲೆಯಿಂದ ಬೆಳಕಿನ ಗಲ್ಲಿಗಿಳಿದ ಅಹಮ್ಮದನಿಗೆ ರಸ್ತೆ ನಿರ್ಜನವಾಗಿರುವುದು ಮೊದಲ ಸಲ ಗಮನಕ್ಕೆ ಬಂತು. ಎಲ್ಲೆಡೆ ಬಿಗಿ ಕಾವು. ವಾತಾವರಣದಲ್ಲಿ ಉದ್ವಿಗ್ನತೆ. ನೌಕರ ಹೇಳಿದ ಸಂಗತಿ ಮನಸ್ಸಿನಲ್ಲೇ ಗುನುಗುತ್ತಿತ್ತು.

ಬೇಗ ಮನೆ ತಲುಪಲು ಅಹಮ್ಮದ ವೇಗವಾಗಿ ಸೈಕಲ್ ತುಳಿದ.

-೨-

ಕುಂಬಾರಗಲ್ಲಿಯ ನಡುವಿನ ಹಾದಿ ಹಿಡಿದು ಅವನು ಹೊರಟ. ಈ ಗಲ್ಲಿಯೆಂದರೆ ಅತ್ಯಂತ ಶಾರ್ಟ್‌ಕಟ್ ಹಾದಿ. ಸ್ವಲ್ಪ ಕತ್ತಲೆಯಿರುವುದೇನೋ ಹೌದು. ಆದರೆ ಒಂದೆರಡು ನಿಮಿಷಗಳ ಹಾದಿ ದಾಟಿದಿರೆಂದರೆ, ಅರ್ಧ ಕಿಲೋ ಮೀಟರ್‌ನಷ್ಟು ಹಾದಿ ಉಳಿಯುತ್ತಿತ್ತು. ಇದು ಹಿಂದೂ-ಮುಸ್ಲಿಂ ವಸತಿಗಳನ್ನು ಭೇದಿಸುವ ಗಲ್ಲಿಯಾಗಿತ್ತು. ಎಡಕ್ಕೆ ಕುಂಬಾರರ ಮಣ್ಣಿನ ಮನೆಗಳು, ಭಟ್ಟಿ ವ್ಯಾಪಾರಿ ಅಂಗಡಿಗಳು, ಸಣ್ಣ - ಪುಟ್ಟ ಉದ್ಯೋಗ ಮಾಡುವ ಗೂಡಂಗಡಿಗಳು; ಕುಂಕುಮ - ಕರಿದಾರ - ಬಣ್ಣ ಮಾರುವ ಜಂಗಮರ ಮನೆಗಳು; ಮತ್ತು ಬಲಕ್ಕೆ ಗಾದಿ ಕಾರಖಾನೆಗಳು, ಡಬ್ಬಿ ಅಂಗಡಿಗಳು, ಎಲೆಗಂಟುಗಳು, ಗಾಜು ಸಾಮಾನಿನ ಅಂಗಡಿಗಳು - ಅದೆಲ್ಲ ಮುಸ್ಲಿಮರದ್ದು. ಅದರಾಚೆಗೆ ಕಸಾಯಿ ಖಾನೆ. ಅದಕ್ಕೂ ಆಚೆ ಪ್ರಶಸ್ತವಾದ ಚೌಕ, ಮಶೀದಿ, ಹವೇಲಿ ಇತ್ಯಾದಿ ವಸತಿಗಳು.

ಅಹಮ್ಮದನಿಗೆ ಅಲ್ಲಿಯ ಕತ್ತಲೆಯಲ್ಲಿ ಎಡಗಡೆಯ ಅಂಗಡಿಯೊಂದರ ಬಳಿ ಏನೋ ಚಲನೆ ಕಂಡಿತು. ಮೊದಲು ಅಸ್ಪಷ್ಟ, ಬಳಿಕ ಸ್ಪಷ್ಟ. ಅವನು ಸೈಕಲ್‌ನಿಂದ ಕೆಳಗಿಳಿದು ಕುತೂಹಲದಿಂದ ನೋಡಲಾರಂಭಿಸಿದ.

ನಾಲ್ಕಾರು ತರುಣರಿದ್ದರು. ಅಂಗಡಿಯೊಳಗಿನ ಒಂದೊಂದೇ ಸಾಮಾನು ಹೊರ ತಂದು ರಸ್ತೆಯ ಮೇಲೆ ರಾಶಿ ಹಾಕಿದರು. ಒಬ್ಬಾತ ಸೀಮೆಯೆಣ್ಣೆ ಡಬ್ಬಿ ತಂದು ಅದರ ಮೇಲೆ ಸುರಿದ. ಮತ್ತೊಬ್ಬ ಅಂಗಡಿಯೊಳಗೆ ಸೀಮೆ ಎಣ್ಣೆ ಸುರಿದ. ಗೋಡೆ, ಬಾಗಿಲು, ಕಂಬ ಎಲ್ಲೆಡೆ ವ್ಯವಸ್ಥಿತವಾಗಿ. ಆಚೆ-ಈಚೆ ಯಾರ ಸುಳಿವೂ ಇರಲಿಲ್ಲ, ಆದರೂ ಎಲ್ಲ ಕಡೆಯಿಂದ, ಎಲ್ಲ ಮನೆಗಳ ಬಾಗಿಲ ಸಂದಿಯಿಂದ, ಕಿಡಕಿಯಿಂದ, ಮೂಲೆಯಿಂದ ಹಲವು ಕಣ್ಣುಗಳು ಅವರನ್ನು ನೋಡುತ್ತಿರಬಹುದು. ಅಹಮ್ಮದನಿಗೆ ಅದೆಲ್ಲ ಅರಿವಾಗುತ್ತಿರಲಿಲ್ಲ. ''ಇದೇನು ಮಾಡ್ಲಿಕ್ಕ ಹತ್ತಿರಿ ನೀವು?'' ಅಹಮ್ಮದ ಸನಿಹ ಹೋಗಿ ಕೇಳಿದ.

ಅವರಲ್ಲಿಯ ಒಬ್ಬಾತ ಕಡ್ಡಿ ಕೊರೆದ. ಸಾಮಾನು ರಾಶಿಯ ಮೇಲೆ ಒಗೆದ. ಮತ್ತೊಬ್ಬ ಅಂಗಡಿಗೆ ಬೆಂಕಿ ಹಚ್ಚಿದ. ಮೂರನೆಯವನು ಅಹಮ್ಮದನಿಗೊಂದು ಗುದ್ದು ಹಾಕಿದ. ಅಹಮ್ಮದ ಒಂದು ಪಕ್ಕಕ್ಕೆ ಹೋಗಿ ಬಿದ್ದ. ಅವನ ಮೈಮೇಲೆ ಸೈಕಲ್ಲು. ''ಹೋಗಲೆ - ಹೋಗು ! ಜೀವಾ ಬೇಕಂತ ಅನಿಸಿದರ, ಮೊದಲ ಇಲ್ಲಿಂದ ಜಾರಕೋ!'' ಒಬ್ಬಾತ ಹೇಳಿದ. ಅಹಮ್ಮದ ಮೊದಲೇ ಶೆರೆ ಕುಡಿದಿದ್ದರಿಂದ ಮೆತ್ತಗಾಗಿದ್ದ. ಅದರ ಮೇಲೊಂದು ಗುದ್ದು. ಅವನಿಗೆ ಏಳುವುದೂ ಆಗಲಿಲ್ಲ, ಮಾತನಾಡುವುದೂ ಆಗಲಿಲ್ಲ.

ಕಡ್ಡಿ ಕೊರೆದ ಜನ ಬಂದರು. ಬೆಂಕಿ ಭುಗಿಲೆದ್ದಿತ್ತು. 'ನಡೆಯಿರಿ' ಸನ್ನೆ ಆದ ಕೂಡಲೇ ಎಲ್ಲರೂ ಸಜ್ಜಾದರು. ಅಂಗಡಿ, ರಸ್ತೆ ಎಲ್ಲಾ ಕಡೆ ಕೆಂಪು - ಹಳದಿ ಬೆಳಕು. ಪಲಾಯನ ಮಾಡುವಾಗ ಒಬ್ಬಾತ ಅಹಮ್ಮದನ ಮುಖ ನೋಡಿದ.

''ಅರೆ ! ಅಹಮ್ಮದ್ ಭಾಯಿ ನೀವು ? ನೀವಿಲ್ಲಿ ಏನ್...'' ಎಂದು ಕೇಳುವವನಿಗೆ ಕೆಲ ಕ್ಷಣದ ಹಿಂದೆ ತನ್ನ ಜೋಡಿದಾರನೊಬ್ಬ ಗುದ್ದು ಹಾಕಿದ್ದು ಇದೇ ಅಹಮ್ಮದನಿಗೆ ಎನ್ನುವುದು ಅವನ ಗಮನಕ್ಕೆ ಬಂತು. ತನ್ನ ಜಾತಿಯವನು.

''ಅರೆ ನಿಲ್ಲಿ ನಿಲ್ಲಿ, ಈ ಅಹಮ್ಮದ್ ಭಾಯಿ ನಮ್ಮ ಮನುಷ್ಯ'' ಎಂದವನು ಉಳಿದವರಿಗೆ ತಡೆಹಾಕಿದ. ಬಳಿಕ ಅವರೆಲ್ಲ ಅಹಮ್ಮದನನ್ನು ತಮ್ಮ ಜೊತೆ ಕರಕೊಂಡು ಪಲಾಯನ ಮಾಡಿದರು.

ಅವರು ಓಡಲಾರಂಭಿಸಿದಾಗ ಬೆನ್ನ ಹಿಂದೆ ಕಲ್ಲು ಬಂದು ಬೀಳಲಾರಂಭಿಸಿದವು. ಕಲ್ಲು ಮತ್ತು ಇಟ್ಟಿಗೆಯ ಚೂರು. ಅಹಮ್ಮದನಿಗಂತೂ ಏನೂ ಅರ್ಥವಾಗಲಿಲ್ಲ. 'ನಮ್ಮ ಮನುಷ್ಯ' ಎಂದು ಎಳೆದೊಯ್ಯುವವರ ಜೊತೆ ಅವನು ಎಳೆಯಲ್ಪಡುತ್ತಿದ್ದ. ಅವರು ರಸ್ತೆಯಂಚಿಗೆ ಬಂದರು. ಬಳಿಕ ಕಸಾಯಿ ಖಾನೆಯ ನಡುವೆ ಹೊಸದಾಗಿ ಕಟ್ಟಿದ ಗೋಡೆಯಾಚೆಗೆ ಮರೆಯಲ್ಲಿ ನಿಂತರು.

''ನೀವು ಇಲ್ಲಿ ಹೇಗೆ ಬಂದಿರಿ, ಅಹಮ್ಮದ್ ಭಾಯಿ ?'' ಅವನ ಸಂಬಂಧಿಕ ಕೇಳಿದ.

''ನನ್ನ ಸೈಕಲ್ಲು ಅಲ್ಲೇ...'' ಅಹಮ್ಮದನಿಗೆ ನೆನಪಾಯಿತು.

''ಹೋಗಲಿ ಬಿಡಿ, ಈಗೇನೂ ಮಾಡೋದು ಸಾಧ್ಯವಿಲ್ಲ''

ಅಲ್ಲಿ ಸಾಕಷ್ಟು ಜನ ಬಂದು ಸೇರಿದ್ದರು. ಯುವಕರೇ ಹೆಚ್ಚು, ತಲೆತಿರುಕ ಗೂಂಡಾಗಳು. ಅಹಮದ ಯಾರಿಂದ ಸದಾ ದೂರವಿರುತ್ತಿದ್ದನೋ ಅಂಥ ಜನ. ಈ ಸ್ಥಳ ಎರಡು ಅಂತಸ್ತಿನದು, ಕೋಟೆಯಂತೆ ವರ್ತುಳಾಕಾರ. ಎಲ್ಲೆಡೆ ಕಿಡಕಿಗಳು. ಮೇಲಿನ ಅಂತಸ್ತಿನಲ್ಲಿ ಏನೋ ಚಲನೆ-ವಲನೆ ನಡೆಯುತ್ತಿರುವುದು ಅಹಮ್ಮದನ ಗಮನಕ್ಕೆ ಬಂತು. ಕುಂಬಾರ ಗಲ್ಲಿಯಿಂದ ಬರುವ ಕಲ್ಲು-ಇಟ್ಟಿಗೆಗಳು ಗೋಡೆಗಪ್ಪಳಿಸುತ್ತಿರುವ ಸದ್ದೂ ಕೇಳಿಸುತ್ತಿತ್ತು.

''ಬಾ, ಮೇಲೆ ಹೋಗೋಣ'' ಎನ್ನುತ್ತ ಆ ಮನುಷ್ಯ ಅಹಮ್ಮದನನ್ನು ಎಳೆದೊಯ್ದ.

ಮೇಲಿನ ಅಂತಸ್ತಿನಲ್ಲಿ ವ್ಯವಸ್ಥಿತವಾಗಿ ರಾಶಿ ಹಾಕಿದ ಕಲ್ಲು-ಇಟ್ಟಿಗೆಗಳು. ಖಡ್ಗ, ಭರ್ಚಿ, ಚಾಕು-ಚೂರಿ, ತಂತಿಗೆ ಕಟ್ಟಿದ ಚಿಂದಿಯನ್ನೂ ಸೀಮೆಎಣ್ಣೆಯಲ್ಲಿ ಮುಳುಗಿಸಲಾಗುತ್ತಿತ್ತು. ಅದಕ್ಕೆ ಬೆಂಕಿ ಹಚ್ಚಿ ಒಗೆಯಲಾಗುತ್ತಿತ್ತು. ಎಲ್ಲರೂ ವ್ಯವಸ್ಥಿತವಾಗಿ ಕೆಲಸ ಮಾಡುತ್ತಿದ್ದರು. ಮೇಲಿನಿಂದ ನಗರ ಬಹಳಷ್ಟು ಭಾಗ ಕಾಣುತ್ತಿತ್ತು. ಹಲವು ಕಡೆ ಬೆಂಕಿಯ ಕೆನ್ನಾಲಿಗೆ, ಹೊಗೆ

ಕಾಣಲಾರಂಭಿಸಿತು. ಝುಗಝುಗಿಸುವ ದೀಪಗಳು, ಬೆಂಕಿಯ ಅಲೆ, ಹೊಗೆ, ಕಲ್ಲು-ಇಟ್ಟಿಗೆಯ ಯುದ್ಧ, ಚಿಂದಿಯ ಬಾಣ, ಬಯ್ಗಳು, ಮಾರಾಮಾರಿ, ಬಾಕೂ-ಚೂರಿ, ಖಡ್ಗ. ಸರಳ ಬದುಕು ಸಾಗಿಸುವ ಅಹಮ್ಮದ ಎರಡು ಗುಟುಕು ಶೆರೆಯ ಮೋಹದಿಂದಾಗಿ ಬೇಡದ ಈ ಸಂಕಟದಲ್ಲಿ ಸಿಲುಕಿದ್ದ. ಈಗ ಅಲ್ಲಿಂದ ಪಾರಾಗುವುದು ಕಠಿಣವಾಗಿತ್ತು.

''ಮನೆಗೆ ಹೋಗಬೇಕು...'' ಎಂದವನು ಅನ್ನುತ್ತಲೇ ಪಕ್ಕದಲ್ಲಿದ್ದವ ನಕ್ಕ. ಇಲ್ಲೇನು ನಡೆದಿದೆ ಮತ್ತು ಈ ಮನುಷ್ಯ ಹುಚ್ಚನಂತೆ ಅದೇನು ಮಾತಾಡುತ್ತಿದ್ದಾನೆ! ಅವನಿಗೆ ನಗು ಬರದೇ ಇರೋದು ಸಾಧ್ಯವೇ ?

ಕುಂಬಾರಗಲ್ಲಿಯ ಆಚೆ ಮನೆಗಳ ಛಾವಣಿಗಳ ಮೇಲೆ ಕೆಲ ಹಿಂದೂ ತರುಣರು ನಿಂತಿದ್ದರು. ಅವರು ಅಲ್ಲಿಂದ 'ಹರ ಹರ ಮಹಾದೇವ', 'ಜೈ ಭವಾನಿ ಜೈ ಶಿವಾಜಿ!' ಎಂದು ಹಲ್ಲೆ ನಡೆಸಿದ್ದರು. ಇಲ್ಲಿಂದ 'ದೀನ ದೀನ!' 'ಅಲ್ಲಾ ಹೋ ಅಕ್ಬರ್' ! ಎಂದು ಗರ್ಜಿಸಿ ಹಲ್ಲೆ ನಡೆಸುವ ಈ ಸಮೂಹ.

ಹಾಗೆ ಪ್ರತ್ಯಕ್ಷ ಯಾರೂ ಅನ್ನುತ್ತಿರಲಿಲ್ಲ. ಆದರೆ ನೋಡುವಾಗ ಅಹಮ್ಮದನ ಮನದಲ್ಲಿ ಹೀಗೆಲ್ಲ ಮೂಡಿತು. ನಗು ಬಂತು.

''ಕ್ಯೋಂ ಭಾಯಿ! ಪಾಗಲ್ ಹೋಗಯಾ ಕ್ಯಾ?'' ಪಕ್ಕದ ಮನುಷ್ಯ ಚಕಿತನಾಗಿ ಕೇಳಿದ.

ಒಂದನೆಯದು, ಎಲ್ಲರೂ ಶಿಸ್ತಿನಿಂದ ಕೆಲಸ ಮಾಡುತ್ತಿದ್ದರು. ಕೈಯಲ್ಲಿ ಖಡ್ಗ ಹಿಡಿದು ಕೆಳಗಿನಿಂದ ಮೇಲಿನವರೆಗೆ ಸಂರಕ್ಷಣೆಯ ಗೋಡೆ ನಿರ್ಮಿಸಿದ್ದರು. ಹಲ್ಲೆ ಮಾಡುವವರು ತಮ್ಮ



ಕಾರ್ಯದಲ್ಲಿ ತೊಡಗಿದ್ದರು. ನಾಯಕತ್ವ ಮಾಡುವವರು ಪರಿಶೀಲನೆಯಲ್ಲಿ ತೊಡಗಿದ್ದರು, ಆಗಾಗ ಸೂಚನೆ ನೀಡುತ್ತಿದ್ದರು. ಇವರೆಲ್ಲರ ನಡುವೆ ಅಹಮ್ಮದ ಹುಚ್ಚನಂತೆ ನಿಂತಿದ್ದ.

ಎದುರಿನ ಅಡ್ಡ ರಸ್ತೆಯಲ್ಲೊಂದು ಜೀಪು ಬಂತು. ಅದರಿಂದ ಸರಸರ ಪೊಲೀಸರು ಕೆಳಗಿಳಿದರು. ಅವರು ಗಾಳಿಯಲ್ಲಿ ಗುಂಡು ಹಾರಿಸಿದರು. 'ಪೊಲೀಸ!' ಪೊಲೀಸ!' ಯಾರೋ ಕಿರುಚಿದರು. ಎದುರಿನ ಛಾವಣಿಯ ಮೇಲೆ ಜೋರಾಗಿ ಓಡಾಟ ಕಂಡುಬಂತು. ಅಹಮ್ಮದನ ಅಕ್ಕ-ಪಕ್ಕದವರು ಕೆಳಗೆ ಓಡತೊಡಗಿದರು. ಗದ್ದಲ ಹೆಚ್ಚಾಯಿತು. ಅಹಮ್ಮದನೂ ಗದ್ದಲದಲ್ಲಿ ಹೊಕ್ಕಿದ. ಹೋಗೋದೆಲ್ಲಿ, ಓಡುವುದು ಏಕೆ ಎಂಬುದೂ ಅವನಿಗೆ ಸರಿಯಾಗಿ ಗೊತ್ತಿರಲಿಲ್ಲ. ಉಳಿದವರು ಓಡುತ್ತಿರುವುದರಿಂದ ಅವನೂ ಓಡುತ್ತಿದ್ದ. ಅವನನ್ನು ಇಲ್ಲಿಗೆ ಕರೆತಂದ ಅವನ ಸಂಬಂಧಿಕ ಯಾವಾಗಲೋ ನಾಪತ್ತೆಯಾಗಿದ್ದ.

ಅಹಮ್ಮದ ಕೆಳಗೆ ಬರುವಷ್ಟರಲ್ಲಿ ಪೊಲೀಸರು ಹಾಜರಾದರು. ಹಲವರ ಜೊತೆ ಅವನನ್ನೂ ಹಿಡಿದರು. ಇದೆಲ್ಲ ತಟ್ಟನೆ ಹಾಗೂ ತೀರ ಸಹಜವಾಗಿ ನಡೆಯಿತು. ''ನಾನಲ್ಲ, ನಾನಲ್ಲ'' ಎನ್ನುತ್ತಿದ್ದ ಅಹಮ್ಮದನಿಗೆ ಏನು ಹೇಳಬೇಕಾಗಿತ್ತೋ ಅದನ್ನೂ ಸರಿಯಾಗಿ ಹೇಳಲಾಗಲಿಲ್ಲ.

-೩-

ಪೊಲೀಸ ಕೊಠಡಿಯಲ್ಲಿ ಎಲ್ಲರೂ ಆರಾಮವಾಗಿ ಕೂತಿದ್ದರು. ಹಿಂದೂ ಜನ ಬೇರೆ ಕೊಠಡಿಯಲ್ಲಿದ್ದರು. ಮುಸಲ್ಮಾನರು ಬೇರೆ. ಅಹಮ್ಮದ ಮುಸಲ್ಮಾನರ ಜೊತೆಗಿದ್ದ. ಪೊಲೀಸರು ಎಲ್ಲರೊಂದಿಗೆ ಸಲುಗೆಯಿಂದ, ಮನೆಯವರಂತೆ ವರ್ತಿಸುತ್ತಿದ್ದರು. ಹಲವು ಜನರ ಹೆಸರೂ ಅವರಿಗೆ ಗೊತ್ತಿತ್ತು. ಮನೆಯಲ್ಲಿದ್ದಂತೆ ಹರಟೆಯೂ ನಡೆದಿತ್ತು. ಇಸ್ಪೀಟಾಟ, ಬೀಡಿ-ಕಡ್ಡಿ, ಚಹಾ – ಎಲ್ಲ ವ್ಯವಸ್ಥಿತ ಮನೆಯಂತೆ. ಹಣದ ಅಡಚಣೆಯೂ ಇರಲಿಲ್ಲ. ಬಿಳಿ ಪೋಷಾಕು ಧರಿಸಿದ, ಬಿಳಿ ಗಡ್ಡದ ಯಾರೋ ಶ್ರೀಮಂತರು ಎಲ್ಲರೊಂದಿಗೆ ಹರಟೆ ಹೊಡೆದು ಹೋದರು. ವ್ಯವಸ್ಥೆಯ ಬಗೆಗೂ ವಿಚಾರಿಸಿದರು. ಪೊಲೀಸರು ಗೌರವದಿಂದ 'ಹಾಂ, ಹಾಂ' ಎಂದರು.

ಅಹಮ್ಮದನಿಗೆ ಎಲ್ಲ ವಿಚಿತ್ರವೆನಿಸುತ್ತಿತ್ತು. ಅವನು ಕಿವುಡನಂತೆ ಒಂದು ಮೂಲೆಯಲ್ಲಿ ಕುಳಿತೇ ಇದ್ದ. ಅವನಿಗೆ ಯಾರ ಪರಿಚಯವೂ ಇರಲಿಲ್ಲ. ತಾನು ಇದೇನು ಮಾಡಿ ಕೂತೆ ? ಕಾಲೇಜಿನವರಿಗೆ ಗೊತ್ತಾದರೆ ಅವರೇನು ತಿಳಿದಾರು? ಪ್ರಿನ್ಸಿಪಾಲ ತನ್ನನ್ನು ನೌಕರಿಯಿಂದ ಕಿತ್ತೊಗೆಯಬಹುದೇ? ತನ್ನ ಹೆಂಡತಿ ಹಾದಿ ಕಾದು ಕಾದು ಸೋತಿರಬಹುದು, ಆಕೆಗೇನೂ ಗೊತ್ತಿರಲಿಕ್ಕಿಲ್ಲ. ಆಕೆ ಗಾಬರಿಗೊಂಡಿರಬೇಕು. ಇವರೆಲ್ಲರ ಮನೆಗೆ ಸುದ್ದಿ ಹೋಗಿದೆ. ಅವರಿಗೆಲ್ಲ ಊಟದ ಡಬ್ಬಿಯೂ ಬಂದಿದೆ. ... ಆದರದು ಅವರ ಮನೆಯಿಂದ ಬಂದದ್ದಲ್ಲ ಎನ್ನುವುದು ಅಹಮ್ಮದನಿಗೆಲ್ಲಿ ಗೊತ್ತಿದೆ! ಅವರ ಮನೆಯ ಜನ ಬಂದು ಹೋಗಿದ್ದಾರೆ, ಈ ಬಿಳಿ ಬಟ್ಟೆಯ ಶ್ರೀಮಂತರು ಈ ಗೂಂಡಾಗಳಿಗೆ ವ್ಯವಸ್ಥೆ ಮಾಡುತ್ತಿದ್ದಾರೆ. ಆದರೆ ತನಗೆಂಥ ದುರ್ಬುದ್ಧಿ ಬಂತು. ತಾನೇನು ಮಾಡಿ ಕೂತೆ ?... ಅಹಮದ್ ಯೋಚಿಸುತ್ತ ಕೂತಿದ್ದ.

ಅವರನ್ನು ಹಿಡಿದುಕೊಂಡು ಬಂದು ಪೊಲೀಸ ವಾಹನದಲ್ಲಿ ತುರುಕುವಾಗ ಒಬ್ಬ ಪೊಲೀಸ ''ಶೆರೆ ಕುಡಿದಿದ್ದಿ ಏನಲೇ ಮಗನೇ!'' ಎನ್ನುತ್ತ ಅಹಮ್ಮದನ ಕೆನ್ನೆಗೆ ಥಳಿಸಿದಾಗ ಅವನ ಮನಸ್ಸು ಸಂಪೂರ್ಣ ಮುರಿದುಹೋಗಿತ್ತು. ಏನೊಂದೂ ಯೋಚಿಸದೆ ಪೊಲೀಸ ಅವನ ಕೆನ್ನೆಗೆ ಬಾರಿಸಿದ್ದ! ಉಳಿದವರಿಗೂ ಅದೇ ಬಗೆಯ ಹೊಡೆತ ಬಿದ್ದರೂ ಅವರೆಲ್ಲ ಸಂತೋಷದಲ್ಲಿದ್ದರು!

'ಏ!' ಒಬ್ಬಾತ ಅಹಮ್ಮದನ ಲಕ್ಷ್ಯ ತನ್ನ ಕಡೆಗೆ ಸೆಳೆದ. ಪ್ರತಿಯೊಬ್ಬರೂ ಸಂತಸದಲ್ಲಿದ್ದರು. ನಗು, ಚೇಷ್ಟೆ, ವಿನೋದ, ರಮ್ಮಿ ಆಟದ ಲೆಕ್ಕಾಚಾರ.

''ಹೆಸರೇನು ನಿಂದು ? ಇಲ್ಲಿಯವನೇ ಅಲ್ಲವೇ ?'' ಅಹಮ್ಮದನ ಬಳಿಗೆ ಬಂದು ಕೂತ ಒಬ್ಬ ಎಳೆ ಹುಡುಗ. ಕಣ್ಣಲ್ಲಿ ತುಂಟತನ, ಕೆಂಗೂದಲು. ಹದಿನೇಳು ಹದಿನೆಂಟು ವರ್ಷದವನಿರಬೇಕೆಂದು ಅಹಮ್ಮದನಿಗನಿಸಿತು. ಪರಿಚಯವಿಲ್ಲದಿದ್ದರೂ ತನ್ನಂತಹ ಮೂವತ್ತೈದರ ಗಂಡಸಿಗೆ ಏಕವಚನದಲ್ಲಿ ಮಾತಾಡುತ್ತಿದ್ದಾನೆ.

ಅಹಮ್ಮದ ಏನೂ ಹೇಳಲಿಲ್ಲ. ಅವನಿಗೆ ಸಂತಾಪವಾಗಲಿ, ಸಿಟ್ಟಾಗಲಿ ಬರಲಿಲ್ಲ. ಅವನಿಗೆ ಏನೂ ಅನಿಸುತ್ತಲೂ ಇರಲಿಲ್ಲ.

''ನಿನ್ನವರು ಇಲ್ಲಿ ಯಾರೂ ಇಲ್ಲವೇ ?'' ಆ ತರುಣ ಕೇಳಿದ, ತುಂಬಾ ಆತ್ಮೀಯತೆಯಿಂದ. ಮೆಲ್ಲಗೆ ಅಹಮ್ಮದ ತನ್ನೆಲ್ಲ ಕಥೆ ಹೇಳಿಕೊಂಡ. ಅವನ ನೌಕರಿ, ಹೆಂಡತಿ, ಹುಡುಗಿಯರು, ಮುಸಲ್ಮಾನ ವಸತಿಯ ಹೊರಗಿದ್ದ ಅವನ ಕೋಣೆ, ಅವನ ಸರಳವಾದ ಆಯುಷ್ಯ, ಮ್ಯಾಟ್ರಿಕ್‌ವರೆಗೆ ಮುಗಿಸಿದ ಶಿಕ್ಷಣ, ಕಾಲೇಜಿನಲ್ಲಿ ಪ್ಯೂನ್ ಆಗಿದ್ದೂ ಕಲಿಯುತ್ತಿರುವ ಬಿ. ಎ. ಅಂತಿಮ ವರ್ಷ, ಗುಮಾಸ್ತನಾಗುವ ಬಯಕೆ, ಶೆರೆ ಕುಡಿವ ಕಿಂಚಿತ್ ಚಟ, ಅದರಿಂದಾದ ಈ ಪರಿಣಾಮ – ಹೇಳುವಾಗ ಅವನ ಕಣ್ಣು ತುಂಬಿ ತುಂಬಿ ಬರುತ್ತಿತ್ತು.

''ನೀವಂತೂ ಒಳ್ಳೆಯವರಂತೆ ಕಾಣ್ತೀರಿ, ಮಾಸ್ತರಜೀ! ಮರ್ಯಾದಸ್ತರು, ಮರ್ಯಾದಸ್ತರ ನಡುವೆ ಕೆಲಸ ಮಾಡುತ್ತೀರಿ! ನನಗಂತೂ ಬಾಲ್ಯದಿಂದಲೂ ಫುಟ್‌ಪಾಥೇ ಗತಿ!'' ಆ ತರುಣ ಸಂಕಟ ತೋಡಿಕೊಳ್ಳುತ್ತಿದ್ದ. ಅವನಿಗೆ ತನ್ನ ತಾಯಿ ತಂದೆ ಗೊತ್ತಿರಲಿಲ್ಲ. ರಸ್ತೆಯಲ್ಲೇ ಅವನು ಬೆಳೆದು ದೊಡ್ಡವನಾದವ. ನಿರ್ಗತಿಕ ಜನ ಚಾಣಾಕ್ಷತನದಿಂದ ಬದುಕುವಂತೆ ಅವನು ಬೆಳೆದಿದ್ದ. ಯಾರೋ ಅವನಿಗೆ ಇಕ್ರಮ ಹೆಸರು ನೀಡಿದರು. ಅದೇ ಹೆಸರು ಅಂಟಿಕೊಂಡಿತು. ಮೊಹಲ್ಲಾದ ಮದರಸಾದಲ್ಲಿ 'ಆಲಿಫ್ ಬೆ...' ಸ್ವಲ್ಪ ಕಲಿತ ಬಳಿಕ ಮರೆತೂ ಬಿಟ್ಟ. ಅವನು ಬಾಲ್ಯದಲ್ಲಿ ಕಪ್ಪು-ಬಶಿ ತೊಳೆದ. ಮೋಚಿಯ ಅಂಗಡಿಯಲ್ಲಿ ಕೆಲಸ ಮಾಡಿದ. ಚಾಕು-ಚೂರಿಗಳಿಗೆ ಸಾಣೆ ಹಿಡಿವ ಕೆಲಸ ಮಾಡಿದ. ಸ್ಟೌ ರಿಪೇರಿ, ಬೀಡಿ ಸಹ ಕಟ್ಟುತ್ತಿದ್ದ. ಅವನು ಹಲವರಿಂದ ಹೊಡೆತ ಸಹ ತಿಂದಿದ್ದ. ಹಲವು ದಿನ ಟ್ರಕ್ಕಿನಲ್ಲಿ ಕ್ಲೀನರ್ ಕೆಲಸ ಮಾಡಿದ್ದ. ಈಗವನು ಒಬ್ಬ ಶೇಠನ ಲಾರಿ ಡ್ರೈವರನಾಗಿ ಕೆಲಸ ಮಾಡುತ್ತಿದ್ದ.

''ಈ ಜಂಜಾಟದಲ್ಲಿ ನೀನು ಬಿದ್ದದ್ದು ಹೇಗೆ ? ಅಥವಾ ನನ್ನಂತೆ...'' ಅಹಮ್ಮದ ಕೇಳಿದ.

''ಯಾಕೆ ಬೀಳಬಾರದು ? ಇದು ನಮ್ಮ ಕೋಮಿನ ಮರ್ಯಾದೆಯ ಪ್ರಶ್ನೆ!''

''ಏನ್ ಕೋಮು-ಬೀಮು ಅಂತಿಯಾ! ನೀನಂತೂ ಟ್ರಕ್ ಚಾಲಕ, ಎಲ್ಲ ಜಾತಿ -

ಜಮಾತಿ ಜನರನ್ನು ನೀನು ನೋಡಿದ್ದಿಯಾ. ಬಡವನಿಗೆ ಎಲ್ಲಿಯ ಕೋಮು ? ಬಡತನವೇ ಅವನ ಶಾಪ. ನೀನು ಇಷ್ಟೆಲ್ಲಾ ತಿಳುವಳಿಕೆ ಇದ್ದೂ ಇಂಥದರಲ್ಲಿ ಬೀಳಬಾರದಿತ್ತು.''

''ಇಲ್ಲ ಮಾಸ್ತರಜಿ ! ಇದು ನನ್ನ ಕರ್ತವ್ಯ. ಶೇಠ ಜನರಂತೂ ಇದನ್ನೇ ಬಯಸ್ತಾರೆ! ಇದರಿಂದ ನಮ್ಮ ಸ್ಥಾನ-ಮಾನ ಬೆಳೆಯುತ್ತೆ.''

''ಸ್ಥಾನ-ಮಾನ ಬೆಳೆಯುವುದೇ! ಇದೆಂಥ ಮಾತು ?''

ಇಕ್ರಮ ಹೇಳಿದ, ''ಸರಿಯಾದ ಮಾತೇ. ಹಿಂದಿನ ದಂಗೆಯಲ್ಲಿ ಅಯೂಬ ಫಿಟರ್‌ನ ಮಗ ಒಬ್ಬ ಹಿಂದೂ ಹುಡುಗನ ಹೊಟ್ಟೆಯನ್ನೇ ಸೀಳಿದ. ಆಗ ನಮ್ಮ ಕೋಮಿನ ಜನರ ನಡುವೆ ಅವನ ಮಾನ ಇಮ್ಮಡಿಯಾಯಿತು! ಎಲ್ಲರೂ ಶಹಬ್ಬಾಸ್ ಅಂತಾರೆ.''

''ಆದರೆ ಪೋಲಿಸರು ಅವನನ್ನು ಬಿಡ್ತಾರೇನು? ಕೊಲೆ ಮಾಡಿದವರಿಗೆ ಯಾರಾದರೂ ಶಹಬ್ಬಾಸ್ ಕೊಡ್ತಾರೇನು ?''

ಇಕ್ರಮ ಕೆರಳಿ ಹೇಳಿದ, ''ಪೊಲೀಸರು ಏನ್ ಮಾಡೋದು ಸಾಧ್ಯವಿಲ್ಲ. ಎರಡು ವರ್ಷವಾಯಿತು. ಪೊಲೀಸರು ಅವನನ್ನು ಎಲ್ಲಿ ಹಿಡಿದಿದ್ದಾರೆ? ಅವನು ಪರಾರಿಯಾಗಿದ್ದಾನೆ. ಅವನಿಲ್ಲಿಗೆ ಬಂದಾಗ ಎಲ್ಲರೂ ಎಷ್ಟು ಗೌರವ ನೀಡ್ತಾರೆ! ಬಾದಶಹಾನಂತೆ ಬರ್ತಾನೆ! ಎಲ್ಲ ಸಂಭಾಳಿಸಿಕೊಳ್ಳುತ್ತಾರೆ. ಪೊಲೀಸರನ್ನು ಸಂಭಾಳಿಸುತ್ತಾರೆ. ಪೊಲೀಸರು ಅವನ್ನು ಹಿಡಿಯೋದಿಲ್ಲ. ಅಯೂಬನ ಮಗ ಹೀರೋ ಆಗಿದ್ದಾನೆ. ಅವನ ಹೆಂಡತಿಯ ಮಾನವೂ ಹೆಚ್ಚಾಗುತ್ತದೆ. ಅವನು ನಾಪತ್ತೆಯಾಗಿದ್ದಾನೆ. ಮತ್ತು ಎರಡು ತಿಂಗಳು ಹಿಂದೆ ಅವನ ಹೆಂಡತಿಗೆ ಮಗು ಹುಟ್ಟಿದೆ ! ಪೊಲೀಸರೇನು ನೋಡ್ತಾರೆ! ನೋಟು ನೋಡಿದ ಕೂಡಲೇ ಅವರ ಕಣ್ಣು ಮುಚ್ಚುತ್ತದೆ!...''

ಇದೆಲ್ಲ ಅಹಮ್ಮದನ ಗ್ರಹಿಕೆಯ ಆಚೆಯ ವಿಷಯವಾಗಿತ್ತು. ಕೊಲೆ ಮಾಡುವ ಮನುಷ್ಯ ಸಮಾಜದಲ್ಲಿ ಹೀರೋ ಎನಿಸಿಕೊಳ್ಳುತ್ತಿದ್ದ! ಹಿಂದೂಗಳಲ್ಲೂ ಹೀಗೆಯೇ ಇರಬಹುದೇ? ಎಲ್ಲರೂ ತುಂಬು ಮನದಿಂದ ಗೂಂಡಾಗಳನ್ನು ಗೌರವಿಸುತ್ತಿರಬಹುದೇ ? ಬುದ್ಧಿವಂತರೂ ಸಹ ? ಅಹಮ್ಮದ ನಿರುತ್ತರನಾದ.

ಮೂರನೇ ದಿನ ಸಂಜೆ ಜಾಮೀನು ನೀಡಲು ಒಬ್ಬ ಮನುಷ್ಯ ಬಂದ. ಅವನು ಒಬ್ಬ ಶ್ರೀಮಂತ ಶೇಠನ ಅಂಗಡಿಯಲ್ಲಿ ದುಡಿಯುವ ಕಾರಕೂನನಾಗಿರಬೇಕೆಂದು ಅಹಮ್ಮದ ಅಂದುಕೊಂಡ. ಜಾಮೀನು ನೀಡಿಯೂ ಬಿಡುಗಡೆ ಮಾಡಲು ಇಷ್ಟು ಹೊತ್ತು ಏಕೆ ಹಿಡಿಯಿತು ಎಂಬ ವಿಷಯದ ಬಗೆಗೆ ಕೆಲವರು ಮಾತಾಡಿಕೊಳ್ಳುತ್ತಿದ್ದರು. ಏನಾಗಿತ್ತೆಂದರೆ, ಈ ಮುಸ್ಲಿಂ ತರುಣರ ಬಿಡುಗಡೆಗೆ ಶ್ರೀಮಂತ ಶೇಠ ಜನ ಹಣ ನೀಡಲು ಸಿದ್ಧರಾಗಿದ್ದರು. ಆದರೆ ಹಿಂದೂಗಳಿಗಾಗಿ ಯಾರೂ ಮುಂದೆ ಬರಲಿಲ್ಲ. ಹೀಗಾಗಿ ಪೊಲೀಸರಿಗೆ ಸಮಸ್ಯೆಯಾಗಿತ್ತು. ಮುಸ್ಲಿಂರನ್ನು ಬಿಟ್ಟರೆ ಪಕ್ಷಪಾತ ಮಾಡಿದರೆಂದು ಪೊಲೀಸರ ಮೇಲೆ ಆರೋಪ ಹೊರಿಸಲು ಪಬ್ಲಿಕ್ ಹಿಂದೆ-ಮುಂದೆ ನೋಡುತ್ತಿರಲಿಲ್ಲ. ಜಾಮೀನು ನೀಡದೆ ಯಾರನ್ನೂ ಬಿಡುವ ಹಾಗಿಲ್ಲ. ಕೊನೆಗೆ ಅಂತೂ ಹೇಗೇಗೋ ಹೊಂದಿಸಲಾಯಿತಂತೆ.

''ಆ ಸುವ್ವರ್ ಮಕ್ಳಿಗೆಲ್ಲಿ ಮರ್ಯಾದೆಯಿರುತ್ತದೆ! ಜಾಮೀನು ಕೊಡುವವರು ಯಾರು ?'' ಯಾರೋ ಗೊಗ್ಗನು ದನಿಯಲ್ಲಿ ಹೇಳಿದರು. ಉಳಿದವರು ನಗಲಾರಂಭಿಸಿದರು. ಪೊಲೀಸ ಮತ್ತು ಗುಮಾಸ್ತ ಒಬ್ಬೊಬ್ಬ ಗೂಂಡಾನ ಹೆಸರು, ಸ್ವರೂಪ, ಜಮಾತಿಯ ಸಂಖ್ಯೆಯಲ್ಲಿ ನೋಂದಾಯಿಸಿಕೊಳ್ಳುತ್ತಿದ್ದರು.

''ಇವರದ್ದೂ ಬರಕೋ'' ಅಹಮ್ಮದಗಾಗಿ ಇಕ್ರಾಮ ಹೇಳಿದ

''ಯಾರಲೇ ಇವ್ನು? ನನಗೆ ಗುರುತಿಲ್ಲ!'' ಗುಮಾಸ್ತ ತುಚ್ಛವಾಗಿ ಹೇಳಿದ. ಅಹಮ್ಮದ್ ತಟ್ಟನೆ ಹೇಳಿದ, ''ಬರಕೋಬೇಕಾಗಿಲ್ಲ. ನನ್ನ ವ್ಯವಸ್ಥೆ ನಾನೇ ಮಾಡಿಕೊಳ್ಳುತ್ತೇನೆ.''

''ಹಾಂ, ಇವರಿಗೆ ಬೇಕಿಲ್ಲ! ಬಹಳ ಮರ್ಯಾದಸ್ಥನಂತೆ ಕಾಣ್ತಾನೆ!'' ಗುಮಾಸ್ತನ ಈ ಮಾತಿಗೆ ಉಳಿದವರೆಲ್ಲ ನಕ್ಕರು.

''ದಿಲಾವರ ಭಾಯಿ, ನೀವು ಬರೆದುಕೊಳ್ಳಿ. ನಾನು ಸೇಠಗೆ ಹೇಳ್ತೇನೆ'' ಇಕ್ರಾಮ ತಣ್ಣಗಿನ ದನಿಯಲ್ಲಿ ಹೇಳಿದನು. ಅದರ ಕಾವು ತಟ್ಟನೆ ಪಸರಿಸಿತು. ನಗುವವರು ಸುಮ್ಮನಾದರು.

''ಬರಕೊಳ್ಳುತ್ತೇನಪ್ಪ! ನೀವು ಹೇಳಿದ ಮೇಲೆ ಬರೆದುಕೊಳ್ಳಲೇಬೇಕಲ್ಲ'' ಗುಮಾಸ್ತ ಕೆಳ ದನಿಯಲ್ಲಿ ಹೇಳಿದ. ''ಆದರೆ ಹೇಳೋದನ್ನು ಮರೆಯಬೇಡ. ಇಲ್ಲದಿದ್ದರೆ ನನ್ನನ್ನು ಬೈಯ್ತಾರೆ.''

- ೪ -

ನಗರದ ತುಂಬೆಲ್ಲಾ ಉಧ್ವಸ್ತಗೊಳಿಸಿದ, ಮುರಿದ, ಬೆಂಕಿ ಹಚ್ಚಿದ ಗುರುತುಗಳಿದ್ದವು. ಅಲ್ಲಲ್ಲಿ ರಸ್ತೆಯಲ್ಲಿ ಪೊಲೀಸರು ಮತ್ತು ದಂಗೆಯ ಅವಶೇಷ ನೋಡುವ ಜನರ ಗುಂಪು. ಒಂದು ಕಡೆ ರಸ್ತೆಯ ನಡುವೆ ಬೆಂಕಿಗೆ ಅರೆಬರೆ ಉರಿದುಬಿದ್ದ ಸೈಕಲ್ಲು ರಾಶಿ. ಟೈಯರು ಉರಿದುಹೋಗಿತ್ತು. ಅಡ್ಡ ತಿಡ್ಡ ಬಾಗಿದ ನಳಿಕೆ, ಚಕ್ರಗಳು. ರಸ್ತೆಯ ಬದಿಯ ಗಡಂಗುಗಳಂತೂ ಯಾವಾಗಲೋ ಭಸ್ಮವಾಗಿತ್ತು. ಒಂದು ಸಿಗರೇಟಿನ ಅಂಗಡಿಯ ಸುತ್ತಲೂ ಅಸಂಖ್ಯಾತ ಖಾಲಿ ಸಿಗರೇಟ್ ಪಾಕೀಟುಗಳು, ತಂಬಾಕಿನ ರಾಶಿ, ಅಡಿಕೆ ಪುಡಿಕೆಗಳ ಪ್ಲಾಸ್ಟಿಕ್ಕು. ಸುಟ್ಟು ಇದ್ದಲಾದ ಕಟ್ಟಡಗಳೂ ಇದ್ದವು. ಪೊಲೀಸರಂತೂ ಬೇಸತ್ತು ನಿಂತಿದ್ದರು. ಈ ಜಾತಿಯವರು ಆ ಮೊಹಲ್ಲಾಕ್ಕೆ, ಆ ಜಾತಿಯವರು ಈ ಮೊಹಲ್ಲಾಕ್ಕೆ – ಹೀಗೆ ಪರ್ಯಟನೆ ನಡೆದಿತ್ತು! ತಮ್ಮದೆಷ್ಟು ಹಾನಿ ಮತ್ತು ಬೈಸಾಬರದೆಷ್ಟು ಎಂಬ ಚರ್ಚೆ. ಅಂದರೆ ಬೈಸಾಬರದ್ದೇ ಹೆಚ್ಚು ಹಾನಿಯಾಗಿದೆ. ಆದರೆ ಅವರು ಹೊಡೆದಾಟಕ್ಕೆ ಕೇಳುವುದಿಲ್ಲ! ಸಿಟ್ಟಿನಿಂದ ನೋಡಿದರೆ ಸಾಕು ನಮ್ಮ ಕಣ್ಣೇ ಖಲಾಸ. ಇದು ಬೈಸಾಬನ ನಿತ್ಯದ ಕೆಲಸ! - ಮುಸಲ್ಮಾನರೆಲ್ಲ ಕಟುಕರೇ ಅನ್ನೋ ಹಾಗೆ! ಹೀಗೆ ದಂಗೆಯ ನಂತರ ನಡೆಯುವ ಸಾಮಾನ್ಯ ಚರ್ಚೆ.

ನಗರದ ಭಗ್ನ ರಸ್ತೆಯ ಮೇಲಿಂದ ತಿರುಗಾಡುವಾಗ ಯಾರಿಗೂ ಅಷ್ಟೊಂದು ದುಃಖವಾದಂತೆ ಕಾಣಲಿಲ್ಲ. ಮನುಷ್ಯ ಪರಸ್ಪರರ ಮನ ನೋಯಿಸಿದ ಗಾಯವನ್ನು ಹೊತ್ತು ರಸ್ತೆಗಳು, ಮನೆಗಳು ನಿಂತಿದ್ದವು. ಹಾನಿಗೊಳಗಾದವರೆಲ್ಲ ಬಡವರೇ. ಶ್ರೀಮಂತರ ಹವೇಲಿಗಳೆಲ್ಲ ಸುರಕ್ಷಿತವಾಗಿದ್ದವು. ಯಾವನೋ ಬೈಸಾಬನ ಲಾರಿ ಕಾಲೇಜಿನ ಎದುರು ಉರಿದು ಬೂದಿಯಾಗಿತ್ತು. ಅದರ ಹಾನಿ ತುಂಬಿಕೊಡುವ ವಿಮಾ ಇತ್ತು. ಗೂಡಂಗಡಿಯಲ್ಲಿ ಧಂದೆ ಮಾಡುವವರಿಗೆ ಯಾರೇನು ಕೊಡ್ತಾರೆ ? ದಂಗೆ ಮಾಡಿ ಬೆಂಕಿ ಹಚ್ಚಿದವರಲ್ಲೂ ಶ್ರೀಮಂತರಿರಲಿಲ್ಲ. ಬಡವರೇ ಬಡವರ ಮನೆ ಸುಟ್ಟರು. ಎಂದಿನಂತೆ ಅದು ಅವರ ಗಮನಕ್ಕೆ ಬರುತ್ತಿರಲಿಲ್ಲ.

ರಸ್ತೆಯಲ್ಲಿ ಹೊರಟ ಅಹಮ್ಮದನ ಮನದಲ್ಲಿ ಎಂದಿನಂತೆ ಮೂಡಿದ್ದೇನೆಂದರೆ, ಯಾವ ಧರ್ಮದ ಹೆಸರಿನಲ್ಲಿ ಇದೆಲ್ಲ ನಡೆಯುತ್ತದೆಯೋ, ಅದು ಬೇರೆ - ಬೇರೆಯಾಗಿರದಿದ್ದರೆ ಎಷ್ಟು ಒಳ್ಳೆಯದಾಗುತ್ತಿತ್ತು! 'ಮಜಹಬ್ ನಹೀ ಸಿಖಾತಾ ಆಪಸ್ ಮೇ ಬೈರ್ ರಖನಾ' (ಪರಸ್ಪರರನ್ನು ವೈರತ್ವದ ಭಾವನೆಯಿಂದ ನೋಡುವದನ್ನು ಧರ್ಮವೆಂದೂ ಬೋಧಿಸುವುದಿಲ್ಲ) – ಎಂದು ಇಕ್ಬಾಲ ಹೇಳಿದ್ದೇನೋ ಹೌದು, ಆದರೆ ಅವನೇ ಕೊನೆಗೆ ಹೊಸ ಮುಸಲ್ಮಾನ ದೇಶದ ಕಠೋರ ಅನುಯಾಯಿಯಾದ ! ಇದು ಆದದ್ದು ಹೇಗೆ ? ಎಲ್ಲರೂ ಹಿಂದೂಗಳೋ ಮುಸ್ಲಿಂರೋ ಆಗಿದ್ದರೆ...

'ಅಥವಾ ನಾನೇ ಹಿಂದೂವಾಗಿ ಜನಿಸಿದ್ದರೆ!' ಬಹಳ ಸಲ ತಲೆಯೆತ್ತಿದ ವಿಚಾರ ಇವತ್ತೂ ಕಾಣಿಸಿಕೊಂಡಿತು. ಹೀಗೆಲ್ಲ ನಿರ್ಗತಿಕ ತಬ್ಬಲಿಯಂತೆ, ಸತತ ಹೆದರಿಕೆ, ಉದ್ವಿಗ್ನತೆಯಲ್ಲಿ ಬದುಕುವ ಸಂದರ್ಭ ಬರುತ್ತಿರಲಿಲ್ಲ. ಅಂದರೆ ಹಿಂದೂಗಳಲ್ಲಿರುವ ನೂರೆಂಟು ಜಾತಿಯ, ಅವರ ಅಧೋಗತಿಯ ಯೋಚನೆಯೂ ಅವನ ಮನದಲ್ಲಿ ಮೂಡುತ್ತಿತ್ತು. ಅಂಥ ಕಾಲಕ್ಕೆ ತಾನು ಮರಾಠಾ ಆಗಿ ಹುಟ್ಟಿದ್ದರೆ ಒಳ್ಳೆಯದಾಗುತ್ತಿತ್ತು ಎಂದೂ ಅನಿಸುತ್ತಿತ್ತು.

ಅಹಮ್ಮದ ಮನೆ ತಲುಪಿದ. ಅವನ ಬೀಬಿ ಕಾಳಜಿಯಿಂದ ಹೈರಾಣಾಗಿದ್ದಳು. ಅವನನ್ನು ಏನೂ ಕೇಳುವ ಹಾಗಿರಲಿಲ್ಲ. ಅವನಂತೂ ಅವಳಿಗೆ ಏನೂ ಹೇಳುತ್ತಿರಲಿಲ್ಲ. ಉಳಿದವರೂ ಹೇಳುತ್ತಿರಲಿಲ್ಲ. ಆಕೆಯ ದೀನವಾಣಿ ಮುಖ ನೋಡಿ ಅವನ ಮನ ಕರಗುತ್ತಿತ್ತು. ಆದರದು ಆಕೆಯ ಅಪರೋಕ್ಷ. ಎದುರಿಗೆ ಮಾತ್ರ ಆಕೆ ಹಾಗೆ ಕಾಣುತ್ತಲೇ ಅವನ ತಲೆ ತಿರುಗುತ್ತಿತ್ತು. ಎಲ್ಲ ಸಿಟ್ಟು ಕಿರಿಕಿರಿಯನ್ನೆಲ್ಲ ಆಕೆಯ ಮೇಲೆ ಕಾರಿಕೊಳ್ಳುತ್ತಿದ್ದ. ಪಠ ಪಠ ಮಾತಾಡುತ್ತಿದ್ದ. ಆಕೆ ಮತ್ತಷ್ಟು ಬೆದರಿಹೋಗುತ್ತಿದ್ದಳು.

ಆದರಿಂದು ಅವನು ಹಾಗೇನೂ ಮಾಡಲಿಲ್ಲ. ಅವನು ಮನೆಗೆ ಮರಳಿದ. ಸೋತವನಂತೆ ಕೂತುಕೊಂಡ. ಆಕೆ ನೀಡಿದ ಬಿಸಿ ನೀರಿನಿಂದ ಸ್ನಾನ ಮಾಡಿದ. ಎದುರಿಗಿಟ್ಟ ರೊಟ್ಟಿ- ಪಲ್ಲೆಯನ್ನು ತಲೆ ತಗ್ಗಿಸಿ ತಿಂದ. ಮೈಮೇಲೆ ಬಿದ್ದು ಆಡುವ ರುಕ್ಸಾನಾ ಹಾಗೂ ಖುರ್ಶಿದ ಜೊತೆ ಮನತುಂಬಿ ಮಾತಾಡತೊಡಗಿದ.

-೫-

ನಾಲ್ಕಾರು ದಿನಗಳ ಬಳಿಕ ನಿತ್ಯಕ್ರಮ ಸುಗಮವಾಗಿ ಸಾಗತೊಡಗಿತು. ಎಲ್ಲೆಡೆ ಸುಟ್ಟ ಗುರುತು ಅಳಿಸುವುದು, ಬಿದ್ದದ್ದು ಕಟ್ಟುವದು, ಬಾರದಾನಿನ ಹೊಸ ಗೂಡಂಗಡಿ ಕಟ್ಟುವುದು - ಇದೆಲ್ಲ ಆರಂಭಗೊಂಡಿತು. ಅಹಮ್ಮದ ಕಾಲೇಜಿನಲ್ಲಿ ಒಂದೆರಡು ದಿನ ಸಂಕೋಚಪಟ್ಟ. ತಾನು ಜೇಲಿಗೆ ಹೋಗಿದ್ದರಿಂದ ಎಲ್ಲರೂ ತನ್ನನ್ನು ದಿಟ್ಟಿಸಿ ನೋಡುತ್ತಿದ್ದಾರೆಂದು ಅನಿಸಿತು. ಅವನು ಪ್ರಾಚಾರ್ಯರನ್ನು ಕಂಡು ಎಲ್ಲ ಹೇಳಿದ. ತನ್ನದು ಯಾವ ಸಂಬಂಧ ಇರದಿದ್ದರೂ, ತಾನು ಹೇಗೆ ಬಂಧಿಸಲ್ಪಟ್ಟ ಇತ್ಯಾದಿ – ಶೆರೆ ಕುಡಿದದ್ದನ್ನು ಹೇಳುವ ಪ್ರಶ್ನೆಯೇ ಇರಲಿಲ್ಲ! ಪ್ರಾಚಾರ್ಯರಿಗೆ ಅವನ ಮಾತು ಒಪ್ಪಿಗೆಯಾಯಿತು. ಅವರೇನೂ ಹೇಳಲು ಹೋಗಲಿಲ್ಲ. 'ಸರಿ, ಡ್ಯೂಟಿ ಮಾಡು !' ಎಂದರು. ಉಳಿದವರು ಹೆಚ್ಚಿನ ಚರ್ಚೆ ಮಾಡಲಿಲ್ಲ. ಅಲ್ಲದೆ ಒಬ್ಬ ಪ್ಯೂನ ದಂಗೆಯಲ್ಲಿ ಬಂಧನಕ್ಕೊಳಗಾಗಿ ಜೈಲಿನಲ್ಲಿ ಹಾಕೋದು ಉಳಿದವರ ದೃಷ್ಟಿಯಲ್ಲಿ ಸಾಮಾನ್ಯ ವಿಷಯವಾಗಿತ್ತು. ಭಯಂಕರವಾದದ್ದೇನೂ ಅದರಲ್ಲಿಲ್ಲ.

ತಾನು ಸನಿಹಕ್ಕೆ ಹೋದರೆ ಉಳಿದ ಪ್ಯೂನ ಮಾತಾಡುವುದನ್ನು ನಿಲ್ಲಿಸುತ್ತಾರೆ. ಅವರು ತನ್ನ ಹೊರತು ಮಾತಾಡುತ್ತಿರಬೇಕೆಂದು ಅಹಮ್ಮದನಿಗನಿಸಿತು. ಕೆಲಮಟ್ಟಿಗೆ ಅದು ಸತ್ಯವೂ

ಹೌದು. ಆದರೆ ಅದು ಅಷ್ಟಕ್ಕಷ್ಟೇ.

ಅಹಮ್ಮದ್ ಮೆಲ್ಲಗೆ ಎಲ್ಲರೊಡನೆ ಹೊಂದಿಕೊಂಡ.

ಶಹರದ ಹಿಂದೂ ವ್ಯಾಪಾರಿಗಳು ವಂತಿಕೆ ಸಂಗ್ರಹಿಸಿ ದಂಗೆಯಲ್ಲಿ ಹಾನಿಗೊಳಗಾದವರಿಗೊಂದು ಫಂಡು ಮಾಡಿದರು. ಮುಸಲ್ಮಾನರೂ ಅದನ್ನೇ ಮಾಡಿದರು.

ಒಂದು ದಿನ ಬೆಳಿಗ್ಗೆ ಒಬ್ಬ ಬಂದು ಹೇಳಿದ: ''ಇವತ್ತು ಸಂಜೆ ಬಾ, ಅಲೀ ಸಾಹೇಬರು ಹಾನಿಯಾದವರಿಗೆ ಹಣ ನೀಡಲಿದ್ದಾರೆ.''

ಈ ಅಲೀಸಾಹೇಬ ಯಾರು ?

ಅವನು ಸಹಜವಾಗಿ ಕೇಳಿದ, ''ಇವರಾರು ? ನನಗಂತೂ ಪರಿಚಯವಿಲ್ಲ''

''ಶಹರಿನ ಅತ್ಯಂತ ಶ್ರೀಮಂತ ಹಾಗೂ ತುಂಬಾ ಒಳ್ಳೆ ಮನುಷ್ಯ.''

''ನನ್ನದೇನೂ ಹಾನಿಯಾಗಿಲ್ಲ ನಾನು ಬರುವುದಿಲ್ಲ'' ಅಹಮ್ಮದ್ ತಕ್ಷಣ ಉತ್ತರಿಸಿದ. ಅದಕ್ಕಾಗಿ ಆ ಗಲ್ಲಿಗೆ ಹೋಗೋದು. ಪರಿಚಯ ಬೆಳೆಯೋದು... ಅದಕ್ಕಿಂತ ಹೋಗದೆ ಇರೋದೆ ಒಳ್ಳೆಯದು ! ಅವರೊಂದಿಗೆ ಸಂಪರ್ಕ ಬೇಡ !

''ಯಾಕೆ ?'' ಆ ಮನುಷ್ಯನಿಗೆ ಏನೂ ಗೊತ್ತಾಗಲಿಲ್ಲ.'' ನಿಮ್ಮ ಸೈಕಲ್ಲು ಹೋಗಿದೆಯಲ್ಲ.. ಇಕ್ರಮ ಭಾಯಿನೇ ನನ್ನನ್ನು ಕಳಿಸಿದ್ದು.''

''ಸರಿ.''

''ಸುಮ್ನೆ ಹೇಳಿದಷ್ಟು ಕೇಳು. ಬಂದುಬಿಡು. ಎಂತೆಂಥವರು ಬಂದು ಲಾಭ ಮಾಡಿಕೊಳ್ತಾರೆ ! ನಿನಗೇನು ಹುಚ್ಚು-ಗಿಚ್ಚು ಹಿಡಿದಿದೆಯೇ ?'' ನಗುತ್ತ ಹೇಳಿ ಅವನು ಹೊರಟುಹೋದ.

ಕೆಲ ಸಮಯದ ಬಳಿಕ ಹೆಂಡತಿ ಅವನಿಗೆ ಊಟ ನೀಡಿದಳು. ಎಲ್ಲ ಎಂದಿನಂತೆ ಮೌನ. ಸುಮ್ನೆ ಮಾತಿಗೆ ಮಾತು ಬೆಳೆದರೆ ಧರಣಿ ರಂಪವಾಗಿ ತನ್ನನ್ನು ನುಂಗೀತು ! ಹೀಗಾಗಿ ಆಕೆ ಏನು ಹೇಳುತ್ತಲೂ ಇರಲಿಲ್ಲ, ಕೇಳುತ್ತಲೂ ಇರಲಿಲ್ಲ. ಆದರಿಂದು ಆಕೆಗೆ ಏನೋ ಹೇಳಬೇಕಿದೆ, ಧೈರ್ಯ ತಂದುಕೊಳ್ಳುವ ಪ್ರಯತ್ನ ಮಾಡುತ್ತಿದ್ದಾಳೆಂದು ಅಹಮ್ಮದನಿಗೆ ಅನಿಸಿತು. ಆಕೆ ಹೊರಳಿ ಅವನನ್ನು ನೋಡುತ್ತಿದ್ದಳು. ತಪ್ಪಿ ಇದ್ದ ಪದಾರ್ಥವನ್ನೇ ಮತ್ತೆ ಹಾಕುತ್ತಿದ್ದಳು !

''ಏನಿದು ? ಏನಾಗಿದೆ ನಿನಗಿಂದು ?'' ಅವನು ನಕ್ಕು ಕೇಳಿದ. ಆಕೆಗೆ ಧೈರ್ಯ ಬಂತು.

''ಆ ಮನುಷ್ಯ ಕರೆದಲ್ಲಿಗೆ ಇಂದು ಸಂಜೆ ಹೋಗೋದಿಲ್ವೇ ?''

''ಇಲ್ಲ ನಾನು ಆ ಹೊಲಸು ಗಲ್ಲಿಯೊಳಗೆಂದೂ ಹೋಗೋದಿಲ್ಲ'' ಅಹಮ್ಮದ ಕೆರಳಿ ಹೇಳಿದ. ಅವಳು ಅವನ ದನಿಗೆ ಬೆದರಿ ಮತ್ತೆ ಸುಮ್ಮನಾದಳು. ಸರಸರ ಊಟ ಮುಗಿಸಿ ಅವನು ಏಳಬೇಕೆನ್ನುವಷ್ಟರಲ್ಲಿ ಅವಳು ಗಟ್ಟಿ ಮನಸ್ಸು ಮಾಡಿ ಕೇಳಿದಳು, ''ನಮಗಲ್ಲೊಂದು ಮನೆ ಸಿಗೋದಿಲ್ಲವೇ ?''

''ಎಲ್ಲಿ ?'' ಮುಂದೆ ಹೊರಟ ಅಹಮ್ಮದ ಸ್ಥಳದಲ್ಲೇ ನಿಂತ.

''ನಮ್ಮ ಗಲ್ಲಿಯೊಳಗೆ ?''

''ಎಲ್ಲಿ? ಸಯ್ಯದ್ ಬಾಬಾ ಚೌಕಿನಲ್ಲೇ ?''

''ಹೌದು''

''ಯಾಕೆ ಏನಾಯ್ತು ?''

ಆಕೆ ಪುನಃ ಸುಮ್ಮನಾದಳು. ಅವನ ಕೆರಳಿದ ಮುಖ. ಯಾವ ಕ್ಷಣಕ್ಕೂ ಭುಗಿಲೇಳುವ ಆವಿರ್ಭಾವ. ಆಕೆ ತನ್ನ ಮನದ ಎಲ್ಲ ಭಾವನೆ ಹೊರಹಾಕಬೇಕೆಂಬ ಉತ್ಸಾಹ. ಆದರೆ ಅವನು ಕೆರಳುವ ಭೀತಿಗೆ ಆಕೆಯದನ್ನು ಹತ್ತಿಕ್ಕಿದಳು. ಆಕೆಯ ದೇಹ ಕಂಪಿಸಲಾರಂಭಿಸಿತು. ಕಂಗಳು ತುಂಬಿ ಬಂದವು. ಅವನ ಮುಖ ಭಾವವೂ ಸರಸರ ಬದಲಾಯಿತು. ಕೆರಳುವ ಸ್ಥಳದಲ್ಲಿ ಸ್ವಲ್ಪ ಮಮತೆ ಉಕ್ಕಿ ಬಂತು. ಆಕೆಯ ಭೀತಿ, ಥರಥರ, ತುಂಬಿದ ಕಂಗಳು, ಇದನ್ನೆಲ್ಲ ಕಂಡು ಅವನು ಮೆತ್ತಗಾದ. ಆಕೆಯ ಕಣ್ಣುಗಳು ಹನಿಯಿಟ್ಟವು. ಅವನು ಮುಂದೆ ಬಂದು ಆಕೆಯನ್ನು ತಬ್ಬಿಕೊಂಡ.

''ಏನಾಯ್ತು ? ಏನಾಯ್ತು ?'' ಅವನು ಕೇಳತೊಡಗಿದ. ಆಕೆಗೆ ದುಃಖದ ಕಟ್ಟೆ ಒಡೆಯಿತು. ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಅವನು ಮಮತೆಯಿಂದ ಬೆನ್ನು ತಟ್ಟಿದ.

ಮೆಲ್ಲಗೆ ಆಕೆ ಎಲ್ಲ ಹೇಳಿದಳು. ದಂಗೆಯ ಕಾಲದ ಸ್ಥಿತಿ, ಭೀತಿಯಿಂದ ಅಧೀರಗೊಂಡ ಅವಳ ವರ್ತನೆ, ಅದರಿಂದ ಬೆದರಿದ ಮಕ್ಕಳು, ಮುಚ್ಚಿದ ಬಾಗಿಲು, ಹೊರಬೀಳಲೂ ಹೆದರಿಕೆ, ಯಾರಿಂದಲೂ ಎಲ್ಲಿಂದಲೂ ಬಾರದ ಸುದ್ದಿ, ಸುತ್ತಲೆಲ್ಲ ಮುಸ್ಲಿಂ ದ್ವೇಷದ

ಮಹಾಪೂರ, ಜನರ ಬಹಿರಂಗ ಬಯ್ಗುಳು, ಬಾಗಿಲು ಮುಚ್ಚಿ ಒಳಗೆ ಕೂತರೂ ಕಿವಿಗಪ್ಪಳಿಸುವ ಚುಚ್ಚು ಮಾತು. ಈ ತೋಳಗಳನ್ನು ಸೀಳಬೇಕು, ಕೊಲ್ಲಬೇಕು, ಪಾಕಿಸ್ತಾನಕ್ಕೆ ಕಳಿಸಬೇಕು...

''ದಂಗೆಯ ಕಾಲದಲ್ಲಿ ಇದೆಲ್ಲ ನಡೆಯೋದೆ. ಯಾರಾದರೂ ಬಂದು ನಿನಗೆ ಬೆದರಿಕೆ ಹಾಕಿದರೇನು ?'' ಅಹಮ್ಮದ್ ತಿಳುವಳಿಕೆ ನೀಡುತ್ತ ಕೇಳಿದ.

''ಇಲ್ಲ ಹಾಗೇನು ನಡೆದಿಲ್ಲ.''

''ಮತ್ತೆ ? ದಂಗೆ ಪ್ರತಿದಿನ ನಡೆಯುತ್ತದೆಯೇ ? ಇರಲಿ ಬಿಡು, ಹೊತ್ತಾಗಿದೆ, ನಾನು ಹೋಗ್ತೇನೆ'' ಎಂದು ಅಹಮ್ಮದ ಹೊರಬಿದ್ದ.

''ರೂಕ್ಸಾನಾ ಸ್ಕೂಲಿಗೆ ಹೋದಳಲ್ಲವೇ ?'' ಅವನು ಸಹಜವಾಗಿ ಕೇಳಿದ. ಅವಳು ಬೆಳಿಗ್ಗೆನೆ ಶಾಲೆಗೆ ಹೋಗುತ್ತಿದ್ದಳು. ಆಗವನು ಹಾಸಿಗೆಯಲ್ಲಿ ಹೊರಳಾಡುತ್ತ ಬಿದ್ದಿರುತ್ತಿದ್ದ. ಅವಳು ಶಾಲೆಗೆ ಹೋಗಿದ್ದು ಅವನಿಗೆ ಗೊತ್ತಿತ್ತು.

''ಅವಳಂತೂ ಈಗ ದಿನಾ ಅಳ್ತಾಳೆ! ಶಾಲೆಗೆ ಹೋಗುವುದಿಲ್ಲಂತಾಳೆ. ಅಲ್ಲಿಯ ದೊಡ್ಡ ಹುಡುಗರು ನಮ್ಮ ಶಾಲೆಗೆ ಬರಬೇಡಂತ ಬಾಗಿಲಲ್ಲಿ ನಿಂತು ಅಡ್ಡಗಟ್ಟುತ್ತಾರಂತೆ, ಹೊಡೆಯುತ್ತಾರಂತೆ'' ಆಕೆ ಹೇಳಿದಳು.

''ಯಾರ ಹುಡುಗರು ?''

''ಅವರ ಹುಡುಗರು !''

''ನಂಗೆ ಹೇಳಲಿಲ್ಲವಲ್ಲ ನೀನು'' ಅಹಮ್ಮದನ ಹೃದಯ ವೇದನೆಯಿಂದ ಬಳಲಿತು. ಅವನು ಮಗಳನ್ನು ತುಂಬಾ ಪ್ರೀತಿಸುತ್ತಿದ್ದ. ತನ್ನ ಇಬ್ಬರೂ ಮಕ್ಕಳು ಒಳ್ಳೆ ಶಾಲೆಯಲ್ಲಿ ಕಲಿಯಬೇಕು, ಎಂಬ ಕಾರಣಕ್ಕೆ ಹೆಚ್ಚು ಫೀ ನೀಡಿ ನಗರದ ಆ ಶಾಲೆಗೆ ಕಳಿಸಿದ್ದ. ಮುಸ್ಲಿಂ ಮೊಹಲ್ಲಾದ ಬಡ ಮಕ್ಕಳು ಉರ್ದು ಶಾಲೆಯಲ್ಲಿ ಕಲಿಯುತ್ತಾರೆ. ಕಾರಣ ಅಲ್ಲಿ ಫೀ ಇಲ್ಲ. ಶ್ರೀಮಂತರು ತಮ್ಮ ಮಕ್ಕಳನ್ನು ಇಂಗ್ಲಿಷ್ ಶಾಲೆಗೋ, ಒಳ್ಳೆ ಪ್ರೈವೆಟ್ ಶಾಲೆಗೂ ಕಳಿಸುತ್ತಾರೆ. ಉರ್ದು ಶಾಲೆಯಲ್ಲಿ ಕಲಿತರೆ ಯಾವ ಭವಿಷ್ಯವೂ ಇಲ್ಲ. ಹಾನಿಯೇ ಹೆಚ್ಚು. ಇದನ್ನೆಲ್ಲ ತಿಳಿದೇ ಅಹಮ್ಮದ ಒಳ್ಳೆಯ ಶಾಲೆಗೆ ಮಗಳನ್ನು ಕಳಿಸಿದ್ದ.

-೬-

ಅಹಮ್ಮದ್ ಸೈಕಲ್ಲೇರಿದ. ಇದು ಬಾಡಿಗೆಯ ಸೈಕಲ್ಲಾಗಿತ್ತು. ಹಾದಿಯಲ್ಲಿ ಮತ್ತೊಬ್ಬ ಪ್ಯೂನ ಸಿಕ್ಕ. ತನ್ನ ಆರೋಗ್ಯ ಸರಿಯಿಲ್ಲದ್ದರಿಂದ ಬರುವದಾಗುವುದಿಲ್ಲೆಂದು ತಿಳಿಸುವಂತೆ ಸೂಚಿಸಿದ. ಬಳಿಕ ವಿರುದ್ಧ ದಿಕ್ಕಿನಲ್ಲಿರುವ ರುಕ್ಸಾನಳ ಶಾಲೆಯತ್ತ ಹೊರಟ.

ಹಾದಿಯಲ್ಲಿ ಅವನಿಗೆ ಏನೂ ಕಾಣುತ್ತಿರಲಿಲ್ಲ. ಮಗಳು, ಆಕೆಯ ಶಾಲೆ, ಆಕೆಯನ್ನು ಅಡ್ಡಗಟ್ಟುವ ಮಕ್ಕಳು. ಶಾಲೆ ಬಿಡುವ ಹೊತ್ತೂ ಆಗಿತ್ತು.

ಅವನು ಶಾಲೆ ತಲುಪಿದ. ಮಕ್ಕಳು ಗುಂಪು ಗುಂಪಾಗಿ ಹೊರ ಬರಲಾರಂಭಿಸಿದರು. ಬಿಳಿ ಯೂನಿಫಾರಂ ತೊಟ್ಟ ಹುಡುಗ - ಹುಡುಗಿಯರು ಪ್ರವೇಶ ದ್ವಾರದಿಂದ ಸರಸರ ಹೊರ ಬೀಳುತ್ತಿದ್ದರು. ಅವರ ನಗು, ಹಾಸ್ಯ, ಕೋಲಾಹಲದಿಂದ ಎಲ್ಲೆಡೆ ಚೈತನ್ಯ ತುಂಬಿ ಕೊಂಡಿತ್ತು. ಈ ಯೂನಿಫಾರ್ಮಿನ ಪೋಷಾಕಿನಲ್ಲಿ ತನ್ನ ಮಗಳನ್ನು ಹುಡುಕೋದು ಹೇಗೆ ?

ಅಹಮ್ಮದನಿಗೆ ಅನಿಸಿತು. ಹಿಂದೂ ಏನು, ಮುಸ್ಲಿಂ ಏನು, ಮಕ್ಕಳಿಗೆಲ್ಲಿಯ ಧರ್ಮ!

ಅವನು ಏಕಾಗ್ರತೆಯಿಂದ ರುಕ್ಸಾನಳನ್ನು ಹುಡುಕತೊಡಗಿದ. ಹುಡುಗಿಯರ ನಡುವೆ ಅವಳು ಕಾಣಲಿಲ್ಲ. ಅವನು ಗಲಿಬಿಲಿಗೊಂಡ.

ಮೆಲ್ಲಗೆ ಗುಂಪು ಕರಗಿತು. ಬಳಿಕ ಕೆಲ ದೊಡ್ಡವರು ಬಾಗಿಲಿಗೆ ಬಂದರು. ಅಹಮ್ಮದನಿಗೆ ಅವರ ಗುರುತು ಹತ್ತಿತು. ಶ್ರೀಮಂತ ಮುಸ್ಲಿಂ ರಲ್ಲಿ ಕೆಲಸ ಮಾಡುವ ಜನರಾಗಿದ್ದರು ಅವರು. ಅವರು ಶ್ರೀಮಂತರ ಮಕ್ಕಳನ್ನು ಕರೆದೊಯ್ಯಲು ಬಂದಿದ್ದರು. ಅನಂತರ ಕೆಲವು ಬೆಳೆದ ಮಕ್ಕಳು ಬಂದರು. ಅವರು ಮಾತ್ರ ಈ ಶಾಲೆಯ ಮಕ್ಕಳಂತೆ ಕಾಣಲಿಲ್ಲ.

ಅವನ ಮಗಳು ಮಾತ್ರ ಕಾಣಲಿಲ್ಲ. ಆ ಅಪರಿಚಿತ ಮಕ್ಕಳು ಗೇಟಿನ ಬಳಿ ನಿಂತರು. ಅಹಮ್ಮದ ಎದುರಿಗೆ ನೋಡಿದ. ಅವನ ಮುದ್ದಿನ ಮಗಳು ಬೆದರಿದ ಕಂಗಳಿಂದ ಒಂದೊಂದೇ ಹೆಜ್ಜೆಯಿಡುತ್ತ ಬರುತ್ತಿದ್ದಳು. ಎದುರಿಗೆ ನಿಂತಿದ್ದ ಅಹಮ್ಮದನ ಕಡೆ ಅವಳ ನೋಟ ಹೋಗಿರಲಿಲ್ಲ. ರುಕ್ಸಾನ ಹೆದರಿದ ಕಾರಣ ಅವನಿಗೆ ಗೊತ್ತಾಯಿತು; ಆದರೂ ಅವನು ನಿಂತ. ರುಕ್ಸಾನಾ ಬಳಿಗೆ ಬರುತ್ತಲೇ ಅವರಲ್ಲೊಬ್ಬಾತ ಆಕೆಯ ತೋಳು ಹಿಡಿದ.




ಅಹಮ್ಮದ ಮುಂದೆ ನುಗ್ಗಿದವನೇ ಆ ಹುಡುಗನ ಕೆನ್ನೆಗೆ ಹೊಡೆದ. ''ಏನೋ ? ಅವಳೇನು ಮಾಡಿದಳು ನಿಂಗೆ ?'' ಅಹಮ್ಮದ್ ಕಂಪಿಸುವ ಸ್ವರದಲ್ಲಿ ಕೇಳಿದ.

ಆ ಮಕ್ಕಳೆಲ್ಲ ಬೆದರಿದವು. ಅಹಮ್ಮದನ ಅನಿರೀಕ್ಷಿತ ಹಲ್ಲೆಯಿಂದ ಕ್ಷಣಕಾಲ ಅವರಿಗೇನೂ ಹೊಳೆಯಲಿಲ್ಲ. ಈವರೆಗೆ ಅವರು ಉಳಿದವರನ್ನು ಬೆದರಿಸುತ್ತಲೇ ಇದ್ದರು.

''ಯಾಕೋ ? ಅವಳೇನು ಮಾಡಿದಳು ?'' ಅವನು ಪುನಃ ಕೇಳಿದ.

''ಆಕಿ ಮುಸಲರಾಕಿ, ನಮ್ಮ ಸಾಲಿಗೆ ಯಾಕೆ ಬರ್ತಾಳೆ ?'' ಅವರಲ್ಲಿಯ ಮತ್ತೊಬ್ಬ ಕೇಳಿದ ಬಳಿಕ ಎಲ್ಲರೂ ಓಡಿಯೇಬಿಟ್ಟರು.

''ನಿಮ್ಮಪ್ಪನ ಶಾಲೆಯೇನೋ ಬದ್ಮಾಶ್ ?'' ಓಡಿ ಹೋಗುವ ಮಕ್ಕಳ ಬೆನ್ನಿಗೆ ಅಹಮ್ಮದ ಕೇಳಿದ. ಅದೂ ತನ್ನಷ್ಟಕ್ಕೆ. ಸಿಟ್ಟಿನಿಂದ ಅವನ ಮೈ ಉರಿದೆದ್ದಿತ್ತು.

''ಈ ಹುಡುಗರು ದಿನಾ ಕಾಡ್ತಾರೇನು ?'' ಅಹಮ್ಮದ ಮಗಳಿಗೆ ಕೇಳಿದ. ಆಕೆ ಅಳುತ್ತಿದ್ದಳು. ಅಪ್ಪನನ್ನು ಕಂಡು ಅವಳಿಗೆ ಸಾಕಷ್ಟು ಧೈರ್ಯ ಬಂದಿತ್ತು. ಈ ಹುಡುಗರು ತನಗೇಕೆ ತೊಂದರೆ ಕೊಡುತ್ತಿದ್ದಾರೆ ಎನ್ನುವುದೇ ಅವಳಿಗೆ ತಿಳಿಯಲಿಲ್ಲ. ಶಾಲೆಯಿಂದ ಹೊರಬೀಳುವಾಗ ಆಕೆ ದಿನಾಲು ಹೆದರುತ್ತಿದ್ದಳು.

ಅಹಮ್ಮದ್ ಅವಳನ್ನು ಕರಕೊಂಡು ಸರಸರ ಶಾಲೆಯೊಳಗೆ ಹೋದ. ನೇರವಾಗಿ ಮುಖ್ಯಾಧ್ಯಾಪಕರ ಕೋಣೆಗೆ ಹೋದ. ಅವನ ವೇಗ, ಆವಿರ್ಭಾವ, ಸಂತಾಪ ಕಂಡು ಅವನ ಮಗಳು ಹೆದರಿದಳು.

''ಸರ್ ಇದ್ದಾರೇನು ?'' ಅಲ್ಲಿಯ ಪ್ಯೂನನಿಗೆ ಕೇಳಿದ.

''ಇಲ್ಲ, ಯಾಕೆ ?'' ಪ್ಯೂನ್ ಶಾಂತ ಸ್ವರದಲ್ಲಿ ಕೇಳಿದ. ''ಏನಾಯ್ತು ?'' ಸಂಶಯದಿಂದ.

''ಇದೇನು ನಿಮ್ಮ ಶಾಲೆಯೋ ಏನ್...'' ಅಹಮ್ಮದ್ ಸ್ವಂತಕ್ಕೆ ಕೆರಳಿದಂತೆ ಮಾತಾಡ ಲಾರಂಭಿಸಿದ. ಬಳಿಕ ತಟ್ಟನೆ ಸುಮ್ಮನಾದ. ಈ ಪ್ಯೂನಿಗೆ ಹೇಳಿ ಏನೂ ಪ್ರಯೋಜನ ಇಲ್ಲೆಂದೆನಿಸಿತು. ಅಲ್ಲದೆ ಭಾವನಾತಿರೇಕದಿಂದ ಏನೂ ಮಾತನಾಡುವುದೂ ಆಗಲಿಲ್ಲ. ತಲೆ ಸಿಡಿದು ಹೋಗುವಷ್ಟು ಸಿಟ್ಟು ಬಂದಿತ್ತು.

-೭-

ಮಗಳನ್ನು ಸೈಕಲ್ ಮೇಲೆ ಕುಳ್ಳಿರಿಸಿಕೊಂಡು ಅಹಮ್ಮದ್ ಮನೆಗೆ ಹೊರಟ. ಹಾದಿಯಲ್ಲಿ ತಲೆ ಶಾಂತವಾಗತೊಡಗಿತು. ಮನಸ್ಸು ಮಾತ್ರ ರೋಸಿಹೋಗಿತ್ತು. ಆದರೆ ಈಗವನು ಬೇಗ ಶಾಂತಗೊಳ್ಳತೊಡಗಿದ. ಹೀಗೆಲ್ಲ ಸಿಟ್ಟಿಗೆದ್ದು ಪ್ರಯೋಜನವಿಲ್ಲ. ಏನಾದರೂ ಮಾರ್ಗ ಹುಡುಕಬೇಕು ಎಂದೆನಿಸಿತು.

ಆದರೆ ಮಾರ್ಗ ಯಾವುದು ?

ಮಗಳನ್ನು ಪ್ರತಿದಿನ ಶಾಲೆಯಿಂದ ಕರೆತರುವುದಂತೂ ಅವನಿಗೆ ಸಾಧ್ಯವಿಲ್ಲ. ಮಗಳ ವಿಷಯ ಬಿಟ್ಟರೂ, ಕೆಲಹೊತ್ತಿನ ಹಿಂದೆ ಹೇಳಿದ ಹೆಂಡತಿಯ ಮಾತಿನ ಬಗೆಗೆ ಯೋಚಿಸಬೇಕಿತ್ತು. ಆಕೆಯನ್ನು ಹೇಗೋ ಸಮಾಧಾನಪಡಿಸಿದರೂ ಪ್ರಶ್ನೆ ಬಗೆಹರಿದಿರಲಿಲ್ಲ.

ಪ್ರಾಚಾರ್ಯರ ಚಿಕ್ಕ ಮಗುವನ್ನು ಅಹಮ್ಮದ ಆಗಾಗ ಶಾಲೆಗೆ ತಲುಪಿಸಿ ಬರುತ್ತಿದ್ದ. ಪ್ರಾಚಾರ್ಯರೇನು ಅವನಿಗೆ ಹೇಳಿರಲಿಲ್ಲ. ಸಹಜ ಒಂದೆರಡು ಬಾರಿ ಕರೆದೊಯ್ದಿದ್ದ. ಬಳಿಕ ಆ ಹುಡುಗನೇ ಇವನ ಜೊತೆಗೆ ಶಾಲೆಗೆ ಹೋಗುವುದಾಗಿ ಹಠ ಹಿಡಿಯುತ್ತಿದ್ದ. ಪ್ರಾಚಾರ್ಯರು ಹುಡುಗನ ಬಗೆಗೆ ಅವನಿಗೂ ಮುದ್ದು ಎಂದು ಸುಮ್ಮನಾದರು. ಇಬ್ಬರೂ ಸೈಕಲ್ಲಿನಲ್ಲಿ ಕೂತು ಮೋಜು ಮಾಡುತ್ತ ಶಾಲೆಗೆ ಹೋಗುತ್ತಿದ್ದರು.

ಆ ಹುಡುಗ ಒಂದು ದಿನ ಮೋಜಿನಿಂದ ವಿಷಯ ಹೇಳಿದ:

''ಅಹಮ್ಮದ ಕಾಕಾ, ಮೊನ್ನೆ ನಾವು ಓಡೋಡಿ ಬಂದ್ವಿ.''

''ಯಾಕೆ ಏನಾಯ್ತು ?''

''ಆ ಮುಸಲ್ಯಾರ ಅದಾರಲ್ಲ, ಅವರು ಬೆನ್ನು ಹತ್ತಿದ್ರು , ನಾವು ಅವರಿಗೆ ಕಲ್ಲು ಹೊಡೆದು, ಓಡಿದಿವಿ.''

''ಯಾವ ಮುಸಲ್ಯಾರು ?''

''ಅವರ SS ನಿಮ್ಗ ಇಷ್ಟೂ ಗೊತ್ತಾಗುದಿಲ್ಲ. ಭಾಳ ಕೆಟ್ಟ ಜನ. ಮಕ್ಕಳನ್ನು ಅಪಹರಣ ಮಾಡ್ತಾರಂತ, ಕೊಲ್ತಾರಂತ.''

''ನಿಂಗ ಯಾರ ಹೇಳಿದ್ರು.''

''ನಂಗೊತ್ತದ'' ಹುಡುಗ ಧಿಮಾಕಿನಿಂದ ಹೇಳಿದ. ಅವನ ಮುಖದ ಮೇಲೆ ಅಮಾಯಕತೆ, ಮುಗ್ಧತನ, ಅದರ ಮೇಲೆ ಎಂಥ ಹೊಲಸು ಸಂಸ್ಕಾರ. ಅಹಮ್ಮದನ ಮನ ವ್ಯಾಕುಲಗೊಂಡಿತು.

''ನಾನೂ ಮುಸಲ್ಮಾರವನ!'' ಅಹಮ್ಮದ ಮೆಲ್ಲಗೆ ಹೇಳಿದ.

''ಸುಳ್ಳ. ನೀವ ಹ್ಯಾಂಗ ಮುಸಲ್ಮಾರು ? ನೀವು ಭಾಳ ಒಳ್ಳೆಯವರು ! ಮುಸಲ್ಮಾರು ಭಾಳ ಕೆಟ್ಟ ಇರ್ತಾರು. ಅವರ ಮನಶ್ಯಾರನ್ನ ಕೊಂದ ತಿಂತಾರು.''

ಅಹಮ್ಮದಗೆ ಏನು ಹೇಳಬೇಕೋ ತಿಳಿಯದಾಯಿತು. ಈ ಪುಟ್ಟ ಮಗುವಿನ ಮನದಲ್ಲಿ ಈ ನಂಜು ತುಂಬಿದವರಾರು ? ಮುಸಲ್ಮಾನರೂ ಮನುಷ್ಯರೇ ಅಂತ ಅವನಿಗೆ ಹೇಳೋದು ಹೇಗೆ! ಮನುಷ್ಯರಲ್ಲಿರುವ ಒಳಿತು-ಕೆಡಕು ಅವರಲ್ಲೂ ಇದೆ. ಆದರೆ ಬರೇ ಮುಸಲ್ಮಾನರಾಗಿದ್ದಕ್ಕೆ ಮಾತ್ರ ಅವರು ಕೆಟ್ಟವರಾಗೋದಿಲ್ಲ...

ಅಹಮ್ಮದ ಆಗ ಎಷ್ಟು ವ್ಯಾಕುಲಗೊಂಡಿದ್ದ ನೆಂದರೆ ಅವನಿಗೆ ಏನೂ ಹೇಳುವದಾಗಿರಲಿಲ್ಲ.

ನಾಲ್ಕೂ ಕಡೆಯಿಂದ ಸುತ್ತುಗಟ್ಟಿದ ಹತಬಲ ಮನುಷ್ಯನಂತಹ ಸ್ಥಿತಿಯಾಗಿತ್ತು ಅವನದು. ಸುತ್ತೆಲ್ಲ ಏನೋ ಕೆಟ್ಟದ್ದು, ನಂಜಿನಂತಹದು ಬಿತ್ತಲಾಗುತ್ತಿತ್ತು. ಅವನಿಗದನ್ನು ಪ್ರತಿಬಂಧಿಸುವುದು ಸಾಧ್ಯವಿರಲಿಲ್ಲ. ಅವನದೊಂದು ಸಾದಾ ಬೇಡಿಕೆಯಿತ್ತು. ಅವನಿಗೆ ಬೇಕಾಗಿದ್ದು ನೇರ ಮಧ್ಯಮ ವರ್ಗದ ಬದುಕು. ಮುಸಲ್ಮಾನರ ಮೊಹಲ್ಲಾಕ್ಕೆ ಹೋಗಲು ಅವನು ಸಿದ್ಧನಿರಲಿಲ್ಲ, ಯಾಕೆಂದರೆ ಅಲ್ಲಿಯ ದಾರಿದ್ರ್ಯ, ಗುಂಡಾಗಿರಿ, ಕ್ರಿಮಿಯಂತೆ ಒದ್ದಾಡುವದು ಅವನಿಗೆ ಬೇಕಾಗಿರಲಿಲ್ಲ. ಹಿಂದೂಗಳಲ್ಲೂ ಹೊಲಸು ವಸತಿ ಇಲ್ಲವೆಂದಲ್ಲ. ಅಲ್ಲಿ ಇರುವುದೂ ಬೇಡವೆನಿಸಿತ್ತು. ಬಡತನದ ಬದುಕಿಗೆ ರೋಸಿದ್ದನೆಂದೂ ಅಲ್ಲ. ಸರಿಯಾಗಿ ಸಭ್ಯತನದಿಂದ ಬದುಕಬೇಕೆನ್ನುವದು ಅವನ ಬೇಡಿಕೆಯಾಗಿತ್ತು. ಅವನಿಗೆ ಯಾವ ಧರ್ಮವಾಗಲಿ, ಆಗ್ರಹವಾಗಲಿ ಬೇಕಿರಲಿಲ್ಲ. ಅದೆಲ್ಲ ತುಂಬಾ ಸುಲಭವಾಗಿತ್ತು. ಆದರೆ ಮುಸಲ್ಮಾನನಾಗಿ ಜನಿಸಿದ್ದರಿಂದ ಸ್ವಲ್ಪ ಗೊಂದಲವಾಗಿತ್ತು. ಈ ವ್ಯವಸ್ಥೆಯಲ್ಲಿ ಅವನಿಗೆ ಅಡಚಣೆ ನಿರ್ಮಾಣವಾಗಿತ್ತು. ಅವನು ಮುಸ್ಲಿಂ ವಸತಿಗೆ ಹೋದರೆ ಈ ಎಲ್ಲ ಪ್ರಶ್ನೆ ಬಗೆಹರಿಯುತ್ತಿತ್ತು. ಸುರಕ್ಷಿತತೆ ಸಿಗುತ್ತಿತ್ತು. ಅವನ ಜಮಾತಿಯ ಜನ ಸುತ್ತಲೂ ಇರುತ್ತಿದ್ದರು. ಇದನ್ನೇ ಅವನು ಹಲವು ದಿನಗಳಿಂದ ತಪ್ಪಿಸುತ್ತ ಬಂದಿದ್ದ.

ಮನೆಗೆ ಹೋದ ಬಳಿಕ ಮಗಳಿಗೆ ಸ್ವತಃ ತಿನ್ನಿಸಿದ. ಅವನು ಕಾಲೇಜಿಗೆ ಹೋಗದಿರುವ, ಶಾಲೆಗೆ ಹೋದ, ನಡೆದ ಯಾವ ಸಂಗತಿಯನ್ನೂ ಬೀಬಿಗೆ ಹೇಳಲಿಲ್ಲ. ಅವನು ಮಗಳೊಂದಿಗೆ ಆಡುತ್ತ ಮನಸ್ಸು ಸಮಾಧಾನ ಮಾಡಿಕೊಳ್ಳುತ್ತಿದ್ದ. ಮಂಚದ ಕೆಳಗೆ ಅವನ ಲಕ್ಷ್ಯ ಹೋಗಿ ಅಲ್ಲೊಂದು ಪುಡಿಕೆ ಕಾಣಿಸಿತು.

''ಇದೇನಿದು ?'' ಹೆಂಡತಿಗೆ ಕೇಳಿದ.

''ನಿನ್ನೆ ಒಬ್ಬ ಮನುಷ್ಯ ಬಂದು ಕೊಟ್ಟು ಹೋದ. ನಾನು ಹೇಳೋದನ್ನು ಮರೆತೆ.''

''ಏನಿದೆ ?'' ಅವನು ಪುಡಿಕೆ ಬಿಚ್ಚಿದ. ಅದರಲ್ಲಿ ಸೀರೆ, ಮಕ್ಕಳಿಗೆ ಫ್ರಾಕು, ಪ್ಯಾಂಟ್ ಶರ್ಟ್ ಬಟ್ಟೆಯಿತ್ತು. ''ಯಾರು ಕೊಟ್ಟರು ?''

''ಹೆಸರು ಹೇಳಲಿಲ್ಲ, ಬಂದು ಕೊಟ್ಟು ಹೋದ.'' ಅವಳು ಸೀರೆಯನ್ನು ಸಂತೋಷದಿಂದ ನೋಡಿದಳು.

''ಯಾರಿರಬಹುದು ?'' ಅಹಮ್ಮದ ಸ್ವಂತಕ್ಕೆ ಕೇಳಿಕೊಂಡ.

''ಚಹಾ-ಬೀಹಾ ಕೊಟ್ಟೆ ಇಲ್ಲೋ ?'' ಹೆಂಡತಿಗೆ ಕೇಳಿದ.

''ಹೇಗೆ ಕೇಳಲಿ ? ಇದನ್ನು ಕೈಲಿಟ್ಟ, ಮಾಸ್ತರಜಿಗೆ ಸಲಾಮ್ ಹೇಳಿ ಅಂದ. ಮಾಯವಾದ.''

ಮಾಸ್ತರಜಿ! ಅಂದರೆ ಇಕ್ರಮನೇ ಇರಬೇಕು! ಅಹಮ್ಮದನ ಗಮನಕ್ಕೆ ಬಂತು.

ಸೆರೆಮನೆಯ ಪರಿಚಯ. ಅವನಿಗಂತೂ ಯಾರೂ ಇಲ್ಲ. ನಿರ್ಗತಿಕ, ಬೇವಾರಸ. ಗುನ್ಹೇಗಾರಿಕೆಯನ್ನು ಸಹಜ ಸ್ವೀಕರಿಸಿದ್ದ. ಜಾತಿ ಯಾರಿಗೆ ಬೆಲೆ ನೀಡುತ್ತದೇ ಅವನೇ ದೊಡ್ಡವನು. ಜಾತಿಗಾಗಿ ಹೊಡೆದಾಟ - ಬಡಿದಾಟ ಮಾಡಿದರೇನು ತಪ್ಪು ಎಂದು ಸೀದಾ ಸಾದಾ ತತ್ತ್ವಜ್ಞಾನ ಇಕ್ರಮನದು ! ಆ ದಿನ ಆ ಗುಮಾಸ್ತ ಎಷ್ಟು ಹೆದರಿದ್ದ! ಈಗ ಅದೇ ಇಕ್ರಮ ತನಗೆ...

ಅಹಮ್ಮದ್ ಹೃದಯ ತುಂಬಿ ಬಂತು.

''ಅವನು ನನ್ನ ದೋಸ್ತ! ಇಕ್ರಮ ಅವನ ಹೆಸರು...'' ಅವನು ಇಕ್ರಮನ ಬಗೆಗೆ, ಅವನ ಬದುಕಿನ ಬಗೆಗೆ ಮನದುಂಬಿ ಹೆಂಡತಿಗೆ ಹೇಳಿದ. ಆಕೆ ಅವನ ಮುಖ ನೋಡಲಾರಂಭಿಸಿದಳು. ಎಂದೂ ಮನದುಂಬಿ ತನ್ನ ಜೊತೆ ಮಾತಾಡದ ಗಂಡ, ಈಗ ಇಕ್ರಮನೆಂಬ ಮನುಷ್ಯನ ಬಗೆಗೆ ಮಾತಾಡುತ್ತಿದ್ದಾನೆ, ನಿಮಿತ್ತ ಏನೇ ಇರಲಿ ಮಾತಾಡಿದನಲ್ಲ ಎಂಬುದೇ ಬೆರಗಿನ ವಿಷಯ.

- ೮ -

ಸಂಜೆ ಕತ್ತಲಾದ ಬಳಿಕ ಕೆಲ ಜನ ಅವನ ಮನೆಗೆ ಬಂದರು. ಮೊದಲು ಇಕ್ರಾಮನ ಜನರಿರಬೇಕೆಂದೆನಿಸಿತು. ಯಾರೋ ಅಲೀಸಾಹೇಬ ಹಾನಿ ತುಂಬಿ ಕೊಡುವವನಿದ್ದ. ಅವರೇ ಕರೆದೊಯ್ಯಲು ಬಂದಿರಬೇಕು. ಇಕ್ರಮನಿಗಾಗಿ ಹೋದರಾಯಿತು ಎಂದುಕೊಂಡ.

ಆದರೆ ಕೆಲಕ್ಷಣದಲ್ಲಿ ತನ್ನ ಅಂದಾಜು ತಪ್ಪಿದ್ದು ಗೊತ್ತಾಯಿತು. ಆ ಜನ ಮುಸ್ಲಿಂ ವಸತಿಯ ಗುಂಡಾಗಳಂತೆ ಕಾಣುತ್ತಿದ್ದರೂ ಅಲ್ಲಿಯವರಾಗಿರಲಿಲ್ಲ. ಕೆಲ ಪರಿಚಿತರೂ ಇದ್ದರು. ತನ್ನ ನೆರೆ - ಹೊರೆಯ ಪರಿಚಿತ ಜನ.

''ಬರ್ರಿ, ಬರ್ರಿ'' ವಿನಯದಿಂದ ಸ್ವಾಗತಿಸಿದ.

ಬಡತನದೊಂದಿಗೆ ಹೋರಾಡುವ ಮನುಷ್ಯರ ಎಲ್ಲ ಲಕ್ಷಣ ಅವರ ದೇಹ, ಮುಖದ ಮೇಲೆ ಗೋಚರಿಸುತ್ತಿತ್ತು. ಕೆಂಪು ಕಣ್ಣು, ಅಸಡ್ಡಾಳವಾಗಿ ಬೆಳೆದ ಕೂದಲು, ರಾವು ಮುಖ, ಬಣ್ಣ ಬಣ್ಣದ ಬಟ್ಟೆ – ಇಂಥ ಎಲ್ಲರೂ ಗುಂಡಾಗಳೇ ಆಗಿರುತ್ತಾರೇನು ? ನಾವು ಅವರನ್ನು ಗುಂಡಾಗಳು ಎಂದುಕೊಳ್ಳುತ್ತೇವೆ. ಇದು ತಪ್ಪು. ನಿಜವಾದ ಗುಂಡಾಗಳೆಂದರೆ ಶ್ರೀಮಂತರು. ತುಪ್ಪದ ಮುಖದ ಹಿಂದೂಗಳು ಮತ್ತು ಹವೇಲಿಯ ಬಿಳಿ ಮುಸಲ್ಮಾನರು. ನಾವು ಸುಮ್ಮನೆ ಬಡವರನ್ನು ಶತ್ರುಗಳು ಎಂದುಕೊಳ್ಳುತ್ತೇವೆ. ನಾವೂ ಬಡವರೇ, ಈ ಜನ ತಮಗಿಂತ ಸ್ವಲ್ಪ ಹೆಚ್ಚು ಬಡವರು. ತಾನು ಸ್ವಲ್ಪ ಕಲಿತೆ. ಅವರು ಹೆಚ್ಚು ಕಡಿಮೆ ಏನೂ ಕಲಿಯದವರು. ಅವರೇನು ನಮ್ಮ ಶತ್ರುಗಳಲ್ಲ. ಬದುಕಲು ಅವರು ಹೆಚ್ಚು ಸೆಣಸಾಡಬೇಕಾಗುತ್ತದೆ. ಜನ ಅವರತ್ತ ವಿಕೃತ ದೃಷ್ಟಿ ಬೀರುತ್ತಾರೆ.

ಆ ಗಲ್ಲಿಯ ಒಬ್ಬ ಸಂಭಾವಿತ ಮನುಷ್ಯ ಹೇಳಿದ : ''ಅಹಮ್ಮದ್ ಭಾಯಿ, ನಾವು ಬಂದದ್ದೇಕೆಂದರೆ, ನೀವು ಈ ಜಾಗ ಬಿಟ್ಟು ಹೋಗಬೇಕಂತ ಹೇಳಾಕ ಬಂದ್ವಿ.'' ಅಹಮ್ಮದನಿಗೆ ಆಘಾತವಾಯಿತು. ''ಯಾಕೆ ? ಏನಾಯ್ತು ? ನನ್ನದೇನಾದರು ತಪ್ಪಾತೇನು ?''

''ಇಲ್ಲ, ತಪ್ಪೇನಿಲ್ಲ ನೀವು ಇಲ್ಲಿಂದ ಹೋಗಬೇಕ ಅಷ್ಟೆ'' ಅವನು ಹೇಳಿದ.

''ಯಾವಾಗೂ ದಂಗೆ ಆಗಬೌದು, ಮುಸಲ್ಮಾರ ಮನೀ ನಿಮ್ದೊಂದ. ನಾವೂ ಇಲ್ಲಿ ಇರತ್ತೀವಿ ಅಂತ ಹೇಳಾಕ ಬರೋದಿಲ್ಲ.''

''ಆದರ ನಂದೇನೂ ತಕರಾರಿಲ್ಲ. ನಾನೇನಾರೂ ಹೇಳಿದ್ದೇನು ?'' ಅಹಮ್ಮದ ಕಕ್ಕುಲತೆಯಿಂದ ಹೇಳಿದ.

''ನೀವ್ ತಕರಾರ ಮಾಡೋ ಸವಾಲ ಇಲ್ಲ'' ಒಬ್ಬ ತರುಣ ಹೇಳಿದ. ಅವನ ಧ್ವನಿ ಭಿನ್ನವಾಗಿತ್ತು. ರಾವು, ಆಕ್ರಮಕ, ಕಾಲು ಕೆದರಿ ಜಗಳ ಮಾಡುವ – ಎಲ್ಲ ಅಲ್ಲಿತ್ತು. ಅವನು ತೀರಾ ಶಾಂತವಾಗಿ ಹೇಳಿದ. ಆದರದು ಮನಸ್ಸಿಗೆ ತುಂಬಾ ನಾಟಿತು.

''ನೀವ್ ಜಾಗ ಖಾಲಿ ಮಾಡರಿ ಸಾಕು'' ಮತ್ತೊಬ್ಬ ಹೇಳಿದ.

''ಆದರ...''

''ಎಂಟ ದಿನದಾಗ ಜಾಗ ಖಾಲಿ ಮಾಡಿರಿ. ನಿಮ್ಮ ಮೊಹಲ್ಲಾದಾಗ ಬೇಕಾದಷ್ಟು ಜಾಗ ಅದ. ನಾವಿದನ್ನ ಸರಳ ಹೇಳಾಕ ಹತ್ತೇವಿ. ನಾಳೆ ಏನಾರ ಹೆಚ್ಚು - ಕಡ್ಮಿ ಆದರ ನಾವೇನು ಜವಾಬ್ದಾರರಲ್ಲ.''



ಆ ಜನ ಅವನ ಮನೆ ಬಾಗಿಲಿಂದ ಹೊರಬಿದ್ದರು. ಅಹಮ್ಮದ್ ಹೊಸ್ತಿಲಿಗೆ ಬಂದು ನಿಂತ. ಅವನ ಹೆಂಡತಿ ಖುರ್ಶಿದನನ್ನು ಸೊಂಟದ ಮೇಲೆ ಹೊತ್ತುಕೊಂಡು ಅವನ ಬೆನ್ನಿಗೆ ಬಂದು ನಿಂತಳು.

ಅಹಮ್ಮದ್ ಬೆದರಿದ ಹರಿಣಿಯಂತೆ ಹೋಗುತ್ತಿರುವ ಜನರತ್ತ ನೋಡತೊಡಗಿದ !

---

**ಅನು : ಚಂದ್ರಕಾಂತ ಪೋಕಳೆ**
ಕನ್ನಡ ಉಪನ್ಯಾಸಕರು, ಬಿ. ಎಸ್.ಪಿ.ಯು. ಕಾಲೇಜು
ಬೇಡಕಿಹಾಳ - ೫೯೧ ೨೧೪ (ಬೆಳಗಾವಿ ಜಿಲ್ಲೆ)

# ಜಾಗತೀಕರಣ

## ಪರ್ಯಾಯ ಸಾಧ್ಯತೆಗಳು – ಸಾಹಿತ್ಯಕ ಆಯಾಮ

ಜಾಗತೀಕರಣವೆಂದರೆ ಅದು ಜಾಗತಿಕ ಅರ್ಥ ವ್ಯವಸ್ಥೆಯ ಉತ್ಪತ್ತಿಯೆಂದು ಅದರ ಪರವಾಗಿ ವಕಾಲತ್ತು ನಡೆಸುವವರು ಹೇಳುತ್ತಾರೆಯಾದರೂ, ಜಾಗತೀಕರಣವು ಬೆಳೆದುಬಂದ ಕ್ರಮವನ್ನು ನೋಡಿದರೆ ಹಾಗೆ ಹೇಳುವುದು ಕಷ್ಟ. ಜಾಗತೀಕರಣವು ಅದನ್ನು ಪರಿಚಯಿಸಿದ ಬಹುರಾಷ್ಟ್ರೀಯ ಕಂಪೆನಿಗಳು ತಮ್ಮ ಮಾರುಕಟ್ಟೆಯ ವಿಸ್ತರಣೆಗೆ ಮಾಡಿಕೊಂಡ ಒಂದು ಅರ್ಥ ವ್ಯವಸ್ಥೆ ಮಾತ್ರ.

ಶೈಕ್ಷಣಿಕ ವಲಯದ ಬೂರ್ಜ್ವಾ ವರ್ಗದ ಬುದ್ಧಿಜೀವಿಗಳು ಇದಕ್ಕೆ ಹೆಚ್ಚಿನ ಪ್ರಚಾರವನ್ನು ಕೊಟ್ಟರು. ಮಾರ್ಕ್ಸ್‌ವಾದದ ವಿಚಾರಧಾರೆಗೆ ಸಮರ್ಪಕವಾದ ಪರ್ಯಾಯವನ್ನು ಜಾಗತೀಕರಣವು ಕೊಡಬಲ್ಲುದು ಎಂದು ಹೇಳಲಾಯಿತು. ತಂತ್ರಜ್ಞಾನದ ಬದಲಾವಣೆ, ಅಭಿವೃದ್ಧಿಯ ಮೇಲೆ ಕಣ್ಣಿಟ್ಟ ಮೂರನೆಯ ಜಗತ್ತಿನ ಮುಕ್ತ ಪ್ರಕ್ರಿಯೆಗಳು ಜಾಗತೀಕರಣದ ವೇಗಕ್ಕೆ ಕಾರಣವಾದವು. ಹಾಗೆಯೇ ಜಾಗತೀಕರಣವು ಮಾರುಕಟ್ಟೆಯ ಸಮಾಜವಾದವೆಂದು ಪ್ರಚಾರಪಡಿಸಿಕೊಳ್ಳುತ್ತಲೇ ನಿಜವಾದ ಸಮಾಜವಾದಿ ಚಿಂತನೆಯನ್ನು ಹುಡುಕಿತು. ಈ ರೀತಿಯ ಪ್ರಕ್ರಿಯೆಯಲ್ಲಿ ಭಾರತವು ಹೊರತಾಗಿರಲಿಲ್ಲ.

ಜಾಗತೀಕರಣವು ಎರಡು ದೃಷ್ಟಿಯಿಂದ ಸಾಂಸ್ಕೃತಿಕ ವಲಯದ ಮೇಲೆ ಪ್ರಭಾವವನ್ನು ಬೀರುತ್ತದೆ. ಒಂದನೆಯದಾಗಿ, ಜಾಗತಿಕ ಅರ್ಥವ್ಯವಸ್ಥೆಯು ರೂಪುಗೊಳ್ಳುವುದರಿಂದ ರಾಷ್ಟ್ರೀಯ ಸಂಸ್ಕೃತಿಯ ಪ್ರಶ್ನೆಯೇ ಅರ್ಥಹೀನವಾಗುವುದು ಮತ್ತು ಇದರಿಂದಲೇ ಪ್ರಾದೇಶಿಕ ಸಂಸ್ಕೃತಿಯ ನಾಶ ಹಾಗೂ ಇದರಿಂದ ಯಾವುದೇ ಆದರ್ಶವಾದಿ ತಾತ್ವಿಕತೆಯು ರೂಪುಗೊಳ್ಳದೇ ಹೋಗಿಬಿಡಬಹುದು.

**ಡಾ|| ಕೆ. ಕೇಶವ ಶರ್ಮ**

ಜಾಗತೀಕರಣದ ಸಮಸ್ಯೆ ಒಂದು ಕಡೆ, ಕೋಮುವಾದ ಮತ್ತೊಂದು ಕಡೆ ನಮ್ಮನ್ನು ಕಾಡುತ್ತಿರುವ ಪ್ರಮುಖ ಸಮಸ್ಯೆಗಳು. ಜಾಗತೀಕರಣವು ಪ್ರಚಲಿತ ಅರ್ಥಶಾಸ್ತ್ರ ಪರಿಭಾಷೆ. ಕೋಮುವಾದ ಕಲ್ಪಿತ ಧರ್ಮದ ಜೊತೆಗೆ ಅನುಸಂಧಾನ ನಡೆಸುವ ಒಂದು ಭ್ರಮಾತ್ಮಕ ನಂಬಿಕೆ. ಜಾಗತೀಕರಣವೆಂಬ ಅರ್ಥಶಾಸ್ತ್ರದ ಪರಿಭಾಷೆಯ ಪರಿಚಯವನ್ನು ಜಗತ್ತಿಗೆ ಮಾಡಿಕೊಟ್ಟದ್ದು ಕೆಲವೇ ಕೆಲವು ಪ್ರತಿಷ್ಠಿತ ಬಹುರಾಷ್ಟ್ರೀಯ ಕಂಪೆನಿಗಳು. ಜಾಗತೀಕರಣಕ್ಕೆ ಮನುಷ್ಯ ಸಂಬಂಧವು ಮುಖ್ಯವಲ್ಲ, ಲಾಭದ ದುರಾಸೆಯೇ ಹೆಚ್ಚು. ಭಾರತದಲ್ಲಿಯೂ ಕೋಮುವಾದ ವ್ಯವಸ್ಥಿತವಾಗಿ ರೂಪುಗೊಂಡುದಕ್ಕೆ ಅಧಿಕಾರದ ದುರಾಸೆಯೇ ಕಾರಣವಾಗಿದೆ. ಈ ಎರಡೂ ಸಮಸ್ಯೆಗಳು ನಮ್ಮ ಜೀವನ ಕ್ರಮವನ್ನು ಅಸ್ತವ್ಯಸ್ತಗೊಳಿಸಿವೆ ಮತ್ತು ಸಾಮಾಜಿಕ ಸಂಬಂಧಗಳ ಮೇಲೆ ದುಷ್ಪರಿಣಾಮವನ್ನು ಬೀರುತ್ತಿವೆ. ಈ ದೃಷ್ಟಿಯಿಂದ ಜಾಗತೀಕರಣ ಮತ್ತು ಸಾಹಿತ್ಯದ ನಡುವಣ ಸಂಬಂಧದ ವಿವೇಚನೆಯು ಮೂಲಭೂತವಾದ ಸಮಸ್ಯೆಯಿಂದಲೇ ಪ್ರಾರಂಭವಾಗಬೇಕಾಗುತ್ತದೆ. ಜಾಗತೀಕರಣ ಎಲ್ಲಿಂದ ಹೊರಡುತ್ತದೆಯೋ ಅಲ್ಲಿಂದಲೇ ಸಾಹಿತ್ಯಕ ಆಯಾಮಗಳ ಪ್ರಶ್ನೆಗಳು ಪ್ರಾರಂಭವಾಗುತ್ತವೆ. ಕೆಲವು ಪ್ರಮೇಯಗಳು ಕೂಡಾ ಅಲ್ಲಿಂದ ಶುರುವಾಗುತ್ತವೆ. ಸದ್ಯ ನಮಗೆ – ಅಂದರೆ ಜಾಗತೀಕರಣದ ನೇರವಾದ ನೆರಳು ಬೀಳದೆ ಇರುವ ಸಾಹಿತ್ಯದ ವಲಯಕ್ಕೆ – ಅದರ ನಿಜವಾದ ಬಿಸಿಯು ತಟ್ಟಿಲ್ಲ. ಹಾಗೆ ನೋಡುವುದಿದ್ದರೆ, ಯಾವುದೇ ರೀತಿಯ ಆರ್ಥಿಕವಾದ ಬದಲಾವಣೆಯು ಸಾಹಿತ್ಯದ ಮೇಲೆ ನೇರವಾದ ಯಾವ ಪ್ರಭಾವವನ್ನೂ ಬೀರುವುದಿಲ್ಲ. ಆರ್ಥಿಕ ಸಂರಚನೆಯ ಬದಲಾವಣೆ ಮತ್ತು ಸಾಹಿತ್ಯದ ರೂಪ, ಆಶಯ, ಬರವಣಿಗೆಯ ಕ್ರಮದ ನಡುವಣ ಸಂಬಂಧ ಯಾವಾಗಲೂ ದ್ವಂದ್ವಾತ್ಮಕವಾದುದು. ಹಾಗಾಗಿ ಅದು ಸರಳೀಕರಣಗೊಳಿಸುವ ಪ್ರಕ್ರಿಯೆಯಲ್ಲ. ಲೇಖಕನೊಬ್ಬನ ಆಲೋಚನಾ ಕ್ರಮವು ಸಾಮಾಜಿಕ, ಆರ್ಥಿಕ ಬದಲಾವಣೆಗೆ ಅನುಸಾರ ಬೇರೆಯಾಗುತ್ತದೆ ಮತ್ತು ಅದರ ಪರಿಣಾಮವಾಗಿ ರೂಪ, ಅದರ ವಿಧಿ ವಿಧಾನಗಳು ಬದಲಾಗುತ್ತವೆ. ಈ ಕಾರಣದಿಂದ ತಕ್ಷಣವೇ ಬರಹಗಾರರ ಬರಹವನ್ನು ಒಂದು ಹಿಡಿಯಲ್ಲಿ ಹಿಡಿದುಕೊಂಡು ಅದಕ್ಕೂ ಸಮಾಜಕ್ಕೂ ಒಂದು ನಿರ್ಣಾಯಕವಾದ ಸಂಬಂಧವಿದೆಯೆಂದು ಹೇಳುವುದು ಕಷ್ಟ. ಇರಲಿ.

ಜಾಗತೀಕರಣವೆಂದರೆ ಅದು ಜಾಗತಿಕ ಅರ್ಥ ವ್ಯವಸ್ಥೆಯ ಉತ್ಪತ್ತಿಯೆಂದು ಅದರ ಪರವಾಗಿ ವಕಾಲತ್ತು ನಡೆಸುವವರು ಹೇಳುತ್ತಾರೆಯಾದರೂ, ಜಾಗತೀಕರಣವು ಬೆಳೆದುಬಂದ ಕ್ರಮವನ್ನು ನೋಡಿದರೆ ಹಾಗೆ ಹೇಳುವುದು ಕಷ್ಟ. ಜಾಗತೀಕರಣವನ್ನು ಪರಿಚಯಿಸಿದ ಬಹುರಾಷ್ಟ್ರೀಯ ಕಂಪೆನಿಗಳು ತಮ್ಮ ಮಾರುಕಟ್ಟೆಯ ವಿಸ್ತರಣೆಗೆ ಮಾಡಿಕೊಂಡ ಒಂದು ಅರ್ಥವ್ಯವಸ್ಥೆ ಮಾತ್ರ. ಜಾಗತಿಕ ಅರ್ಥವ್ಯವಸ್ಥೆಯ ಉತ್ಪತ್ತಿಯೆಂದು ಅದನ್ನು ಕರೆಯಲಾಗಿದ್ದರೂ, ಆ ಜಾಗತಿಕ ಅರ್ಥವ್ಯವಸ್ಥೆಯೆಂಬ ವ್ಯಾಖ್ಯೆಯಲ್ಲಿ ಯಾವ ದೇಶಗಳು ಇವೆಯೆಂದು ಕೇಳಬೇಕಾಗುತ್ತದೆ. ಜಗತ್ತು ಎಂದರೆ ಆರ್ಥಿಕವಾಗಿ ಅಭಿವೃದ್ಧಿ ಹೊಂದಿದ ದೇಶಗಳು ಮಾತ್ರ ಇವೆಯೆಂದು ತಿಳಿದುಕೊಳ್ಳುವುದು ಕಷ್ಟ.

೧೯೬೦ರ ದಶಕದ ಕೊನೆಯ ಭಾಗದಲ್ಲಿ ಮತ್ತು ೧೯೭೦ರ ದಶಕದ ಮೊದಲ ಭಾಗದಲ್ಲಿ ಈ ಜಾಗತೀಕರಣವೆಂಬ ಪದವು ಹೆಚ್ಚು ಚಾಲ್ತಿಗೆ ಬಂತು. ಬಹುರಾಷ್ಟ್ರೀಯ ಕಂಪೆನಿಗಳು ತಮ್ಮ ವ್ಯಾಪಾರದ ಉದ್ದೇಶಕ್ಕಾಗಿ, ಯಾವುದೇ ಸೀಮಿತವಾದ ಗಡಿರೇಖೆಗಳು ಇರಬಾರದೆಂಬ ಕಾರಣಕ್ಕಾಗಿ ಈ ಜಾಗತೀಕರಣವನ್ನು ಚಾಲ್ತಿಗೆ ತಂದವು. ಮತ್ತು ಜಾಗತೀಕರಣವೆಂಬ ಆಕರ್ಷಕ ಪದವನ್ನು ಚಲಾವಣೆಗೆ ತಂದಾಗ ಅದಕ್ಕೆ ಹಿನ್ನೆಲೆಯಾಗಿ ಅಂತರರಾಷ್ಟ್ರೀಯ ಶ್ರಮವಿಭಜನೆಯ ಪ್ರಶ್ನೆಯನ್ನು ಕೂಡಾ ಚಾಲ್ತಿಗೆ ತರಲಾಯಿತು. ಶ್ರಮವಿಭಜನೆಯೆನ್ನುವುದು ಆಯಾ ದೇಶದ ಒಳಗಡೆಗೆ ತರುವುದರಿಂದ 'ಉತ್ಪಾದನೆ' ಮತ್ತು 'ಅದರ ಹಂಚುವಿಕೆ'ಯಲ್ಲಿ ಒಂದು ತಾರತಮ್ಯವಿದೆ. ಅಂತರರಾಷ್ಟ್ರೀಯ ಶ್ರಮವಿಭಜನೆಯಿಂದ ಈ ತಾರತಮ್ಯಗಳನ್ನು ಹೋಗಲಾಡಿಸಬಹುದು ಎಂದು ಪ್ರಚಾರಗೊಳಿಸಲಾಯಿತು. ಇಂತಹ ಅಂತರರಾಷ್ಟ್ರೀಯ ಶ್ರಮ ವಿಭಜನೆಯ ಪರಿಕಲ್ಪನೆಯಲ್ಲಿ ಮೂರು ರೀತಿಯ ಸಂಬಂಧಗಳಿವೆಯೆಂದು ಜೇಮ್ಸ್ ಪೆಟ್ರಾಸ್ ಅವರು ಹೇಳುತ್ತಾರೆ (ಜೇಮ್ಸ್ ಪೆಟ್ರಾಸ್ (ಮೂಲ.) ಪುಟ್ಟು ಪಿ. ಕುಲಕರ್ಣಿ (ಅನು) ೧೯೯೯, ಪು. ೧).

೧. ಸಾಮ್ರಾಜ್ಯಶಾಹಿ ವ್ಯವಸ್ಥೆಯಿಂದ ನಿರ್ದೇಶಿಸಲ್ಪಟ್ಟ ವಸಾಹತು ದೇಶಗಳು ಅಥವಾ ಅವಲಂಬಿತ ದೇಶಗಳ ವಿನಿಮಯಗಳು.
೨. ಪ್ರಬಲ ಶಕ್ತಿಗಳ ಮಧ್ಯದ (ಅಂತರ) ಸಾಮ್ರಾಜ್ಯಶಾಹಿ ವಿನಿಮಯ.
೩. ಸಾಮ್ರಾಜ್ಯಶಾಹಿಗಳಲ್ಲಿ (ಇತರೇ) ದೇಶ ಹಾಗೂ ವರ್ಗದ ಮಧ್ಯದಲ್ಲಿ 'ಪರಸ್ಪರ ಆಶ್ರಿತ' ವಿನಿಮಯ.

ಈ ತರಹದ ಪ್ರಕ್ರಿಯೆಯಿಂದ ಬಂಡವಾಳಶಾಹಿ ಹಾಗೂ ಸಾಮ್ರಾಜ್ಯಶಾಹಿ ರಾಷ್ಟ್ರಗಳಿಗೆ ತುಂಬಾ ಅನುಕೂಲವಾಗುತ್ತದೆ. ಬೇರೊಂದು ಮಾತಿನಲ್ಲಿ ಹೇಳಬೇಕೆಂದರೆ 'ಜಾಗತೀಕರಣ'ವೆಂಬುದನ್ನು ಕೆಲವೇ ಸ್ಥಾಪಿತ ಹಿತಾಸಕ್ತಿಗಳು ತಮಗೆ ಬೇಕಾದಂತೆ ನಿರ್ವಚಿಸಿಕೊಂಡವು. ಜಾಗತೀಕರಣವೆನ್ನುವುದು ಹೆಸರೇ ಸೂಚಿಸುವಂತೆ, ಇಡಿಯ ಜಗತ್ತನ್ನು ಒಂದೇ ಮಾರುಕಟ್ಟೆಯ ವಲಯಕ್ಕೆ ತರುವ ಪ್ರಕ್ರಿಯೆ. 'ವಿಶ್ವಮಾರುಕಟ್ಟೆಯ ವ್ಯವಸ್ಥಿತ ಮುಕ್ತ ಬಳಕೆ' ಹಾಗೂ ಅದರಿಂದ ಬರುವ ಲಾಭವನ್ನು ಜಗತ್ತಿನಾದ್ಯಂತ ವಿತರಿಸುವುದು ಎಂಬ ಆಶಯದಲ್ಲಿ ಜಾಗತೀಕರಣವು ಉಗಮವಾದುದನ್ನು ಕಾಣುತ್ತೇವೆ. (ಜೇಮ್ಸ್ ಪೆಟ್ರಾಸ್. ಅದೇ. ಪು. ೪).

ಜಾಗತೀಕರಣದ ಪ್ರಕ್ರಿಯೆಯು ಪ್ರಾರಂಭವಾಗಿದ್ದು ೧೯೬೦ರ ದಶಕದ ಕೊನೆಯ ಭಾಗ ಹಾಗೂ ೧೯೭೦ರ ಮೊದಲ ಭಾಗದಲ್ಲಿ. ಈ ಜಾಗತೀಕರಣ ಬಹಳ ಬೇಗನೆ ಪ್ರಚಲಿತವಾಯಿತು. ಈ ಶಬ್ದವನ್ನು ಜೀವನದ ಪ್ರಧಾನ ವಾಹಿನಿಯಾದ ಶೈಕ್ಷಣಿಕ ವಲಯವೂ ಸ್ವೀಕರಿಸಿದ್ದರಿಂದ, ಕ್ರಮೇಣ ಈ ಶಬ್ದ ಸರ್ವಗ್ರಾಹ್ಯವಾಗಿ ಪರಿವರ್ತನೆಗೊಂಡಿತು. ಅಂತರರಾಷ್ಟ್ರೀಯ ಮಾರುಕಟ್ಟೆಯ ಹಣಕಾಸು ವಿಸ್ತರಣೆಯ ಕುರಿತು ಮಾತಾಡುವಾಗಲೆಲ್ಲಾ ಪದವು

ಬಳಕೆಗೊಳ್ಳತೊಡಗಿತು. ಈ ಪದದ ಮೂಲ ಹಾಗೂ ಶೋಷಣೆಯಲ್ಲಿ ಪರ್ಯವಸಾನಗೊಳ್ಳುವ ಇದರ ಫಲಿತಾಂಶಗಳು ಮತ್ತು ಅಧಿಕಾರವೇ ಅಧಿಕತಮ ಬಲವಾಗಿರುವ ಕ್ರಿಯೆಯ ಅಂಶಗಳನ್ನೆಲ್ಲ ಬೇಕೆಂದೇ ವ್ಯವಸ್ಥಿತವಾಗಿ ಅದುಮಿಡಲಾಯಿತು. (ಅದೇ. ಪು. ೫).

ಅನಂತರ ಶೈಕ್ಷಣಿಕ ವಲಯದ ಬೂರ್ಜ್ವಾ ವರ್ಗದ ಬುದ್ಧಿಜೀವಿಗಳು ಇದಕ್ಕೆ ಹೆಚ್ಚಿನ ಪ್ರಚಾರವನ್ನು ಕೊಟ್ಟರು. ಮಾರ್ಕ್ಸ್‌ವಾದದ ವಿಚಾರಧಾರೆಗೆ ಸಮರ್ಪಕವಾದ ಪರ್ಯಾಯವನ್ನು ಜಾಗತೀಕರಣವು ಕೊಡಬಲ್ಲುದು ಎಂದು ಹೇಳಲಾಯಿತು. ತಂತ್ರಜ್ಞಾನದ ಬದಲಾವಣೆ, ಅಭಿವೃದ್ಧಿಯ ಮೇಲೆ ಕಣ್ಣಿಟ್ಟ ಮೂರನೆಯ ಜಗತ್ತಿನ ಮುಕ್ತ ಪ್ರಕ್ರಿಯೆಯು ಜಾಗತೀಕರಣದ ವೇಗಕ್ಕೆ ಕಾರಣವಾದವು. ಹಾಗೆಯೇ ಜಾಗತೀಕರಣವು ಮಾರುಕಟ್ಟೆಯ ಸಮಾಜವಾದವೆಂದು ಪ್ರಚಾರಪಡಿಸಿಕೊಳ್ಳುತ್ತಲೇ ನಿಜವಾದ ಸಮಾಜವಾದಿ ಚಿಂತನೆಯನ್ನು ಹುಡುಕಿತು. ಈ ರೀತಿಯ ಪ್ರಕ್ರಿಯೆಯಲ್ಲಿ ಭಾರತವು ಹೊರತಾಗಿರಲಿಲ್ಲ, ಭಾರತದಲ್ಲಿಯೂ ಈ ಜಾಗತೀಕರಣಕ್ಕೆ ಮುಕ್ತವಾಗಿ ಬಾಗಿಲು ತೆರೆದು ಸ್ವಾಗತಿಸಲಾಯಿತು. ಭಾರತದಲ್ಲಿ ಈ ಜಾಗತೀಕರಣಕ್ಕೆ ಮುಕ್ತ ಅವಕಾಶವನ್ನು ನೀಡುವ ಮೊದಲೇ ನಮ್ಮಲ್ಲಿ ಕೆಲವು ರೀತಿಯ ಚರ್ಚೆಗಳು ಪ್ರಾರಂಭವಾದುದನ್ನು ಗಮನಿಸಬೇಕು. ಫೋರ್ಡ್ ಫೌಂಡೇಶನ್ ಕುರಿತು ಕರ್ನಾಟಕದಲ್ಲಿಯೇ ಅನೇಕ ಬುದ್ಧಿಜೀವಿಗಳು ವಿರೋಧಿಸಿದ್ದರು. ಹಾಗೂ ಫೋರ್ಡ್ ಫೌಂಡೇಶನ್ ಸಹಾಯವನ್ನು ಭಾರತದ ಸರ್ಕಾರೇತರ ಸಂಸ್ಥೆಗಳು ತೆಗೆದುಕೊಂಡಿರುವುದೂ ಅಷ್ಟೇ ಸತ್ಯ. ಭಾರತದಲ್ಲಿಯೂ 'ಮುಕ್ತ ಮಾರುಕಟ್ಟೆ', ರಾಜನಿಕ ಹೊಂದಾಣಿಕೆ, ಮುಂತಾದವುಗಳನ್ನು ಆಕರ್ಷಕವಾಗಿ ಬಳಸಿಕೊಳ್ಳಲಾಯಿತು. ಇದನ್ನು ವಿರೋಧಿಸಿದ್ದು ಕಮ್ಯುನಿಸ್ಟ್ ಪಕ್ಷಗಳು : ಕರ್ನಾಟಕದಲ್ಲಿ ರೈತ ಸಂಘದವರು. ವಾಸ್ತವವಾಗಿ, ಇವರು ಪ್ರಖರವಾಗಿ ಖಂಡಿಸಿದ್ದರು ಎಂದು ನೆನಪು. ಇಲ್ಲಿಯೂ ಭಾರತವು ಅಭಿವೃದ್ಧಿಯ ಕಡೆಗೆ ಹೋಗಬೇಕಾದರೆ ಈ ಮಾದರಿಯ ಮುಕ್ತ ಮಾರುಕಟ್ಟೆ ಅತ್ಯಗತ್ಯವೆಂದು ಅತಿಯಾಗಿ ವರ್ಣಿಸಲಾಯಿತು. ವಸಾಹತೋತ್ತರ ಸಾಮಾಜಿಕ ಸಂದರ್ಭದಲ್ಲಿ ಬಂದ ಈ ಜಾಗತೀಕರಣ ಪ್ರಕ್ರಿಯೆಯು ತನ್ನ ಗರ್ಭದಲ್ಲಿ ಮಾರುಕಟ್ಟೆ ಸಮಾಜವಾದದ ಹೆಸರನ್ನು ಇಟ್ಟುಕೊಂಡು ನಿಜವಾದ ಸಮಾಜವಾದದ ನೀತಿಗೆ ದ್ರೋಹವನ್ನು ಬಗೆದಿದೆ. ಈ ಮಾದರಿಯೊಂದಿಗೆ 'ಜಾಗತಿಕ ಜ್ಞಾನ ಪರಂಪರೆ'ಯೆಂಬ ವಿಚಾರಧಾರೆಯನ್ನು ಹರಿಯಬಿಟ್ಟಿದೆ. ಇದರ ಪರಿಣಾಮವೆಂದರೆ 'ದೇಶೀಯ ಜ್ಞಾನ ಪರಂಪರೆ'ಯೊಂದರ ನಾಶ. ಒಂದು ಸಮಾಜದ ಮೇಲೆ ಈ ಮಾದರಿಯ ಜ್ಞಾನ ಪರಂಪರೆಯನ್ನು ಹೇರುವುದರ ಮೂಲಕ ಸಮಾಜದ ಜೀವನಾಡಿಯನ್ನೇ ಸುಲಭವಾಗಿ ಕತ್ತರಿಸಿಬಿಡಬಹುದು ಮತ್ತು ಆ ಮೂಲಕ 'ರಾಜಕೀಯ'ವನ್ನೇ ನಂಬದಿರುವ ಅರಾಜಕತಾವಾದಿಗಳನ್ನು ಸುಲಭವಾಗಿ ಹುಟ್ಟುಹಾಕಿಬಿಡಬಹುದು. ಒಂದು ದೇಶಕ್ಕಿರುವ ಅಧಿಕಾರದ ಕೇಂದ್ರಗಳನ್ನು ಒಡೆದು ಛಿದ್ರಗೊಳಿಸಿಬಿಡಬಹುದು. ಉದಾರೀಕರಣದಿಂದ ಆಗಬಹುದಾದ ಪ್ರಮುಖ ಪರಿಣಾಮಗಳಲ್ಲಿ ಇದೂ ಒಂದು. ಇದರರ್ಥ ಉದಾರೀಕರಣದ ಎದುರುಗಡೆಗೆ ಪರ್ಯಾಯವಾಗಿ ದೇಶೀಯತೆ ಎಂಬುದನ್ನು ಎತ್ತಿಹಿಡಿಯಬೇಕೆಂಬುದಲ್ಲ. ದೇಶೀಯ ಜ್ಞಾನದ ಪುನರ್ ರೂಪೀಕರಣದ ಉತ್ಸಾಹದಲ್ಲಿ (ಅನೇಕ ಸಂದರ್ಭದಲ್ಲಿ ಆಗಿರುವಂತೆ) ದೇಶೀ ಜ್ಞಾನವು ಬಹಳ ದೊಡ್ಡದೆಂದು : ಅದನ್ನು ಭಾರತದ ಅಂತಃಶಕ್ತಿಯೆಂದು ಕರೆಯುವ ಅಪಾಯಗಳಿವೆ. ದೇಶೀಯತೆಯು ಒಂದು ನಿರ್ದಿಷ್ಟ ಪ್ರಮಾಣದ ಬಹುದೊಡ್ಡ ಆದರ್ಶವೆಂದು ನಾವು ತಿಳಿಯಬೇಕಿಲ್ಲ, ಬೇರೊಂದು ಮಾತಿನಲ್ಲಿ ಹೇಳುವುದಿದ್ದರೆ ''ದೇಶೀಯ'' ಅನ್ನುವುದು ಬಹಳ ಸುಲಭವಾಗಿ ಪರಿಗಣನೆಗೆ ಬೇಕಾದ ವಸ್ತುವಲ್ಲ, ಜ್ಞಾನದ ಪ್ರಕ್ರಿಯೆಯೂ ಅಲ್ಲ ಇದರ ಬಗೆಗಿನ ಒಂದು ಅತಿಯಾದ ನಿಲುವನ್ನು ''ವಿಸ್ಮೃತಿ''ವಾದಿಗಳೂ ಪ್ರಕಟಿಸಿದ್ದಾರೆ. ವಸಾಹತು ಕಾಲದ ಶಿಕ್ಷಣದಿಂದ, ಆ ಕಾಲಘಟ್ಟದ ತಿಳುವಳಿಕೆಯಿಂದ, ಭಾರತೀಯ ಜ್ಞಾನ ಪರಂಪರೆಯ ಬಗೆಗಿನ ಅರಿವು ವಿಸ್ಮೃತಿಗೆ ಒಳಗಾಯಿತು ಎಂದು ಹೇಳುವಲ್ಲಿನ ನಿಜವಾದ ತಾತ್ವಿಕತೆಯನ್ನು ಅರ್ಥಮಾಡಿಕೊಳ್ಳಬೇಕು. ಇದ್ದಕ್ಕಿದ್ದ ಹಾಗೆಯೇ ಒಂದು ದೇಶದ ತಿಳುವಳಿಕೆಯು ಅದರ ವಿಸ್ಮೃತಿಗೆ ಒಳಗಾಗುವುದು ಸಾಧ್ಯವೇ? ವಿಸ್ಮೃತಿಯೆಂದರೆ ಅದು ಯಾವ ಬಗೆಯದು? ಯಾರಿಗೆ ಈ ಮಾದರಿಯ ವಿಸ್ಮೃತಿಯು ಬಂದು ಆವರಿಸುತ್ತದೆ? ವಿಸ್ಮೃತಿಯೆಂಬ ವೈಚಾರಿಕ ಚೌಕಟ್ಟು ಒಂದೇ ಮಾದರಿಯಲ್ಲಿ ವಸಾಹತು ಪೂರ್ವದ ಸಂದರ್ಭಕ್ಕೆ ಪ್ರತಿಕ್ರಿಯಿಸುವುದಿಲ್ಲವೇ? ವಸಾಹತುಪೂರ್ವದ ಸಂದರ್ಭವೆಂದರೆ ಅದು ಸರಳವಾದ ಸಾಮಾಜಿಕ ಸಂಬಂಧಗಳನ್ನು ಒಳಗೊಂಡ ಸಮಾಜವಾಗಿರಲಿಲ್ಲ. ಈ ದೃಷ್ಟಿಯಿಂದಲೇ ದೇಶೀಯ ಜ್ಞಾನ ಪರಂಪರೆಯು ಉದಾರೀಕರಣದಿಂದ ನಾಶವಾಗಬಹುದು ಎಂಬ ಪ್ರಮೇಯವನ್ನು ಮಂಡಿಸುವಾಗಲೂ ಅದಕ್ಕೆ ಒಂದು ಬಗೆಯ ''ಬಹುತ್ವ'' ದರ್ಶನ ಬೇಕೇ ಬೇಕು. ಹಾಗೆಯೇ ಜಾಗತಿಕ ಜ್ಞಾನ ಪರಂಪರೆಯ ಬಹುಕೇಂದ್ರಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವೂ ಇರಬೇಕು. ಸ್ವಲ್ಪ ವಿಸ್ತರಿಸಿ ಹೇಳಬೇಕೆಂದರೆ, ನಾವೀಗ ಕನ್ನಡ ಸಂದರ್ಭದಲ್ಲಿ ಮಾತಾಡುವ ''ಕನ್ನಡ ದೇಸಿ''ಯೆಂಬ ಚಿಂತನೆಯು ಒಂದೇ ಅಲ್ಲ, ಹಲವಾರು ರೀತಿಯ ದೇಶೀಯ ಉತ್ಪಾದನೆಯ ಸಂಬಂಧಗಳಿವೆ. ಅವುಗಳಿಗೆ ಪ್ರಾದೇಶಿಕ ಔಚಿತ್ಯವಿದೆ. ಮತ್ತು ಅವು ತಮ್ಮ ಚಾರಿತ್ರಿಕ ಸಾಮಾಜಿಕ ಅಗತ್ಯಕ್ಕೆ ಅನುಗುಣವಾಗಿ ರೂಪುಗೊಂಡಿವೆ. ಹೀಗಾಗಿ 'ಜಾಗತೀಕರಣ'ದ ಎದುರಲ್ಲಿ ನಾವಿಡುವ 'ದೇಶೀಯ ಜ್ಞಾನ ಪರಂಪರೆ'ಯೆನ್ನುವುದು ಒಂದೇ ಮಾದರಿಯ ಪರ್ಯಾಯವಲ್ಲ. ಇಲ್ಲಿ ದೇಶೀಯ ಜ್ಞಾನ ಪರಂಪರೆಯ ಬಗ್ಗೆ ಮಾತಾಡಿದೆ : ಈ ದೇಶೀಯ ಜ್ಞಾನದ ಮಾದರಿಗಳು ನಮ್ಮ ಅಗತ್ಯಕ್ಕೆ ತಕ್ಕಂತೆ ರೂಪುಗೊಂಡಿವೆ. ನಮ್ಮ ಉತ್ಪಾದನೆಯ ಸಂಬಂಧಕ್ಕೂ ಜ್ಞಾನದ ಮಾದರಿಗಳಿಗೂ ಒಂದು ನಿರ್ಣಾಯಕವಾದ ಸಂಬಂಧವಿದೆ. ಒಂದು ಸಣ್ಣ ಉದಾಹರಣೆಯನ್ನು ಕೊಡಬಹುದು. ರೈತನೊಬ್ಬ ಭತ್ತದಲ್ಲಿ ತನಗೆ ಯಾವ ಮಾದರಿಯು ಸೂಕ್ತ; ಹವಾಮಾನ, ಮಣ್ಣಿನ ಗುಣ ಹೇಗಿದೆ ಮುಂತಾದವುಗಳನ್ನು ಆಲೋಚಿಸಿ ಬೆಳೆಯುತ್ತಿದ್ದ. ಹಾಗೆಯೇ ಅಕ್ಕಿಯ ಸಂರಕ್ಷಣೆ ಹೇಗೆಂಬುದು ಆತನಿಗೆ ತಿಳಿದಿತ್ತು. ಆತ ಈಗ ಆಲೋಚಿಸುವ ಮಾದರಿಗಳು ಬದಲಾಗಿವೆ. ಕಡಿಮೆ ಪ್ರದೇಶದಲ್ಲಿ ಹೆಚ್ಚು ಬೆಳೆ ತೆಗೆಯುವುದು ಹೇಗೆ ಎಂದು ಆಲೋಚಿಸುತ್ತಾನೆ. ಅದಕ್ಕೆ ಬೀಜವನ್ನು ಅಂತರರಾಷ್ಟ್ರೀಯ ಕಂಪೆನಿಗಳು ಕೊಡುತ್ತವೆ. ಅದಕ್ಕೆ ಬೇಕಾದ ಔಷಧಗಳನ್ನು ಕೂಡಾ. ಪರ್ಯಾಯವಾಗಿ

ಏನಾಯಿತು ಎಂದರೆ ಬೆಳೆ, ಔಷಧಿ: ಮಾರುಕಟ್ಟೆ – ಎಲ್ಲವೂ 'ಕಂಪೆನಿಗಳ' ವಶವಾದವು. ಉತ್ಪಾದನೆಯ ಸಂಬಂಧಕ್ಕೆ ತಕ್ಕಂಥ ಬೇರೊಂದು ಜ್ಞಾನದ ಮಾದರಿ ರೂಪುಗೊಂಡುದು ಮಾತ್ರವೇ ಅಲ್ಲ ರೈತ ಆ ಬಲೆಯಲ್ಲಿ ಸಿಕ್ಕಿಹಾಕಿಕೊಂಡ. ಇದು ಕೇವಲ ರೈತನೊಬ್ಬನ ಪ್ರಶ್ನೆಯಲ್ಲ-ನಮ್ಮೆಲ್ಲರ ಜ್ಞಾನ ಮಾದರಿಗಳನ್ನು: ಅಧ್ಯಯನ ಕ್ರಮವನ್ನು ಅಂತರ ರಾಷ್ಟ್ರೀಯ ಜಾಲ ನಿಯಂತ್ರಿಸುತ್ತದೆ ಮತ್ತು ಯಾವುದಕ್ಕೆ ಹೆಚ್ಚು ವಿನಿಮಯ ಮೌಲ್ಯ ಇದೆಯೋ ಅದು ಮಾತ್ರ ಉಳಿಯುತ್ತದೆ. ಹಾಗೂ ಜ್ಞಾನದ ಮಾದರಿಗಳಲ್ಲೇ ಅನೇಕ ವರ್ಗಗಳು ಸ್ಥಾಪಿತವಾಗಿ ಯಾವುದು ಯಜಮಾನಿಕೆಯನ್ನು ವಹಿಸುತ್ತದೆಯೋ ಅದು ಮಾತ್ರ ಶ್ರೇಷ್ಠವೆಂಬ ಪರಿಕಲ್ಪನೆಯು ಬೆಳೆಯುತ್ತದೆ. ಹೀಗೆ ಹೊಸ ಮಾದರಿಯ ಶ್ರೇಣೀಕರಣದ ವ್ಯವಸ್ಥೆ ಹುಟ್ಟಿಕೊಳ್ಳುತ್ತದೆ.

ನಮಗೆ ವಸಾಹತುಶಾಹಿ ಅನುಭವ ಮತ್ತು ಈಗ ಉದಾರೀಕರಣದ ಅನುಭವ ಎರಡೂ ಆಗಿದೆ ಮತ್ತು ಆಗುತ್ತಿವೆ. ಮೊದಲು ನಾವಿದನ್ನು ಅರ್ಥಮಾಡಿಕೊಳ್ಳಬೇಕು. ವಸಾಹತುಶಾಹಿ ಅನುಭವ ಮತ್ತು ಅದರ ಬಿಡುಗಡೆಯ ಪ್ರಯತ್ನದಲ್ಲಿ ಪ್ರಭುತ್ವದ ನೇರ ಸಂಪರ್ಕ ಮತ್ತು ಅದರ ಮುಖಾಮುಖಿ ಸಾಧ್ಯವಾಯಿತು. ವಸಾಹತುಶಾಹಿ ಕಾಲದಲ್ಲಿ 'ಅಧಿಕಾರ'ದ ಅನುಭವ ನೇರವಾದುದು. ಹಾಗೂ ಅದು ನಮ್ಮ ಕಣ್ಣಿಗೆ ಕಾಣಿಸುತ್ತಿತ್ತು. ಈಗ ವಸಾಹತೋತ್ತರ ಸಂದರ್ಭದಲ್ಲಿ, ಅದೂ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ 'ಜಾಗತೀಕರಣ'ವೆಂಬ ಆರ್ಥಿಕವಾದ ಪರಮಾಧಿಕಾರದ ಪರಿಚಯವಾಗತೊಡಗಿದೆ. ವಸಾಹತುಶಾಹಿ ಅನುಭವಕ್ಕಿಂತ ಬೇರೆಯಾದ ಅನುಭವವಿದು. ಇದರಲ್ಲಿ ಅಂತರ ರಾಷ್ಟ್ರೀಯ ಕಂಪೆನಿಗಳೂ ನಿಜವಾದ ರಾಷ್ಟ್ರೀಯ ಪರಮಾಧಿಕಾರವನ್ನು ಪರೋಕ್ಷವಾಗಿ ನಿಯಂತ್ರಿಸುತ್ತಿದೆ. ಜಾಗತೀಕರಣದ ಸಂದರ್ಭದಲ್ಲಿ 'ನಿಜವಾಗಿ' ಯಾರು ನಿಯಂತ್ರಣ ಮಾಡುತ್ತಾರೆಯೆಂಬುದು ಎಲ್ಲರಿಗೂ ಸರಿಯಾಗಿ ತಿಳಿಯುವುದೇ ಇಲ್ಲ. ವಸಾಹತುಶಾಹಿ ಅನುಭವ ಸಂದರ್ಭದಲ್ಲಿ ವಸಾಹತುಶಾಹಿಯ ವಿರೋಧವೇ ರಾಷ್ಟ್ರೀಯ ಪ್ರಜ್ಞೆಯ ಹುಟ್ಟಿಗೆ ಕಾರಣವಾಯಿತು. ಇದರಿಂದ 'ರಾಷ್ಟ್ರೀಯ ಪ್ರಜ್ಞೆ' ಎಂಬುದು ಎಲ್ಲರಲ್ಲಿ ಅಲ್ಲವಾದರೂ ಕೆಲವರಿಗಾದರೂ ಸಾಧ್ಯವಾಯಿತು. ರಾಷ್ಟ್ರೀಯ ಪ್ರಜ್ಞೆಯು ನಿರ್ದಿಷ್ಟವಾದ ಗುರಿಯನ್ನು ಹೊಂದಿದೆ. ಮತ್ತು ಅದಕ್ಕೆ ನಿರ್ದಿಷ್ಟವಾದ ರೇಖೆಯಿದೆ. ಸಂಸ್ಕೃತಿಯ ವಾಗ್ವಾದಗಳಿವೆ. ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಪರಸ್ಪರ ಕೊಳುಕೊಡುವಿಕೆಯಿತ್ತು. ಆಳುವ ವರ್ಗ ಮತ್ತು ಆಳಿಸಕೊಳ್ಳುವ ವರ್ಗಗಳ ನಡುವೆ ಸಾಂಸ್ಕೃತಿಕ ಸಂವಾದಗಳಿದ್ದವು. ಜಾಗತೀಕರಣದ ಸಂದರ್ಭದಲ್ಲಿ ನಿಜವಾದ ಸಾಂಸ್ಕೃತಿಕ ಸಂವಾದಗಳ ಪ್ರಶ್ನೆಯಿಲ್ಲ. ಜಾಗತೀಕರಣವು ರಾಷ್ಟ್ರೀಯ ಪ್ರಜ್ಞೆಯನ್ನು ಮೀರಿದ್ದು ಮತ್ತು ಎರಡು ದೇಶಗಳ ನಡುವಣ ಆಯಾತ ನಿರ್ಯಾತಗಳನ್ನೇ ಪ್ರಧಾನವಾಗಿ ಕೇಂದ್ರೀಕರಿಸಿಕೊಂಡಿದ್ದು ಎಂದೇ ಪ್ರತಿಪಾದಿಸಲಾಗುತ್ತದೆ.

ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಯೂರೋಪಿನ ಸಂಸ್ಕೃತಿಯು ಪ್ರಭಾವ ಬೀರಿತಷ್ಟೆ? ಈ ಮಾದರಿಯ ಸಾಂಸ್ಕೃತಿಕ ಚಿಂತನೆಯೇ ಭಾರತದ ರಾಷ್ಟ್ರೀಯ ಸಂಸ್ಕೃತಿ: ರಾಷ್ಟ್ರೀಯ ಏಕತೆಯ ಪ್ರಶ್ನೆಯನ್ನು ಮುಂದಕ್ಕಿಟ್ಟಿತು. ಇದರ ಪರಿಣಾಮವಾಗಿ ರಾಷ್ಟ್ರೀಯ ಸಂಸ್ಕೃತಿಯು ರಾಷ್ಟ್ರೀಯ ಜನಾಂಗದ ಆದರ್ಶವೆಂಬುದನ್ನು ಮುಂದಕ್ಕಿಟ್ಟುಕೊಂಡಿತು. ಈ ರಾಷ್ಟ್ರೀಯ ಪ್ರಜ್ಞೆ ಮತ್ತು ರಾಷ್ಟ್ರೀಯ ಜನಾಂಗದ ಪ್ರಜ್ಞೆಯನ್ನು ತೊಡೆದುಹಾಕುವುದಕ್ಕಾಗಿಯೇ ಜಾಗತಿಕ ಜನಾಂಗದ ಬಗ್ಗೆ ಮಾತಾಡುತ್ತದೆ. ವಸಾಹತೋತ್ತರ ಸಂದರ್ಭದಲ್ಲಿಯೂ ರಾಷ್ಟ್ರೀಯತೆಯ ಪ್ರಜ್ಞೆಯೆನ್ನುವುದು ಕೇವಲ ರಾಷ್ಟ್ರೀಯತೆಗೆ ಮಾತ್ರವೇ ಸಂಬಂಧಿಸಿಲ್ಲ. ಇದರ ಜೊತೆಗೆ ವ್ಯಾಪಾರ-ವಹಿವಾಟು; ಸಾಮಾಜಿಕ ಸಂಬಂಧಗಳು; ಭಾಷೆಗಳ ಅನೇಕತೆ ಮುಂತಾದವುಗಳು ಹೊಂದಿಕೊಂಡಿವೆ. ಮತ್ತು ವಸಾಹತೋತ್ತರ ಸನ್ನಿವೇಶದಲ್ಲಿ ಬಹುತ್ವದ ಸಂಗತಿಗಳೂ ಜೊತೆ ಸೇರಿಕೊಂಡಿವೆ. ನಮ್ಮೆಲ್ಲರ ಗಮನಕ್ಕೆ ಬಂದಿರುವಂತೆ ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಅನೇಕ ಲೇಖಕರ ಬರವಣಿಗೆಗಳಲ್ಲಿ ಸಂಸ್ಕೃತಿಯ ಪ್ರಶ್ನೆಯು ಮುಖ್ಯವಾಗಿತ್ತು ಮತ್ತು ವಸಾಹತು ಅನುಭವಕ್ಕೆ ನಿಜವಾದ ಪ್ರತಿರೋಧವನ್ನು ಒಡ್ಡಬೇಕಾದರೆ ಲೇಖಕರು ಪ್ರಾದೇಶಿಕ ಭಾಷೆ; ಸಂಸ್ಕೃತಿ; ಸಾಮಾಜಿಕ ಸಂಬಂಧಗಳಲ್ಲಿನ ಘರ್ಷಣೆಗಳ ಕುರಿತು ಬರೆಯಬೇಕಿತ್ತು. ಅಂದರೆ ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಈ ಮಾದರಿಯ ಪ್ರಶ್ನೆಗಳನ್ನು ಎತ್ತಿಕೊಳ್ಳುವುದೇ ಒಂದು ಸಾಮಾಜಿಕ ಪ್ರಜ್ಞೆಯ ಮಾದರಿಯಾಗಿತ್ತು. ಈ ಕುರಿತು ಹೆಚ್ಚಿನ ಲೇಖಕರು ಬರೆದಿರುವುದು ಒಂದು ವ್ಯೂಹ ರಚನೆಯ ಮಾದರಿಯಲ್ಲಿಯೇ. ಕುವೆಂಪು, ಕಾರಂತ, ಬೇಂದ್ರೆ ಮುಂತಾದವರ ಬರಹಗಳಲ್ಲಿ ಆಗಾಗ ಹಾಸುಹೊಕ್ಕಾಗಿ ಬಂದಿರುವ ಪ್ರಾದೇಶಿಕ ಸಂಸ್ಕೃತಿಯ ಕುರಿತು ಈ ನೆಲೆಯಿಂದಲೂ ಆಲೋಚಿಸಲು ಸಾಧ್ಯ. ನವೋದಯ ಲೇಖಕರ ಬರವಣಿಗೆಗಳಲ್ಲಿ ಎದ್ದುಕಾಣುವ ಅಂಶವೆಂದರೆ ಪ್ರಾದೇಶಿಕತೆ. ಈ ಪ್ರಾದೇಶಿಕತೆಯು ಅವರಿಗೆ ರಾಷ್ಟ್ರೀಯತೆಯನ್ನು ಕಂಡುಕೊಳ್ಳುವ ಒಂದು ತುಣುಕಾಗಿತ್ತು. ಪ್ರಾದೇಶಿಕತೆಯ ಅನನ್ಯತೆಯನ್ನು ಎತ್ತಿಹಿಡಿಯುತ್ತಲೇ ಅದರ ಜೊತೆಗೆ ಆ ಲೇಖಕರು ಒಂದು ಭಾವನಾತ್ಮಕ ತನ್ಮಯತೆಯನ್ನು ಸಾಧಿಸಿಕೊಂಡಿದ್ದರು. ಪ್ರಾದೇಶಿಕತೆಯ ಮುಖಾಂತರ ರಾಷ್ಟ್ರೀಯತೆಗೆ; ರಾಷ್ಟ್ರೀಯತೆಯ ಮುಖಾಂತರ ಪ್ರಾದೇಶಿಕತೆಗೆ ಅನುಸಂಧಾನ ಮಾಡಲು ಅವರಿಗೆ ಸಾಧ್ಯವಾಯಿತು. ಇಲ್ಲಿಯೇ ಇನ್ನೊಂದು ಅಂಶವನ್ನು ಗಮನಿಸಬೇಕು. ಅದೇನೆಂದರೆ, ರಾಷ್ಟ್ರೀಯ ಮಾದರಿಯ ಹೋರಾಟಗಳಲ್ಲಿ ವ್ಯಕ್ತವಾಗುವ 'ರಾಷ್ಟ್ರೀಯ-ಸಾಂಸ್ಕೃತಿಕ ಏಕತೆ'ಯ ಪ್ರಶ್ನೆ. ಬ್ರಿಟಿಷ್ ಪ್ರಭುತ್ವದ ವಿರುದ್ಧ ಹೋರಾಡಲು ಆಗ ಇಲ್ಲದೇ ಇದ್ದ ಹೊಸ ರಾಜ್ಯವ್ಯವಸ್ಥೆಯ ಮಾದರಿಯನ್ನು ಒಪ್ಪಿಕೊಳ್ಳಬೇಕಾಗಿತ್ತು. ರಾಷ್ಟ್ರೀಯತೆಯನ್ನು ಚಳುವಳಿಕಾರರು ಕಂಡುಕೊಳ್ಳುವ ವಿಧಾನಕ್ಕೂ ಲೇಖಕರು ಕಂಡುಕೊಳ್ಳುವ ವಿಧಾನಕ್ಕೂ ವ್ಯತ್ಯಾಸವಿದೆ. ಲೇಖಕರು ಇದನ್ನು ಸಾಂಸ್ಕೃತಿಕ ಪರಿಭಾಷೆಯ ಮುಖಾಂತರವೇ ಕಂಡುಕೊಳ್ಳಬೇಕಾಗುತ್ತದೆ. ಸ್ವಸಂಸ್ಕೃತಿಯ ಬಗೆಗಿನ ಭಾವನಾತ್ಮಕ ನಿಲುವು; ಪ್ರಾದೇಶಿಕತೆಯ ಬಗೆಗಿನ ಅಭಿಮಾನ ಮುಂತಾದವುಗಳ ಮುಖಾಂತರ ಲೇಖಕರು ಮಾತಾಡಬೇಕಾಗುತ್ತದೆ. ಕನ್ನಡದ ಲೇಖಕರ ಮಟ್ಟಿಗಂತೂ ಇದು ನಿಜ. ನಮ್ಮ ಲೇಖಕರಿಗೆ ಹೆಚ್ಚು ಇಷ್ಟವಾದುದು ಈ ಮಾದರಿಯ ಸಾಂಸ್ಕೃತಿಕ ಅನುಸಂಧಾನ. ಕುವೆಂಪು ಬರಹಗಳ ಕೇಂದ್ರ ಮಲೆನಾಡು. ಕಾರಂತರ ಬರಹಗಳ ಕೇಂದ್ರ ಉಡುಪಿಯ ಸುತ್ತಣ ಪ್ರದೇಶ. ತೀರಾ ಸಾಮಾನ್ಯವಾದ, ಯಾವುದೇ ಕಾರಣದಿಂದ ಮಹತ್ವವಲ್ಲದ ಸಣ್ಣ ಊರುಗಳಲ್ಲಿ ವಸಾಹತು ಆಡಳಿತ ಪರಿಣಾಮ ಮತ್ತು ಅದರ ಪಲ್ಲಟಗಳನ್ನು ನವೋದಯದ ಲೇಖಕರು ಗುರುತಿಸಿದರು. ಪ್ರಾದೇಶಿಕ ಸಂಸ್ಕೃತಿಗಳು ಹೊಸ ಸಾಮಾಜಿಕ; ರಾಜಕೀಯ; ಆರ್ಥಿಕ ಸನ್ನಿವೇಶಗಳಲ್ಲಿ ಬದಲಾಗುವ ಕ್ರಮಗಳನ್ನು ಬರೆದರು.

ವಸಾಹತೋತ್ತರ ಸನ್ನಿವೇಶದಲ್ಲಿ ಹಳೆಯ ಮಾದರಿಯ ವರ್ಗೀಕರಣವಾದ ಪಶ್ಚಿಮ ಮತ್ತು ಪೂರ್ವ ಇಲ್ಲವೇ 'ಲಂಡನ್' ಮತ್ತು 'ದೆಹಲಿ'ಯೆಂಬ ವರ್ಗೀಕರಣವು ಸಲ್ಲದು. ಬೇರೊಂದು ಮಾತಿನಲ್ಲಿ ಹೇಳಬೇಕೆಂದರೆ ಈ ಮಾದರಿಯ ಪೂರ್ವ ಮತ್ತು ಪಶ್ಚಿಮದ ನಡುವೆ ವೈಚಾರಿಕವಾಗಿ ಸದಾ ಒಂದು ಸಂಘರ್ಷವಿದೆಯೆಂದು ತಿಳಿದುಕೊಳ್ಳುವುದು ತುಂಬಾ ಕಷ್ಟ. ವೈಚಾರಿಕವಾಗಿ ಈ ರೀತಿಯ ಚಿಂತನಾ ಕ್ರಮದ ಬೇರುಗಳೇ ಬೇರೆಯವು. ವಸಾಹತುಶಾಹಿ ಅನುಭವದಲ್ಲಿ ಎರಡು ರೀತಿಯ ಪ್ರಕ್ರಿಯೆಗಳು ಜರುಗಿದ್ದನ್ನು ಲೀಲಾ ಗಾಂಧಿಯವರು ಗುರುತಿಸುತ್ತಾರೆ. ಮೊದಲನೆಯದಾಗಿ ವಸಾಹತುಶಾಹಿ ಅನುಭವದಲ್ಲಿ ವಸಾಹತು ಪ್ರಭು ಮತ್ತು ವಸಾಹತುಶಾಹಿ ಅನುಭವಕ್ಕೆ ಒಳಗಾದ ದೇಶ ಎರಡರಲ್ಲಿಯೂ ಬದಲಾವಣೆಯನ್ನು ತಂದಿದೆ. ಈ ಸಂದರ್ಭದ ಕೊಳುಕೊಡುವಿಕೆಯು ಅತ್ಯಂತ ಸಂಕೀರ್ಣವಾಗಿತ್ತು.

ಎರಡನೆಯದಾಗಿ ನಾಗರಿಕ ಸಮುದಾಯದಲ್ಲಿ ಒಂದು ರೀತಿಯ ಮೈತ್ರಿಯು ಸಾಧ್ಯವಾಯಿತು. 'ಮಾನವೀಯತೆಯು ವಸಾಹತುಶಾಹಿ ಸಂದರ್ಭದಲ್ಲಿ ಅನೇಕ ಹೊಸ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಮತ್ತು ಇದರಿಂದ ಹೊಸ ಅನ್ವೇಷಣೆಯು ಸಾಧ್ಯವಾಯಿತು' ಎಂದು ಫ್ಯಾನನ್ ಹೇಳುತ್ತಾನೆ. ಆದರೆ ವಸಾಹತೋತ್ತರ ಸಮಸ್ಯೆಗಳು ಬೇರೆ. ಅದರಲ್ಲಿಯೂ ಈಚಿನ ವರ್ಷಗಳಲ್ಲಿ ಅನೇಕ ಶೈಕ್ಷಣಿಕ ವಿಚಾರಧಾರೆಗಳು ಜಾಗತೀಕರಣದ ಕಡೆಗೆ ತಿರುಗಿದ್ದು ಒಂದು ಕುತೂಹಲದಾಯಕವಾದ ಸಂಗತಿಯೇ ಆಗಿದೆ. ಇದರರ್ಥ ಒಟ್ಟು ಶಿಕ್ಷಣ ಕ್ಷೇತ್ರವೇ ಹೀಗಾಗಿದೆಯೆಂದಲ್ಲ. ಹೊಸದಾಗಿ ಪ್ರಾರಂಭವಾದ ಸಂವಹನ ಮಾಧ್ಯಮಗಳು (ಉದಾ : ಕಂಪ್ಯೂಟರ್) ತಾಂತ್ರಿಕತೆ; ಮುಂತಾದವು ಶೈಕ್ಷಣಿಕ ಕೆಲಸಗಳ ಮೇಲೆ ಪ್ರಭಾವವನ್ನು ಬೀರಿವೆ. ಜಾಗತಿಕ ಮಟ್ಟದ ಅನೇಕ ಮಾಹಿತಿಗಳು; ಮತ್ತು ಅಂತರರಾಷ್ಟ್ರೀಯ ಮಟ್ಟದ ಆಮಿಷಗಳು ಭಾರತದ ಬುದ್ಧಿಜೀವಿಗಳು ವಿಚಾರಧಾರೆಯ ಮಟ್ಟಿಗೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ತೆರಳಲು ಸಾಧ್ಯವಾಯಿತು. ಆ ತನಕವಿದ್ದ ಯೂರೋಪಿನ ಕೇಂದ್ರದ ವಿಚಾರಧಾರೆಯ ಬದಲಿಗೆ ಹೊಸ – ಅನೇಕ ಕೇಂದ್ರಗಳ ವಿಚಾರಧಾರೆಗಳು ಭಾರತದ ಶೈಕ್ಷಣಿಕ ವಲಯಕ್ಕೆ ಪ್ರವೇಶಿಸುವಂತಾಯಿತು.

ವಸಾಹತೋತ್ತರ ಸಂದರ್ಭದಲ್ಲಿ ಬಂದ ಅನೇಕ ಸಿದ್ಧಾಂತಗಳು ಮತ್ತು ವಸಾಹತೋತ್ತರ ಸಂದರ್ಭದಲ್ಲಿ ಬಂದ ರಾಷ್ಟ್ರೀಯತೆಯ ಸಮಸ್ಯೆಗಳನ್ನು ಸುಲಭವಾಗಿ ಒಪ್ಪಿಕೊಳ್ಳುವಂತಿಲ್ಲ. ಈಚಿನ ವರ್ಷಗಳಲ್ಲಿ ನಡೆಯುತ್ತಿರುವ ಚರ್ಚೆಗಳಲ್ಲಿ ಕೆಲವಂತೂ ವಿಮರ್ಶಾತ್ಮಕವಾಗಿಯೇ ಅನುಮಾನಗಳನ್ನು ಸೃಷ್ಟಿಸುತ್ತವೆ. ಸಾಹಿತ್ಯ ಸಂದರ್ಭದಲ್ಲಿ ಬಂದ 'ನಿರಚನ ಸಿದ್ಧಾಂತ'ವು ಈ ಬಗೆಯದು. ಹಾಗೆಯೇ ತಾತ್ಕಾಲಿಕವಾಗಿಯೇ ಅಗತ್ಯವಾಗಿರುವ ರಾಷ್ಟ್ರೀಯ ಅಧಿಕಾರದ ಪ್ರಶ್ನೆಯೂ ಕೂಡಾ. ರಾಷ್ಟ್ರ; ಪ್ರಭುತ್ವ; ಸಂವಿಧಾನ; ಇತ್ಯಾದಿಗಳ ಬಗ್ಗೆಯೂ ಕೂಡಾ ಪೂರ್ಣಮಟ್ಟದ ನಿರಾಕರಣೆಯು ಯಾವ ಕಡೆಗೂ ಕೊಂಡೊಯ್ಯಬಲ್ಲುದು. ಇವು ಕೇವಲ ಬೌದ್ಧಿಕ ವಲಯದ ಪ್ರಶ್ನೆಯಲ್ಲ. ರಾಷ್ಟ್ರೀಯತೆಯ ವಿರೋಧವೇಂದರೆ ಅದು ತಕ್ಷಣದ ಛಿದ್ರ

ಗೊಳ್ಳುವ ರಾಜಕೀಯ ಅಧಿಕಾರ ಪಡೆದುಕೊಳ್ಳುವುದು ಎಂದು ಭಾವಿಸಿಕೊಂಡರೆ ಕಷ್ಟ. ರಾಷ್ಟ್ರೀಯತೆಯೆಂದರೆ ಅದು ಒಂದು ಕೋಮು; ಒಂದು ಸಂಸ್ಕೃತಿಯ ರಾಜಕೀಯ ಅಧಿಕಾರ ಪಡೆದುಕೊಳ್ಳುವಿಕೆ ಎಂದು ತಿಳಿದುಕೊಂಡ ಕೋಮುವಾದಿ ಚಿಂತನೆಯ ಕ್ರಮದ ಹಿನ್ನೆಲೆಯು ಕೂಡಾ ಈ ಮಾದರಿಯಲ್ಲಿ ಅಪಾಯಕಾರಿಯೇ ಆಗಿದೆ. ಒಂದು ಕಡೆಯಿಂದ ಭಾರತದಲ್ಲಿ ಜರುಗುತ್ತಿರುವ 'ಜಾಗತೀಕರಣ'ಕ್ಕೂ, ಕೋಮುವಾದಿ ಚಟುವಟಿಕೆಗೂ ಸಂಬಂಧವಿದೆ. ಕೋಮುವಾದವು ಸಮಾನತೆಯನ್ನು ನಂಬುವುದಿಲ್ಲ, ಜಾಗತೀಕರಣವೂ ಅಷ್ಟೆ. ವಾಸ್ತವವಾಗಿ ರಾಷ್ಟ್ರೀಯತೆಯು ಅಮೂರ್ತ ರಾಜಕೀಯ ಏಕತೆ ಮತ್ತು ಸಮಾನ ಪ್ರಜೆಗಳ ಕಲ್ಪನೆಯನ್ನು ಹೊಂದಿದೆ. ಆದರೆ ಜಾಗತೀಕರಣವು ಹೆಚ್ಚು ಪ್ರಬಲವಾಗುತ್ತಾ ಹೋದಂತೆ ಇದಕ್ಕೆ ಯಾವ ಅರ್ಥವೂ ಇರುವುದಿಲ್ಲ. ಈಗಾಗಲೇ ಉದಾರವಾದ ಸಂಸ್ಕೃತಿಯು ಹಾಜರಾಗಿದೆ. ಇಂಗ್ಲಿಷ್ ಭಾಷೆಯನ್ನು ಈ ಉದಾರ ಸಂಸ್ಕೃತಿಯ ದೆಸೆಯಿಂದ ಹೆಚ್ಚು ಅಧಿಕೃತ ಮತ್ತು ವ್ಯವಹಾರಕ್ಕೆ ಅತ್ಯಗತ್ಯ ಭಾಷೆಯೆಂಬಂತೆ ಚಾಲ್ತಿಗೆ ತರಲಾಗಿದೆ. ವಸಾಹತೋತ್ತರ ಸನ್ನಿವೇಶದಲ್ಲಿಯೂ ಮೂರು ಭಾಷೆಯ ಅಗತ್ಯ ಬೇರೆ ಬೇರೆ ಕಾರಣಗಳಿಂದ ಅಗತ್ಯವಾಗಿಬಿಟ್ಟಿತು. ಒಂದು, ಮಾತೃಭಾಷೆ. ಇದು ಕೇವಲ ಜ್ಞಾನ ಸಂಬಂಧಿಯಾದುದು ಅಲ್ಲ, ವ್ಯಾವಹಾರಿಕ ಅಗತ್ಯ. ದೈನಂದಿನ ಬದುಕಿನ ಸಂವಹನದ ಅಗತ್ಯವನ್ನು ಒಳಗೊಂಡಿದೆ. ಕನ್ನಡದ ಸಂದರ್ಭದಲ್ಲಿಯೂ ಕೂಡಾ ಇದು ಸತ್ಯ. ಇನ್ನೊಂದು ದೇಶಭಾಷೆ. ಮತ್ತೊಂದು ರೀತಿಯಲ್ಲಿ ಹೇಳಬೇಕೆಂದರೆ ಇದನ್ನು ರಾಷ್ಟ್ರೀಯ ಭಾಷೆಯೆಂದು ಕರೆಯಲಾಗಿದೆ. ಹಿಂದಿಯನ್ನು ಈ ದೃಷ್ಟಿಯಿಂದ ಅಂಗೀಕರಿಸಲಾಗಿದೆ. ಇಂಗ್ಲಿಷ್ ನಮಗೆ ಜಾಗತಿಕ ನೆಲೆಯ ಭಾಷೆ. ಒಂದು ಕಾಲಕ್ಕೆ ನಾವಿದನ್ನು ಪ್ರಭುತ್ವದ ಭಾಷೆ ಎಂದು ಕರೆಯುತ್ತಿದ್ದೆವು. ಇಂಗ್ಲಿಷ್ ಈಗ ನಮಗೆ ಬೌದ್ಧಿಕ ಅಗತ್ಯ ಮತ್ತು ಅದು ಮಾರುಕಟ್ಟೆಗೆ ಬೇಕಾದ ಭಾಷೆ. ಅಂದರೆ ಉದಾರೀಕರಣದ ಸಂದರ್ಭದಲ್ಲಿ ಈ ಜಾಗತಿಕ ಭಾಷೆಯು ಮಾರುಕಟ್ಟೆಯ ಅಗತ್ಯಕ್ಕೆ ಅನುಸಾರವಾಗಿಯೇ ಬಳಕೆಯಾಗುತ್ತದೆ. ಭಾಷೆಗೆ ಇರುವ ಮಾನವೀಯತೆಯ ಮುಖ ಇದಕ್ಕೆ ಮುಖ್ಯವಲ್ಲ. ಇಂಗ್ಲಿಷ್ ಈಗ ಗೌರವಯುತ ಸ್ಥಾನವನ್ನು ಪಡೆದುಕೊಳ್ಳಬೇಕಾದ ಭಾಷೆಯೆಂದೇ ತಿಳಿದುಕೊಳ್ಳಲಾಗಿದೆ. ಈ ಕಾರಣದಿಂದಲೇ ಇಂಗ್ಲಿಷ್‌ಗೆ ಜಾಗತಿಕ ಮಟ್ಟದ ಸ್ಥಾನಮಾನವನ್ನು ಕೊಟ್ಟು ಅದಕ್ಕೊಂದು ವಿಶಿಷ್ಟ ಜಾಗವನ್ನು ಕಲ್ಪಿಸಲಾಗಿದೆ. ಇದರ ಹಿನ್ನೆಲೆಯಲ್ಲಿ ನಮಗೆ ಇಂಗ್ಲಿಷ್ ಎನ್ನುವುದು ವಸಾಹತು ಪೂರ್ವದಲ್ಲಿ ಇದ್ದ ಹಾಗೆ ಅದು ಪ್ರಭುತ್ವದ ಭಾಷೆಯಲ್ಲ. ಅದು ಈಗ ಮನುಷ್ಯನಿಗೆ ಅತ್ಯಂತ ಅಗತ್ಯವಾದ ಭಾಷೆಯೆಂದೇ ಬಿಂಬಿಸಲಾಗುತ್ತದೆ. ಇದರ ಪರಿಣಾಮವಾಗಿ ಭಾಷೆ; ಸೂಚಕ; ಸೂಚನೆ; ರಾಷ್ಟ್ರೀಯ ಭಾಷೆ; ಪ್ರಾದೇಶಿಕ ಭಾಷೆ ಮುಂತಾದವು ತಮ್ಮ ಕೇಂದ್ರಗಳನ್ನು ಬದಲಾಯಿಸಿಕೊಂಡಿವೆ. ಇಂಗ್ಲಿಷ್ ಭಾಷೆಯ ಕಲಿಕೆಯು ವಸಾಹತು ಸಂದರ್ಭದಲ್ಲಿ ಅಧಿಕಾರದ ಜೊತೆಗೆ ಇರಿಸಿಕೊಂಡ ಸಂಬಂಧದ ಸೂಚನೆ: ಅಧಿಕೃತ ಜ್ಞಾನ ಪರಂಪರೆಯನ್ನು ಕಟ್ಟಿಕೊಳ್ಳುವ ಪ್ರಕ್ರಿಯೆಯ ಜೊತೆಗಿನ ಸಂಬಂಧ : ಸಾಂಸ್ಕೃತಿಕ ವಿಸ್ತರಣೆಯ ಅರ್ಥ ಇತ್ಯಾದಿ ಅಂಶಗಳನ್ನು ಒಳಗೊಂಡಿತ್ತು. ವಸಾಹತೋತ್ತರ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯದ ಕಲಿಕೆಯು ಬೇರೊಂದು ಅರ್ಥವನ್ನು ಸೂಚಿಸುತ್ತದೆ. ಅದರಲ್ಲಿಯೂ ಉದಾರೀಕರಣದ ಸಂದರ್ಭದಲ್ಲಿ ಇಂಗ್ಲಿಷ್ ಕಲಿಕೆ ಮತ್ತು ಸಂಪಾದನೆಗೆ ವಿಶೇಷ ಅರ್ಥ ಬಂದಿದೆ. ಇಂಗ್ಲಿಷಿನ ಜ್ಞಾನ ಮತ್ತು ಅಂತರ ರಾಷ್ಟ್ರೀಯ ಕಂಪೆನಿಗಳಲ್ಲಿನ ಉದ್ಯೋಗಕ್ಕೂ ಒಂದು ಸಂಬಂಧ ಇದೆ. ಈ ಪ್ರಕ್ರಿಯೆಯೂ ಜರುಗುತ್ತಿದೆ. ಇದರ ಪರಿಣಾಮದಿಂದ ಅಂತಿಮವಾಗಿ ಪ್ರಾದೇಶಿಕ ಭಾಷೆಗಳ ಮೇಲೆ ದೊಡ್ಡದೊಂದು ಕಂಟಕವು ಎದುರಾದರೆ ಆಶ್ಚರ್ಯವೇನಿಲ್ಲ.

ಭಾಷೆ, ಕಲಿಕೆ, ಉದ್ಯೋಗ ಇವುಗಳ ನಡುವೆ ಇರುವ ಸಂಬಂಧ ತುಂಬಾ ಸೂಕ್ಷ್ಮವಾದುದು. ಇಂಗ್ಲಿಷ್ ಮಾದರಿಯ ಶಿಕ್ಷಣ ಕ್ರಮದಿಂದ ನಮ್ಮಲ್ಲಿ ಭಾಷೆಯ ಬಗೆಗಿನ ಕಲ್ಪನೆಗಳು ಬೇರೆಯೇ ಆದುವು. ಭಾಷೆಯ ಕಲಿಕೆ ಮತ್ತು ಉದ್ಯೋಗಕ್ಕೆ ಒಂದು ಸಂಬಂಧವು ಕಲ್ಪಿತವಾಯಿತು. ಹಾಗೆಯೇ ಬರಹದ ಭಾಷೆಯನ್ನು ಒಂದು 'ಲಿಖಿತ ಸಾಕ್ಷ್ಯ', ಅದನ್ನು ಸತ್ಯವೆಂದು ಪರಿಭಾವಿಸಲಾಯಿತು. ''ಬರವಣಿಗೆಯ ಭಾಷೆ'' ಒಂದು ಸತ್ಯವೆಂಬಂತೆ ಕಂಡುಕೊಳ್ಳುವುದೆಂದರೆ ಅದರ ಪೂರ್ವದ ಆಲೋಚನೆ ಮತ್ತು ಮಾತುಗಳನ್ನು ಅಸತ್ಯವೆಂಬಂತೆ ಕಂಡುಕೊಂಡಂತೆ. ಬರಹವೆಂದರೆ ಅದು ಪೂರ್ಣ ಸತ್ಯವಲ್ಲ ಎಂಬ ಪ್ಲೇಟೋನ ಮಾತು ಇಲ್ಲಿ ನೆನಪಿಗೆ ಬರುತ್ತದೆ. ಸಾಹಿತ್ಯದ ದೃಷ್ಟಿಯಲ್ಲಂತೂ ಈ ಮಾದರಿಯ ತಿಳುವಳಿಕೆಯ ಪರಿಣಾಮವು ದೊಡ್ಡದೇ. ಯಾವುದನ್ನು ಕೃತಿಗಳಲ್ಲಿ ಬರೆಯಲಾಗಿದೆಯೋ ಅದನ್ನು ಮಾತ್ರ ಸಾಹಿತ್ಯವೆಂದು ಕರೆದು ಅದಕ್ಕೊಂದು ನಿರ್ದಿಷ್ಟವಾದ ಮೌಲ್ಯವನ್ನು ಹೇರಲಾಗಿದೆ. ಹೀಗಾಗಿ ಸಾಹಿತ್ಯದ ತರಗತಿಗಳಲ್ಲಿ ಕಲಿಸುವ ವಿಧಾನವು ಅನೇಕ ಪೂರ್ವಾಗ್ರಹಗಳಿಂದ ಕೂಡಿಕೊಂಡಿದೆ. ಸಾಹಿತ್ಯಕ್ಕೆ ನಿರ್ದಿಷ್ಟ ಅರ್ಥವನ್ನು ಹೇರಲಾಗಿದೆ. ಭಾಷೆ, ಜಾಹಿರಾತು; ಸಮೂಹ ಮಾಧ್ಯಮ; ವ್ಯವಹಾರ ಇತ್ಯಾದಿಗಳಿಂದ ಪ್ರತ್ಯೇಕಗೊಂಡ ಚಟುವಟಿಕೆಯೆಂಬಂತೆ ತಿಳಿಹೇಳಲಾಗಿದೆ. ಹೀಗಾಗಿ ಸಾಹಿತ್ಯವು ಕೂಡಾ ಕೆಲ ಜನರ ಸೊತ್ತಾಯಿತು. ಯಾವಾಗ ಸಾಹಿತ್ಯವೆಂಬುದು ಸಾಂಸ್ಥಿಕವಾಗುವುದೋ ಆಗ ಅದರ ಪರಿಣಾಮ ಬೇರೆಯಾಗುವುದು. ಎಲ್ಲಿಯವರೆಗೆ ಸಾಹಿತ್ಯವು ಜಾಗತೀಕರಣಕ್ಕೆ ಪೂರಕವಾಗುವುದೋ ಅಲ್ಲಿಯ ತನಕ ತೊಂದರೆಯಿಲ್ಲ. ಆದರೆ, ಜಾಗತೀಕರಣದ ರಭಸದ ಸೆಳವಿಗೆ ಸಾಹಿತ್ಯ ವಿರೋಧವಾಗುವುದೋ ಆಗ ನಿಜವಾಗಿಯೂ ಸಾಹಿತ್ಯದ ಸಮಸ್ಯೆಯು ಪ್ರಾರಂಭವಾಗಿಬಿಡುತ್ತದೆ.

ಸರಿಸುಮಾರು ೧೯೭೦ರ ಅನಂತರದ ಕನ್ನಡದ ಪ್ರಮುಖ ವಾಗ್ವಾದಗಳಲ್ಲಿ ಸಂಸ್ಕೃತಿ ಮತ್ತು ಸಾಹಿತ್ಯದ ಅಧ್ಯಯನಗಳಲ್ಲಿ ವಿಶೇಷವಾದ ಪಲ್ಲಟವನ್ನು ನಾವು ಕಾಣುತ್ತೇವೆ. ಈ ಸಂದರ್ಭದಲ್ಲಿಯೇ ಮಾನವತೆ ಮತ್ತು ಕೆಳವರ್ಗದ ಸಮಾಜ ಮತ್ತು ಸಂಸ್ಕೃತಿಯ ಪ್ರಶ್ನೆಯು ಪ್ರಮುಖ ವಿಚಾರಧಾರೆಯ ಜೊತೆಗೆ ಒಂದುಗೂಡಿತು. ಸಾಂಪ್ರದಾಯಿಕವಾದ ಸಾಹಿತ್ಯದ ಚಿಂತನೆಯು ಈ ಸಂದರ್ಭದಲ್ಲಿ ಬದಲಾಯಿತು. ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಎಡಪಂಥೀಯ ದೃಷ್ಟಿಕೋನದಿಂದ ನೋಡುವ ಪ್ರಯತ್ನ ನಡೆಯಿತು. ಸಂಸ್ಕೃತಿಯು ಸ್ಥಿರವಲ್ಲ; ಚರವೆಂಬ ಸಂಗತಿಯೂ ಈ ಕಾಲದಲ್ಲಿ ಪ್ರಚಲಿತವಾಗಿರುವುದು ಮಾತ್ರವಲ್ಲ, ಅದು ಸಾಂಸ್ಕೃತಿಕ ಚರ್ಚೆಗೂ ಈ ದಶಕದಲ್ಲಿ ನಡೆದ ಪ್ರಮುಖ ಚರ್ಚೆಗೂ ಯಾವುದೇ ರೀತಿಯ ಸಂಬಂಧವಿಲ್ಲ. ಎಪ್ಪತ್ತರ ದಶಕದಲ್ಲಿ ಸಮಾಜ; ಸಂಸ್ಕೃತಿ, ಸಾಹಿತ್ಯ – ಯಾವುದೇ ಚರ್ಚೆಗಿರಲಿ ಅವು ವ್ಯವಸ್ಥೆಯನ್ನು

## ಆ ದಿನ ಇಂದಾದರೆ

ನಾವು, ಬಹುಜನ
ಇಂದಿನಂತೆ
ಅಂದೂ ಬದುಕಿದ್ದೆವು
ಕಾಲವನ್ನು, ಕಸವಾಗಿಸಿ
ಕಾಲವೂ ಅಷ್ಟೇ
ನಮ್ಮ ಕಾಲುಗಳಿಗೆ
ಕಡಿವಾಣ ಬಿಗಿದಿತ್ತು.
ಇಂದಿಗೂ
ನಾವು ನಾಲಿಗೆ
ಮೆದುಳು, ಭುಜಗಳಿಗೆ
ಗೆದ್ದಲನ್ನು ಬಿಟ್ಟುಕೊಂಡವರೆ
ಆದರೂ
ಎಂದೋ, ಒಂದಿನ
ಜನಪದ, ಜಲಪಾತವಾಗುತ್ತದೆ.
ಇದು ಸೂರ್ಯನಂತಹ ದಿಟ.
ಆದರೆ, ಆ ಎಂದೋ
ಆಗುವುದು, ಇಂದಾಗಬಾರದೆ
ಒಂದಷ್ಟು ಕಾಂತಿ
ನನ್ನ ಕಣ್ಣಲ್ಲೂ ಉರಿದೀತು.



ವಿಶ್ವನಾಥ್ ಎಲ್. ವೇಮಗಲ್
ಬಿ. ಆರ್. ಅಂಬೇಡ್ಕರ್ ರಸ್ತೆ
ವೇಮಗಲ್-೫೬೩ ೧೫೭, ಕೋಲಾರ ತಾಲ್ಲೂಕು

ಪ್ರಶ್ನಿಸಲು ತೊಡಗಿದವು. ಉದಾರೀಕರಣದ ಪ್ರಕ್ರಿಯೆಯ ಸಂದರ್ಭದಲ್ಲಿ ಈ ಪ್ರಶ್ನೆಗಳು ಯಾವ ಕಡೆಗೆ ಹೋಗುತ್ತದೆ ಯೆಂದು ಈಗ ಊಹಿಸುವುದು ಕಷ್ಟ. ಆದರೆ ಉದಾರೀ ಕರಣದ ಪ್ರಕ್ರಿಯೆಯು ಈ ಮಾದರಿಯ ವಾಗ್ವಾದಗಳನ್ನು ಸಮತಲಗೊಳಿಸುವುದೇನೊ ? ಈ ಪ್ರಮೇಯ ಮಾತ್ರ ಈಗ ಸಾಧ್ಯ.

ಜಾಗತೀಕರಣವು ಎರಡು ದೃಷ್ಟಿಯಿಂದ ಸಾಂಸ್ಕೃತಿಕ ವಲಯದ ಮೇಲೆ ಪ್ರಭಾವವನ್ನು ಬೀರುತ್ತದೆ. ಒಂದನೆಯದಾಗಿ, ಜಾಗತಿಕ ಅರ್ಥವ್ಯವಸ್ಥೆಯು ರೂಪು ಗೊಳ್ಳುವುದರಿಂದ ರಾಷ್ಟ್ರೀಯ ಸಂಸ್ಕೃತಿಯ ಪ್ರಶ್ನೆಯೇ ಅರ್ಥ ಹೀನವಾಗುವುದು ಮತ್ತು ಇದರಿಂದಲೇ ಪ್ರಾದೇಶಿಕ ಸಂಸ್ಕೃತಿಯ ನಾಶ ಹಾಗೂ ಇದರಿಂದ ಯಾವುದೇ ಆದರ್ಶ ವಾದಿ ತಾತ್ವಿಕತೆಯು ರೂಪುಗೊಳ್ಳದೇ ಹೋಗಿಬಿಡ ಬಹುದು. ಬೇರೊಂದು ಮಾದರಿಯಲ್ಲಿ ಹೇಳಬೇಕೆಂದರೆ – ಉಪಭೋಗವಾದಿ ಸಂಸ್ಕೃತಿಯೊಂದು ಮಧ್ಯಮ ವರ್ಗದ ಮೇಲೆ ಬೀರುವ ಪರಿಣಾಮ ಹಾಗೂ ಜಾಗತಿಕ ಮಾರುಕಟ್ಟೆಯ ಪ್ರಭಾವ. ಸಂಪತ್ತಿನ ಕ್ರೋಢೀಕರಣ ಮತ್ತು ಅದಕ್ಕೆ ಸಂಬಂಧಿಸಿದ ಆಮಿಷಗಳೇ ಮಧ್ಯಮ ವರ್ಗದ ಜೀವನಕ್ರಮವಾಗುವ ಅಪಾಯವು ಇದರಿಂದ ರೂಪು ಗೊಳ್ಳುತ್ತದೆ. ಮಾರುಕಟ್ಟೆಯೇ ಮನಸ್ಸನ್ನು ನಿಯಂತ್ರಿಸಿದರೆ ಅದರಿಂದ ಯಾವುದೇ 'ಅಲೌಕಿಕ'ವೂ ಸಾಧ್ಯವಾಗದೇ ಹೋಗಬಹುದು. ಮಾರುಕಟ್ಟೆ ಕೇಂದ್ರಿತ ಜೀವನ ಕ್ರಮಕ್ಕೆ ಮತ್ತೊಂದು ಅರ್ಥದಲ್ಲಿ ಯಾವುದೇ ಸಾಂಸ್ಕೃತಿಕ ಸಂಘರ್ಷ ಗಳಿರುವುದಿಲ್ಲ. ಹಾಗೆ ನೋಡುವುದಿದ್ದರೆ ಬಂಡವಾಳವಾದಿ ಪ್ರಕ್ರಿಯೆಯು ಮನುಷ್ಯರ ಸಂವೇದನೆಯನ್ನೇ ಸ್ಥಳಾಂತರ ಮಾಡುತ್ತದೆ. ಲೌಕಿಕವಾಗಿ ಮನುಷ್ಯ ತನ್ನ ಐಷಾರಾಮಿ ಜೀವನಕ್ಕೆ ಯಾವೆಲ್ಲಾ ವಸ್ತುಗಳನ್ನು ಬಳಸುತ್ತಾನೆ ಎಂಬುದ ರಿಂದಲೇ ವ್ಯಕ್ತಿಯ ಸ್ಥಾನಮಾನಗಳು ನಿರ್ಧಾರವಾಗುತ್ತವೆ. ಮತ್ತು ಆದರಿಂದಲೇ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ವರೂಪಗಳು ನಿರ್ಧಾರಗೊಳ್ಳುತ್ತವೆ. ಈಗಿನ ನಮ್ಮ ಸ್ಥಿತಿಗತಿಗಳು ಕೂಡಾ ಇದಕ್ಕಿಂತ ಬೇರೆಯದಲ್ಲ.

ಜಾಗತೀಕರಣವು ಸಾಹಿತ್ಯ ಮತ್ತು ಸಂಸ್ಕೃತಿಯ ವಾಗ್ವಾದಗಳ ವಿಷಯಗಳಲ್ಲಿ ಆಸಕ್ತವಾದುದಲ್ಲ. ಹೀಗೆ ನೋಡುವುದಿದ್ದರೆ ಸಾಹಿತ್ಯವನ್ನು ಕುರಿತು ಜಾಗತೀಕರಣ ಮಾತಾಡಲು ಸಾಧ್ಯವೇ ಇಲ್ಲ. ಜಾಗತೀಕರಣ ಮಾತಾಡು ವುದೇ ಆರ್ಥಿಕವಾದ ಪರಿಭಾಷೆಯನ್ನು. ಇದರಿಂದಾಗಿ ಅದರ ಗರ್ಭದಲ್ಲಿರುವುದು ಆರ್ಥಿಕ ವಿನಿಮಯ ಮತ್ತು ಕ್ರೋಢೀಕರಣ. ಯಾವುದಕ್ಕೆ ಹೆಚ್ಚಿನ ವಿನಿಮಯ ಮೌಲ್ಯ ಹೆಚ್ಚಿದೆಯೋ ಆ ಮಾದರಿಯ ಸಾಹಿತ್ಯ ಕೃತಿಗಳಿಗೆ ಮಾತ್ರ ಹೆಚ್ಚು ಬೇಡಿಕೆಯಿರುತ್ತದೆ. ವಾಸ್ತವವಾಗಿ ಮುದ್ರಣ ಸಂಸ್ಕೃತಿ ಯೆನ್ನುವುದೇ ಈ ಮಾದರಿಯ ಮೌಲ್ಯಗಳನ್ನು ಒಳಗೊಂಡಿದೆ. ಮುದ್ರಿತ ಪುಸ್ತಕಗಳಿಗೆ ವಿನಿಮಯ ಮೌಲ್ಯವಿದೆ. ಮಾರುಕಟ್ಟೆಯಲ್ಲಿ ಯಾವ ಪುಸ್ತಕಗಳಿಗೆ ಹೆಚ್ಚು ಬೇಡಿಕೆಯಿರುತ್ತದೋ ಅವು ಮಾತ್ರ ಹೆಚ್ಚು ಪ್ರತಿಗಳಲ್ಲಿ ಮುದ್ರಣವಾಗುತ್ತವೆ. ಮತ್ತು ಈ ತನಕದ ನಮ್ಮ ಸಾಹಿತ್ಯದ ಅಧ್ಯಯನ ಕ್ರಮಗಳು ಹೇಗಾಗಿವೆಯೆಂದರೆ, ಯಾವುದನ್ನು ಸಾಂಸ್ಥಿಕ ಮೌಲ್ಯಗಳು ಶ್ರೇಷ್ಠವೆಂದು ಕರೆದಿವೆಯೋ ಅವುಗಳ ಅಧ್ಯಯನ ಮಾತ್ರ ಹೆಚ್ಚಿವೆ. ಸಾಹಿತ್ಯದ ಅಧ್ಯಯನ ವೆಂದರೆ ನಿರ್ದಿಷ್ಟ ಜನರಿಂದ ನಿರ್ದಿಷ್ಟ ಜನರಿಗೆ ಮಾತ್ರ ಸಂಬಂಧಿಸಿದ ಕಲಿಕೆಯ ಕ್ರಮವೆಂದು ಮಾತ್ರವೇ ಪರಿಭಾವಿಸಲಾಗಿದೆ. ಹೀಗಾಗಿ ಸಾಹಿತ್ಯವೆಂಬುದಕ್ಕೆ ಬಹಳ ಸೀಮಿತವಾದ ಅರ್ಥ ಮಾತ್ರವೇ ಇದೆ. ಸಾಹಿತ್ಯವೆಂಬುದರ ಅರ್ಥವನ್ನು ಈ ಕಾರಣಕ್ಕೆ ತುಂಬಾ ಕಡಿತಗೊಳಿಸಲಾಗಿದೆ. ಆದರೆ ಸಾಹಿತ್ಯವೆಂಬುದು ಇನ್ನಿತರ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಒಂದು ಭಾಷಿಕ ವಿಧಾನವೆಂಬುದು ಅನೇಕ ಸಂದರ್ಭಗಳಲ್ಲಿ ಚಾಲ್ತಿಗೆ ಬರಲಿಲ್ಲ. ತತ್ವಜ್ಞಾನದ ಬರವಣಿಗೆ ಗಳಲ್ಲಿ; ಸಮೂಹ ಮಾಧ್ಯಮಗಳಲ್ಲಿ ಬಳಕೆಯಾಗುವ ಸಾಹಿತ್ಯ ಕ್ರಮಗಳು ಬರಲೇ ಇಲ್ಲ. ಜಾಗತೀಕರಣವು ಈ ಪರಿಸ್ಥಿತಿಯನ್ನು ಇನ್ನಷ್ಟು ಬಿಗಡಾಯಿಸುವ ಸಾಧ್ಯತೆಯಂತೂ ಇದ್ದೇ ಇದೆ. ಜಾಗತೀಕರಣದ ಮುಖ್ಯಗುರಿ – ಬಡತನ ರೇಖೆಯ ಕೆಳಗೆ ವಾಸಿಸುತ್ತಿರುವ ಜನರನ್ನು ಅಭಿವೃದ್ಧಿಯ ವಾಹಿನಿಯ ಒಳಗಡೆಗೆ ತರುವುದು ಅಲ್ಲ. ಈ ಕಾರಣ ಕ್ಕಾಗಿಯೇ ಅದು ಹೂಡುವ ಉದ್ಯಮಗಳಿಗೆ ನಿರ್ದಿಷ್ಟ ಗುರಿಯಿದೆ. ಈ ಉದ್ದಿಮೆಯಲ್ಲಿ ಸಾಹಿತ್ಯವಿರುವುದು ಕಷ್ಟ ಸಾಧ್ಯ. ಮತ್ತು ಸಮೂಹ ಮಾಧ್ಯಮಗಳನ್ನು ತನ್ನ ವರ್ಚಸ್ಸಿಗೆ ಮತ್ತು ಲಾಭದ ಅಗತ್ಯಕ್ಕೆ ತಕ್ಕಂತೆ ಬಳಸಲು ಒಂದು ವ್ಯೂಹವನ್ನು ರಚಿಸುತ್ತದೆ. ಜಾಗತೀಕರಣದ ಪರವಿರುವ ಮಾಧ್ಯಮಗಳು; ಬುದ್ಧಿಜೀವಿಗಳು ಜಾಗತೀಕರಣದ ಕಠೋರ ಅನುಭವಗಳ ಕುರಿತು ಮಾತಾಡದೇ ಇರುವುದಕ್ಕೆ ಬಹಳ ಕಾರಣಗಳಿರಬಹುದು. ಆದರೆ, ಜಾಗತೀಕರಣದ ಪ್ರಕ್ರಿಯೆ ಗಳಿಂದ ಮೋಸ ಹೋದ ಜನರ ಬಗ್ಗೆ: ಅವರ ಹಸಿವು ಮತ್ತು ಬಡತನದ ಬಗ್ಗೆ ಈ ಮಾದರಿಯ ಬುದ್ಧಿಜೀವಿಗಳು ಎಷ್ಟು ಮಾತಾಡಿದ್ದಾರೆ ? ಜಾಗತೀಕರಣದಿಂದ ಯಾರಿಗೆ ಲಾಭ ಮತ್ತು ಯಾರಿಗೆ ನಷ್ಟ ಎನ್ನುವ ಲೆಕ್ಕಾಚಾರಗಳು ಇಲ್ಲಿ ಮುಖ್ಯವಲ್ಲ. ಜಾಗತೀಕರಣವು ಬಹಳ ಆಕರ್ಷಕವಾಗಿ ಹೇಳುವ 'ಅಭಿವೃದ್ಧಿ', 'ಜಾಗತಿಕ ಸಮಾನತೆ', 'ಮುಕ್ತತೆ' ಎನ್ನುವುದು ಎಷ್ಟು ಟೊಳ್ಳಾದುದು ಎಂದು ಈಗಾಗಲೇ ಜಾಗತೀಕರಣವನ್ನು ರತ್ನಗಂಬಳಿ ಹಾಸಿ ಸ್ವಾಗತಿಸಿದ ದೇಶಗಳ ಅರಿವಿಗೆ ಬಂದಿದೆ. ಒಂದು ರಾಷ್ಟ್ರದ ಒಳಗಡೆಗೆ ಇರಬೇಕಾದ ವ್ಯವಹಾರಿಕ ನಿಯಮಗಳನ್ನು ಮುರಿದಾಗ ಆಗುವ ಪ್ರಮುಖ ತೊಂದರೆಯೆಂದರೆ ಆಮದು ಮತ್ತು ರಫ್ತು ವ್ಯಾಪಾರಗಳ ಮೇಲಿನ ಅನಿರ್ಬಂಧಿತ ಏರಿಳಿತ. ಈ ಏರಿಳಿತದಿಂದ ಸಹಜವಾಗಿಯೇ ಸಣ್ಣ ಹಿಡುವಳಿದಾರರು; ಕೃಷಿ ಕಾರ್ಮಿಕರು ನೆಲ ಕಚ್ಚಬೇಕಾಗುತ್ತದೆ. ಜಾಗತೀಕರಣದ ಒಂದು ಭಾಗವಾಗಿ ಬಂದ ''ಖಾಸಗೀಕರಣ''ವೂ ಇದೇ ಹುನ್ನಾರವನ್ನು ಒಳಗೊಂಡಿದೆ. 'ಖಾಸಗೀಕರಣ'ವನ್ನೇ ನೋಡಿ : ಇದರಿಂದ ಸಾಮರ್ಥ್ಯ ಹೆಚ್ಚುತ್ತದೆ, ಸರಕಾರಿ ಉದ್ದಿಮೆಗಳಲ್ಲಿ ಇಲ್ಲದೇ ಇರುವ ನಿಯತ್ತು ಖಾಸಗೀಕರಣಕ್ಕೆ ಒಳಗಾದ ಕಂಪೆನಿಗಳ ಕಾರ್ಮಿಕರಿಗೆ ಇರುತ್ತದೆಯೆಂದು ವಾದವನ್ನು ಮಂಡಿಸುವ ಅರ್ಥಶಾಸ್ತ್ರಜ್ಞರ ಕೆಲವು ವಾದಗಳು ಸಾಮಾಜಿಕ ಅಸಮಾನತೆಯನ್ನು ಗಮನಿಸಲು ಹೋಗುವುದಿಲ್ಲ. ಇದರಿಂದಲೇ ಕೆಳವರ್ಗದ ಜನರು; ದಲಿತರು; ನಿಜವಾಗಿಯೂ ಮುಕ್ತಿ ಹೊಂದಲು ಸಾಧ್ಯವೇ ? ಸಾಂಸ್ಕೃತಿಕವಾಗಿ ಮೀಸಲಾತಿಯು ಅಗತ್ಯವಿರುವ ನಮ್ಮ ಸಾಮಾಜಿಕ ಸನ್ನಿವೇಶದಲ್ಲಿ ನಿಜವಾಗಿಯೂ 'ಖಾಸಗೀಕರಣ' ಶೋಷಿತ ಜನತೆಗೆ ಮುಕ್ತಿಯನ್ನು ಕರುಣಿಸಲು ಸಾಧ್ಯವೇ ? ಜಾಗತೀಕರಣದಿಂದ 'ದಲಿತರು' ವಿಮೋಚನೆಗೆ ಒಳಗಾಗ ಬಲ್ಲರು ಎಂದು ತಿಳಿಯುವ ವಿದ್ವಾಂಸರು ಅಂತರಾಳದಲ್ಲಿ ಹೇಗೆ ಜನವಿರೋಧಿಯಾಗಬಲ್ಲರು ಮತ್ತು ತಮ್ಮ ಸ್ವಂತ ಸುಖ ನೋಡಬಲ್ಲರು ಎಂಬುದಕ್ಕೆ ಉದಾಹರಣೆಯಾಗಿದೆ. ಜಾತಿ ಪದ್ಧತಿಗೂ ಕೃಷಿಕೇಂದ್ರಿತ ಸಮಾಜಕ್ಕೂ ಒಂದು ಸಂಬಂಧವಿದೆ. ಮತ್ತು ಚಾರಿತ್ರಿಕ ಅಗತ್ಯಕ್ಕೆ ಅನುಸಾರವಾಗಿ ಜಾತಿಯು ತನ್ನ ಚಟುವಟಿಕೆಗಳನ್ನು ಬದಲಾಯಿಸುತ್ತಾ ಬಂದಿದೆ. ಮತ್ತು ಜಾತಿಯ ಶ್ರೇಣೀಕರಣದ ವ್ಯವಸ್ಥೆಯು ಪ್ರಾದೇಶಿಕ ಹಾಗೂ ಭೂ ಯಜಮಾನಿಕೆಗೆ ಅನುಸಾರವಾಗಿ ಬೇರೆಬೇರೆಯಾಗುತ್ತಾ ಬಂದಿದೆ. ಸ್ವಾತಂತ್ರ್ಯದ ಅನಂತರ ದಲ್ಲಿ ಪ್ರಜಾಪ್ರಭುತ್ವವಾದಿ ಸರಕಾರವು ಜಾತಿ ಸಂರಚನೆ ಯನ್ನು ಒಡೆದಿದೆ. ಇದರಿಂದಾಗಿ ಹಿಂದಿನ ದಲಿತರ ಸಮಸ್ಯೆ ಮತ್ತು ಇಂದಿನ ದಲಿತರ ಸಮಸ್ಯೆ ಬೇರೆ ಬೇರೆಯಾಗಿವೆ. ಹಿಂದಿನ ದಲಿತರಿಗೆ ಭೂ ಯಜಮಾನಿಕೆ ಇರಲಿಲ್ಲ. ಮತ್ತು ಅವರು ಅಸ್ಪೃಶ್ಯತೆಯಿಂದ ನರಳಿದ್ದಾರೆ. ಇಂದಿನ ದಲಿತರ ಸಮಸ್ಯೆ- ಭೂ ಯಜಮಾನಿಕೆ ಮತ್ತು ಅಸ್ಪೃಶ್ಯತೆಯಲ್ಲ. ಹೀಗಾಗಿ ಈಗ ಕನ್ನಡದಲ್ಲಿ ಬಹಳ ಸುಲಭವಾಗಿ ಬಳಸುವ 'ಪುರೋಹಿತಶಾಹಿ ಸಂಸ್ಕೃತಿ ಮತ್ತು ಶೂದ್ರ ಸಂಸ್ಕೃತಿ'ಯೆಂಬುದನ್ನು ಪರಿಶೀಲಿಸಬೇಕಾದ




ಅಗತ್ಯವಿದೆ. ದಲಿತರು - ಶೂದ್ರರು ಎಂಬ ಚೌಕಟ್ಟಿನೊಳಗೆ ಅಪಾಯವಿದೆ. ಮತ್ತು ದಲಿತರು V/S ಪುರೋಹಿತಶಾಹಿ ಸಂಸ್ಕೃತಿಯೆಂಬ ಪದವು ಹೆಚ್ಚು ಆಕರ್ಷಕವಾಗಿರು ವುದು ಲೋಹಿಯಾ ಮಾದರಿಯ ಚಿಂತಕರಿಂದ. ಆದುದರಿಂದಲೇ ಈ ಮಾದರಿಯ ವೈಚಾರಿಕ ಚೌಕಟ್ಟಿನಲ್ಲಿ ಮುಂದಕ್ಕೆ ಹೋದರೆ ಹೆಚ್ಚಿನ ಚರ್ಚೆ ಸಾಧ್ಯವಿಲ್ಲ. ಬಂಡವಾಳಶಾಹಿ ವ್ಯವಸ್ಥೆಯಿಂದ ದಲಿತರಿಗೆ ನಿಜವಾಗಿಯೂ ಅನುಕೂಲವಾಗಿದೆಯೆ?

ಉದಾರೀಕರಣವು ಸಾಹಿತ್ಯ, ಸಂಸ್ಕೃತಿ; ಮನುಷ್ಯನ ಅನುಭವದ ಜಗತ್ತು; ಮಾನವತೆಯ ವಿಚಾರಗಳನ್ನು ಬದಲಾಯಿಸುವಷ್ಟು ಶಕ್ತವಾಗಿದೆ. ಲಾಭದ ಲೆಕ್ಕಾಚಾರ ವಿರುವ ಉದಾರೀಕರಣಕ್ಕೆ ಈ ಸಂಗತಿಗಳು ಮುಖ್ಯವೇ ಅಲ್ಲ. ಬದುಕು ಮತ್ತು ಉತ್ಪಾದನೆ; ಶಿಕ್ಷಣ ಮತ್ತು ಉತ್ಪಾದನೆ; ಮೂರನೆಯ ಜಗತ್ತಿನ ಸಂಸ್ಕೃತಿ ಮತ್ತು ಉತ್ಪಾದನೆ – ಈ ತರಹದ ಕೇವಲ ಸರಳ ಸಮೀಕರಣ ಮಾತ್ರವೇ ಇರಲು ಸಾಧ್ಯ. ಮನುಷ್ಯರು ಇಂತಹ ಸಂದರ್ಭಗಳಲ್ಲಿ ಏಕಾಂತ

ವಾದಿಗಳು ಆಗಲು ಸಾಧ್ಯ. ಪ್ರತಿಯೊಂದು ಸಂಗತಿಯೂ ಒಬ್ಬ ವ್ಯಕ್ತಿಗೆ ಹೇಗೆ ಮುಖ್ಯವಾಗುತ್ತದೆ ಎಂಬುದು ಮಾತ್ರ ಇಂತಹ ಸಂದರ್ಭದಲ್ಲಿ ಪರಿಗಣನೆಯೊಳಗೆ ಬರಲು ಸಾಧ್ಯ. ಬೆಳೆಯಬಹುದಾದ ವ್ಯಕ್ತಿವಾದದಲ್ಲಿ ಸಾಮಾನ್ಯ ಮನುಷ್ಯ; ಸಾಮಾನ್ಯ ಸಂಸ್ಕೃತಿಯ ಪ್ರಶ್ನೆಯು ಮುಖ್ಯವಲ್ಲ. ಸಮಕಾಲೀನ ಸಾಮೂಹಿಕ ಜೀವನದಲ್ಲಿ ಅನೇಕ ರೀತಿಯ ವೈರುದ್ಧ್ಯಗಳಿವೆ. ಜೀವನ ಕ್ರಮದಲ್ಲಿಯೇ ಸಂಘರ್ಷಗಳಿವೆ. ಇದರಿಂದಲೇ ಸಾಹಿತ್ಯ ತಾತ್ವಿಕತೆ; ಸಾಮಾಜಿಕ ಸಂಬಂಧ ಇವುಗಳಲ್ಲಿಯೂ ಈ ಗತಿ ವಿಧಾನವನ್ನು ನಾವು ಕಾಣುತ್ತೇವೆ. ಅನೇಕ ರೀತಿಯ ಧ್ವನಿಗಳು; ಅನೇಕ ರೀತಿಯ ಸಾಹಿತ್ಯಿಕ ಸಂವಾದಗಳ ನಡುವೆಯೇ ಸಾಹಿತ್ಯವು ರೂಪುಗೊಳ್ಳುತ್ತದೆ. ಮತ್ತು ಸಾಹಿತ್ಯವೆಂದು ನಾವು ಯಾವುದನ್ನು ಕರೆಯುತ್ತಿದ್ದೇವೋ ಅವು ಮುದ್ರಣಗೊಂಡು ಅನೇಕ ಓದುಗರಿಗೆ ಸಿಗುತ್ತದೆ. ಒಂದು ಕಡೆಯಿಂದ ಸಮೂಹ ಮಾಧ್ಯಮಗಳಾದ ಟಿ.ವಿ; ಪತ್ರಿಕೆ ಮುಂತಾದವು ಸಾಹಿತ್ಯದ ವಿನಿಮಯ ಮೌಲ್ಯವನ್ನು ತನಗೆ ಬೇಕಾದಂತೆ ಇಟ್ಟು ಕೊಂಡು ವ್ಯಾಪಾರ ನಡೆಸುತ್ತವೆ. ಸಾಹಿತ್ಯವು ಈಗ ಒಂದು ಮಾದರಿಯ ಉದ್ಯಮ. ಹೀಗೆ ಸಾಹಿತ್ಯ ಉದ್ಯಮವಾಗಿ ಪರಿವರ್ತನೆಗೊಳ್ಳುವಾಗ ಬರವಣಿಗೆಯೆನ್ನುವುದು ವಾಣಿಜ್ಯೋದ್ಯಮದ ಒಂದು ಮಾಧ್ಯಮವಾಗುತ್ತದೆ. ಇದರ ಅರ್ಥ ನಮ್ಮ ಎಲ್ಲರ ಬರಹಗಳು ಈ ವಾಣಿಜ್ಯೋದ್ಯಮದ ಪಾಲಾಗಿದೆಯೆಂದಲ್ಲ, ಈ ಉದ್ಯಮ ಸಂಸ್ಕೃತಿಯು ಕೂಡಾ 'ಸಾಹಿತ್ಯ ಸಂವಹನ'ವನ್ನು ನಿಯಂತ್ರಿಸುತ್ತದೆ. ಎರಡನೆಯದಾಗಿ ಇದರಿಂದ ಅಕ್ಷರಸ್ಥರ ಸಾಂಸ್ಕೃತಿಕ ಜಗತ್ತು, ತನ್ನ ಸಾಂಸ್ಕೃತಿಕ ಜಗತ್ತು, ತನ್ನ ಸಾಂಸ್ಕೃತಿಕ ಸಂದರ್ಭವನ್ನು ಬದಲಾಯಿಸಿಕೊಂಡಿದೆ. ಜಾಗತಿಕ ಅರ್ಥ ಶಾಸ್ತ್ರವು ತಂದೊಡ್ಡುವ ಅಪಾಯ ಪ್ರಾದೇಶಿಕ ಭಾಷೆಗಳ ಮೇಲಿದೆ. ಜಾಗತೀಕರಣದ ಪ್ರಮುಖ ಹತ್ಯಾರವಿರುವುದು ಜಾಗತಿಕ ಮಾರುಕಟ್ಟೆಯ ಅಭಿವೃದ್ಧಿಯಲ್ಲಿ. ಇದರಿಂದ ಮಾನವೀಯ ಸಂಬಂಧಗಳ ನಿರ್ವಚನವು ಬದಲಾಗುತ್ತದೆ. ಅದರೊಂದಿಗೆ ಪ್ರಾದೇಶಿಕ ಭಾಷೆಗಳಿಗಿಂತ ಜಾಗತಿಕ ಅರ್ಥವಲಯಕ್ಕೆ ಪೂರಕವಾದ ಭಾಷೆಗಳು ಮಾತ್ರ ಉಪಯುಕ್ತವಾಗಬಲ್ಲವು. ಹೆಚ್ಚು ಪ್ರಚಾರಕ್ಕೆ ಒಳಗಾದ ಕಂಪ್ಯೂಟರ್ ತಂತ್ರಜ್ಞಾನವನ್ನೇ ನೋಡಿ : ಇದಕ್ಕೆ ಪ್ರಾದೇಶಿಕ ಉಪಭಾಷೆಗಳು ಉಪಯುಕ್ತವಲ್ಲ, ಆಡುಮಾತಿನ ಧ್ವನಿಯ ಏರಿಳಿತಗಳು ಮುಖ್ಯವಲ್ಲ. ಬೇರೊಂದು ಮಾದರಿಯಿಂದ ಹೇಳಬೇಕೆಂದರೆ – ನಮಗೆ ವ್ಯಾವಹಾರಿಕವಾಗಿಯೂ ಭಾಷೆಯ ಬಹುತ್ವವು ಅಗತ್ಯವಿದೆ. ಯಾವುದೇ ರೀತಿಯಲ್ಲಿಯೂ ಕೂಡಾ ನಾವು ಒಂದೇ ರೀತಿ ಮಾತನ್ನು ಆಡುವುದಿಲ್ಲ. ಬೇರೆ ಬೇರೆ ಸಂದರ್ಭಗಳಲ್ಲಿ ನಾವು ಬೇರೆ ಬೇರೆ ಮಾದರಿಯ ಭಾಷೆಗಳನ್ನು ಬಳಸುತ್ತೇವೆ. ಮನೆಯಲ್ಲಿ; ಮಾರುಕಟ್ಟೆಯಲ್ಲಿ; ಸಂಸ್ಥೆಗಳಲ್ಲಿ; ಧಾರ್ಮಿಕ ಆಚರಣೆಗಳಲ್ಲಿ – ಹೀಗೆ ಬೇರೆ ಬೇರೆ ಮಾದರಿಯ ಭಾಷೆಯನ್ನು ಬಳಸುವುದರ ಮುಖಾಂತರ 'ಭಾಷೆಯ ಬಹುತ್ವ'ವನ್ನು ಎತ್ತಿಹಿಡಿಯುತ್ತೇವೆ. ಹಾಗೆಯೇ ಕನ್ನಡದ ಭಾಷೆಯ ಪ್ರಾದೇಶಿಕ ವೈಶಿಷ್ಟ್ಯಗಳು ಬೇರೆ ಬೇರೆ ರೀತಿಯವು. ಧಾರವಾಡದ ಕನ್ನಡ : ಮೈಸೂರು ಕನ್ನಡ; ದಕ್ಷಿಣ ಕನ್ನಡದ ಕನ್ನಡ – ಹೀಗೆ ನಮ್ಮ ಭಾಷೆಯ ಚಹರೆಯು ಬೇರೆ ಬೇರೆ ಮಾದರಿಗಳಲ್ಲಿದೆ. ಜಾಗತಿಕ ಮಾರುಕಟ್ಟೆ; ಅದರಿಂದ ಪ್ರೇರಿತವಾದ ಸಮೂಹ ಮಾಧ್ಯಮಗಳಿಗೆ ವಾಸ್ತವವಾಗಿ ಭಾಷೆಯ ಬಹುತ್ವವು ಬೇಕಾಗಿಲ್ಲ. ಜನಸಾಮಾನ್ಯರ ಆಡುನುಡಿಯ ವ್ಯವಹಾರವು ಅದಕ್ಕೆ ಮುಖ್ಯವಲ್ಲ. ಬೇರೊಂದು ಮಾತಿನಲ್ಲಿ ಹೇಳಬೇಕೆಂದರೆ ಅದು ಜನಸಾಮಾನ್ಯರ ಭಾಷೆಯನ್ನು ತೆಗೆದು ಕೊಳ್ಳುವುದಿಲ್ಲ. ಜಾಗತೀಕರಣದ ಪ್ರಕ್ರಿಯೆಯಲ್ಲಿ ಅದು ಭಾಷೆಯನ್ನು ಹೇರುತ್ತದೆ. ಅದು ಆರ್ಥಿಕ ಮತ್ತು ಸಾಮಾಜಿಕ ಯಜಮಾನಿಕೆಯನ್ನು ವಹಿಸುವುದರಿಂದ ಉಳಿದುದು ಅದಕ್ಕೆ ಅಷ್ಟು ಮುಖ್ಯವಲ್ಲ. ಭಾಷೆಯನ್ನು ಅದು ಏಕರೂಪಾತ್ಮಕಗೊಳಿಸುತ್ತದೆ. ಸಂವಹನ ಮಾಧ್ಯಮಗಳ ಭಾಷೆಯು ಜನಸಾಮಾನ್ಯರ ಮೇಲೆ ಬೀರುವ ಪ್ರಭಾವದ ದೆಸೆಯಿಂದ ಸಹಜವಾಗಿಯೇ ಪ್ರಾದೇಶಿಕ ಭಾಷೆಗಳು ಗೈರು ಹಾಜರಿಯಾಗಬಹುದು. ಇದರ ಪರಿಣಾಮವೆಂದರೆ ಭಾಷೆಯು ಏಕಮುಖಿ ತರ್ಕದಲ್ಲಿಯೇ ಕೆಲಸ ಮಾಡುವುದು. ಇದೊಂದು ಸಾಮಾಜಿಕ; ಸಾಂಸ್ಕೃತಿಕ ಮತ್ತು ಮಾನವೀಯ ಸಂಬಂಧದ ಮೇಲೆ ನಡೆಯುವ ಅದೃಶ್ಯ ರೂಪದ ದಬ್ಬಾಳಿಕೆ. ಜಾಗತೀಕರಣವು ಈ ಮೂಲಕ ಒಂದೇ ಭಾಷೆಯ ತರ್ಕದೊಳಗೆ ಬರುವುದು ಅಪಾಯವೇ ಸರಿ. ಇದರ ಇನ್ನೊಂದು ಪರಿಣಾಮವೆಂದರೆ – ಮನುಷ್ಯ ಸಂಬಂಧಗಳ ನಡುವೆ ಉಂಟಾಗುವ ಬಿರುಕು. ಸಾಹಿತ್ಯ ಅಂತಿಮವಾಗಿ ನಿರ್ವಹಿಸಬೇಕಾದುದು ಮಾನವೀಯ ಸಂಬಂಧಗಳನ್ನೇ. ಆದರೆ ಸಾಹಿತ್ಯ ಯಾವ ಮೂಲಕದಿಂದ ಹೊರಡುವುದೋ ಅದಕ್ಕೆ ಜಾಗತೀಕರಣವು ಧಕ್ಕೆಯನ್ನು ತರುತ್ತದೆ. ಒಂದೆಡೆಯಿಂದ ಪ್ರಾದೇಶಿಕ ಭಾಷೆಗಳ ನಾಶ ಮತ್ತೊಂದೆಡೆಯಿಂದ ಮನುಷ್ಯರ ನಡುವಣ ಸಂಬಂಧಗಳ ನಾಶ. ಇವೆರಡೂ ವಾಸ್ತವವಾಗಿ ಘೋರ ಪರಿಣಾಮಗಳೇ. ಸರಿಯೋ, ತಪ್ಪೋ, ಅವುಗಳ ಮೌಲ್ಯನಿರ್ಣಯ ಬೇರೆ ಪ್ರಶ್ನೆ – ಆದರೆ ಈ ತನಕ ನಮ್ಮ ಕನ್ನಡ ಸಾಹಿತ್ಯವು ಸಾಮಾಜಿಕ ಸಂಬಂಧಗಳನ್ನು ಬೇರೆ ಬೇರೆ ನಿಟ್ಟಿನಲ್ಲಿ ನಿರ್ವಚಿಸಿದೆ. ಆದರೆ, ಜಾಗತೀಕರಣದ ಪರಿಣಾಮವೆಂದರೆ – ಈ ಮಾದರಿಯ ಸಾವಯವ ಸಾಮಾಜಿಕ ಸಂಬಂಧಗಳೇ ಸಾಧ್ಯವಾಗದ ಸ್ಥಿತಿ. ಬಂಡವಾಳವಾದಿ ಪ್ರಕ್ರಿಯೆಯಿಂದ ಆಗುವ ಪರಿಣಾಮ ವೆಂದರೆ, ಒಂದು ಪರಕೀಯವಾದ ಸ್ಥಿತಿ. ಪರಕೀಯತೆ ಮತ್ತು ವ್ಯಕ್ತಿವಾದದಿಂದ ಹುಟ್ಟುವ ಸಾಹಿತ್ಯವು ಅಂತಿಮವಾಗಿ ವ್ಯಕ್ತಿವಾದಿ ಸಮಸ್ಯೆಯನ್ನೇ ಎತ್ತಿಹಿಡಿಯುತ್ತದೆ. ಜಾಗತೀ ಕರಣದಿಂದ ಆಗಬಹುದಾದ ಪರಿಣಾಮವಿದು.

ಜಾಗತೀಕರಣದಿಂದ ಯುದ್ಧವಿಲ್ಲದ ಜಗತ್ತು ಬರ ಬಹುದು ಎಂದು ಸುಳ್ಳಾಗಿಯೇ ಪ್ರಚಾರ ಮಾಡಲಾಗುತ್ತಿದೆ. ರಾಷ್ಟ್ರೀಯತೆಯೆಂಬುದು ತಾತ್ಕಾಲಿಕ ಅಗತ್ಯವಾಗಿದೆ ಎಂಬ ಮಾರ್ಕ್ಸ್‌ವಾದಿ ನಿಲುವಿಗೆ ವಿರೋಧವಾಗಿ ಜಾಗತೀಕರಣ ವಾದಿಗಳು ಅದೇ ಪರಿಭಾಷೆಯನ್ನು ಕುಚೋದ್ಯಕ್ಕಾಗಿ ಬಳಸಿದ ಮಾತಿದು. ವಾಸ್ತವವಾಗಿ ಹಾಗಲ್ಲ. ರಾಷ್ಟ್ರೀಯ ಪ್ರಭುತ್ವವು ಒಂದು ಗಡಿರೇಖೆಯನ್ನು ಇಟ್ಟುಕೊಂಡಿರುತ್ತದೆ. ಮತ್ತು ಆ ಹಿತಕ್ಕೆ ಧಕ್ಕೆ ಬಂದರೆ ಯುದ್ಧವಾಗುತ್ತದೆ ಎಂಬುದೇ ಸುಳ್ಳು ಎಂಬುದನ್ನು ಈಗಾಗಲೇ ಚರಿತ್ರೆಯು ಹೇಳಿದೆ. ಎರಡನೆಯ ದಾಗಿ, ಜಾಗತೀಕರಣವು ನೇರ ಯುದ್ಧಕ್ಕಿಂತ ಪರೋಕ್ಷ ಯುದ್ಧವನ್ನು ಸಾರುತ್ತದೆ. ಯುದ್ಧದ ಪರಿಣಾಮವಂತೂ ಆಗುವುದು ಜನಸಾಮಾನ್ಯರ ಮೇಲೆಯೇ. ನಮ್ಮಲ್ಲಿಯೇ ನೋಡಿ : ವಿಶ್ವ ವ್ಯಾಪಾರ ಸಂಸ್ಥೆಯಿಂದ ಆಗಿರುವುದೇನು ? ರೈತರ ಬೆಳೆಗೆ ಬೆಲೆಯಿಲ್ಲ. ಕೊಳ್ಳುವ ಸಾಮಾಗ್ರಿಗಳ ದುಬಾರಿ ಬೆಲೆ. ಇದರಿಂದ ರೈತರು ಆತ್ಮಹತ್ಯೆಗೆ ಶರಣಾದರು. ಹೀಗಾಗಿಯೇ ಅಂತರರಾಷ್ಟ್ರೀಯ ವ್ಯಾಪಾರದ ಒಪ್ಪಂದದಿಂದ – ಪರೋಕ್ಷವಾಗಿ ಬಡವರು ಮತ್ತಷ್ಟು ಪಾತಾಳಕ್ಕಿಳಿದರು. ಈ ಮಾದರಿಯ ಪರೋಕ್ಷ ಯುದ್ಧದ ಪರಿಣಾಮವೂ ಘೋರವಾದುದೇ ಸರಿ.

ಉದಾರೀಕರಣವು ತಕ್ಷಣವೇ ತಿಳಿಯದ ಹಾಗೆ ಪ್ರವೇಶಿಸಿದ ಒಂದು ಆರ್ಥಿಕ ಪ್ರಕ್ರಿಯೆ. ಮತ್ತು ಈ ಉದಾರೀ ಕರಣವು ಪರೋಕ್ಷ ಹಿಂಸೆಯನ್ನು ನಂಬಿದೆ. ಹಾಗೂ ಜಾಗತೀಕರಣದಿಂದ ಈಗಾಗಲೇ ಸಾಮಾಜಿಕ ಅಂಚಿನಲ್ಲಿ ಇರುವ ಮನುಷ್ಯರು ಇನ್ನಷ್ಟು ಅಂಚಿಗೆ ಹೋಗುತ್ತಾರೆ. ಕೆಲವೇ ಜನ ಬಂಡವಾಳಶಾಹಿಗಳು ಜಗತ್ತನ್ನು ಹಿಡಿತದಲ್ಲಿ ಇರಿಸಿ ಕೊಳ್ಳುತ್ತಾರೆ. ಪ್ರಧಾನ ವಾಹಿನಿಯಲ್ಲಿ ಯಾವುದೇ ನಿರ್ಧಾರಾ ತ್ಮಕ ವಿಷಯಗಳಲ್ಲಿ ಪ್ರಧಾನ ಪಾತ್ರ ವಹಿಸದಿರುವ ಸಣ್ಣ ಹಿಡುವಳಿದಾರರು, ಕೆಳವರ್ಗದ ಜನರು ಮತ್ತಷ್ಟು ಮೂಲೆಗೆ ತಳ್ಳಲ್ಪಡುವ ಅಪಾಯವಿದೆ. ಬ್ರೆಕ್ಟನ ಒಂದು ಮಾತು ಹೇಳಿ ನಿಲ್ಲಿಸಬಹುದು. "ಬಂಡವಾಳಶಾಹಿ ಜಗತ್ತು ಎನ್ನುವುದು ಅದರಷ್ಟಕ್ಕೆ ಅದು ಕ್ರಾಂತಿಕಾರಕ. ಆದರೆ ಎಂದೂ ಸಮಾಜವಾದಿಯಲ್ಲ."

ಡಾ|| ಕೆ. ಕೇಶವ ಶರ್ಮ
ಕನ್ನಡ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ.
ಜ್ಞಾನ ಸಹ್ಯಾದ್ರಿ - ೫೭೭ ೪೫೧

## ಸಾದರ ಸ್ವೀಕಾರ

**ಪ್ರೇಮ ಜ್ಯೋತಿ** (ಕವನ ಸಂಕಲನ)
ಆರ್. ಎಸ್. ಸುತ
**ಪುಟ : ೬೮** **ಬೆಲೆ ರೂ : ೩೦**
**ಗೋರೆಗಾಂವ್ ಕರ್ನಾಟಕ ಸಂಘ,** ಬಿ/೫-೬
'ಪ್ರೇಮ ಬಿಂದು', ಎಂ. ಜಿ. ರೋಡ್
ಗೋರೆಗಾಂವ್ ಪಶ್ಚಿಮ, ಮುಂಬಯಿ-೪೦೦ ೦೬೨

**ಲಯ** (ಕವನ ಸಂಕಲನ)
ಜ. ನಾ. ತೇಜಶ್ರೀ
**ಪು : ೬೮** **ಬೆಲೆ ರೂ : ೪೫**
**ಮಾನವ ಪ್ರಕಾಶನ,** ನಂ. ೨೦೬೪/ಎ, 'ಮಾನವ'
ಉತ್ತರ ಬಡಾವಣೆ, ಹಾಸನ - ೫೭೩ ೨೦೧

**ಸೂರ್ಯ – ಪ್ರೀತಿ** (ಇಪ್ಪತ್ತೈದು ಭಾವಗಳು)
ಬಂದಗದ್ದೆ ರಾಧಾಕೃಷ್ಣ
**ಪುಟ : ೩೬** **ಬೆಲೆ ರೂ : ೨೦**
**ಪುಸ್ತಕ ಹೊಂಬಾಳೆ,** ಕೆಳದಿ - ೫೭೭ ೪೦೧
ಸಾಗರ, ಶಿವಮೊಗ್ಗ ಜಿಲ್ಲೆ

**ವ್ಯಕ್ತಿತ್ವ ವಿಕಾಸಕ್ಕಾಗಿ ಸಕಾರಾತ್ಮಕ ಸೂತ್ರಗಳು**
(ಲೇಖನಗಳು) ಎನ್. ವಿಶ್ವರೂಪಾಚಾರ್
**ಪುಟ : ೪೮** **ಬೆಲೆ ರೂ : ೨೫**

**ನಿಮ್ಮ ವಿಶ್ರಾಂತಿ ನಿಮ್ಮ ಆರೋಗ್ಯ** (ಲೇಖನಗಳು)
ಎನ್. ವಿಶ್ವರೂಪಾಚಾರ್
**ಪುಟ : ೪೦** **ಬೆಲೆ ರೂ : ೧೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ವಿಶ್ವರೂಪ ಪ್ರಕಾಶನ,** ಬಿಲ್ಡಿಂಗ್ ನಂ. ೧೬೮
೨ನೇ ಮಹಡಿ, ಕೆ.ಹೆಚ್.ಬಿ. ಕಾಲೋನಿ
ಕೆಂಗೇರಿ ಉಪನಗರ, ಬೆಂಗಳೂರು - ೫೬೦ ೦೬೦



# ಕುರ್ತಕೋಟಿ : ಎರಡು ಸ್ವರ

೧೯೫೭ರಲ್ಲೋ ೫೮ರಲ್ಲೋ ಇರಬೇಕು. ಕುರ್ತಕೋಟಿ ಮೈಸೂರಿಗೆ ಬಂದರು. ಭೇಟಿಯಾಗುವ ತವಕ. ಆ ವೇಳೆಗಾಗಲೇ ಅವರ ಬಗ್ಗೆ ಬಹಳಷ್ಟು ಕೇಳಿದ್ದೆವು. ಮಹಾ ಪ್ರತಿಭಾವಂತ. ಅದ್ಭುತ ಜ್ಞಾಪಕ ಶಕ್ತಿ. ಇಡೀ ಕುಮಾರವ್ಯಾಸ ಭಾರತ, ಬೇಂದ್ರೆಯವರ ಕಾವ್ಯ ಅವರ ಬಾಯಲ್ಲಿ. ಒಮ್ಮೆ ಓದಿದರೆ ಸಾಕು, ಓದಿದ್ದು ಆತನ ನೆನಪಿನಲ್ಲಿ ಉಳಿದುಬಿಡುತ್ತದೆ, ಇತ್ಯಾದಿ. ಅದು ಮಾತುಗಾರಿಕೆಗೆ ಸಾಹಿತ್ಯ ವಶವಾಗಿದ್ದ ಕಾಲದ ಪ್ರಾರಂಭ.

ಅಂದು ಭಾನುವಾರ. ಕುರ್ತಕೋಟಿ ಮಹಾರಾಜ ಕಾಲೇಜಿನ ಹಾಸ್ಟೆಲಿನಲ್ಲಿ ಇದ್ದ ಅನಂತಮೂರ್ತಿಯ ಕೊಠಡಿಗೆ ಬಂದರು. ಕವಳ ಜಗಿಯುತ್ತ, ಬಾಯೆಲ್ಲ ಕೆಂಪಾಗಿಸಿಕೊಂಡು ಬಂದ ಕೀರ್ತಿನಾಥ, ಯಾವಾಗಲೂ ಸಿಗರೇಟು ಸೇದುತ್ತ ಓಡಾಡುತ್ತಿದ್ದ ನಮಗೆ ಸ್ವಲ್ಪ ವಿಚಿತ್ರವಾಗಿ ಕಂಡರು. ಹೆಗಲಿಗೊಂದು ಉದ್ದನೆಯ ಜೋಳಿಗೆ. ಬಾಯಲ್ಲಿ ಕವಳ, ನಗಲೋ ಬೇಡವೋ, ನಕ್ಕರೆಲ್ಲಿ ಕವಳದ ಕೆಂಪು ರಸ ಹರಿದೀತೋ ಎಂಬ ಸ್ವಮನಸ್ಕತೆ. ಪರಸ್ಪರ ಪರಿಚಯವಾದ ಮೇಲೆ ಹಾಸ್ಟೆಲಿನ ಒಂದು ಮೂಲೆಯಲ್ಲಿದ್ದ ಹುಲ್ಲುಹಾಸಿನ ಮೇಲೆ ಆರಾಮ ಕುಳಿತೆವು. ಕುರ್ತಕೋಟಿ ಜೋಳಿಗೆಯಲ್ಲಿದ್ದ ಕವಳದ ಡಬ್ಬ ತೆಗೆದಿಟ್ಟರು. ಡಬ್ಬದಲ್ಲಿ ಎಲೆ, ಸುಣ್ಣ ಹೊಗೆಸೊಪ್ಪು, ಹಸಿಯಡಿಕೆ. ಎದ್ದು ನಾಲ್ಕು ಹೆಜ್ಜೆ ಹೋಗಿ ಕವಳ ತುಪ್ಪಿ ಬಂದು ಕುಳಿತರು. ಹಸಿಯಡಿಕೆಗೂ ಬೇಯಿಸಿದ ಅಡಿಕೆಗೂ ಇರುವ ವ್ಯತ್ಯಾಸದಿಂದ ಮೊದಲಾದ ಮಾತು ಎತ್ತೆತ್ತಲೋ ಹರಿದು ಸಾಹಿತ್ಯಕ್ಕೆ ಬಂತು. ಕುಮಾರವ್ಯಾಸ ಭಾರತದ ಪದ್ಯಗಳು ಅವರ ಬಾಯಿಂದ ನಿರರ್ಗಳವಾಗಿ ಬರತೊಡಗಿತು. ನಡು ನಡುವೆ ವ್ಯಾಖ್ಯಾನ, ಕಂಡ ಹೊಳಹುಗಳು, ಪಡೆದ ತಿಳಿವು. ನಂತರ ಬೇಂದ್ರೆ. ಬೇಂದ್ರೆಯವರ 'ಜೋಗಿ' ಕವನದಂತಹ ಕವಿತೆಗಳನ್ನು ವ್ಯಾಖ್ಯಾನಿಸುತ್ತ, ಅದರಲ್ಲಿನ ಹೊಳಹುಗಳನ್ನೂ ಒಳಸುಳಿಗಳನ್ನೂ ಹೆಕ್ಕಿ ತೆಗೆಯುತ್ತಿದ್ದ, ಆಗೀಗ ತುಪ್ಪಿ ಬಂದು ಮಾತು ಮುಂದುವರಿಸುತ್ತಿದ್ದ ಕೀರ್ತಿಯವರ ರೀತಿ ಅನನ್ಯ. ಅನುಮಾನಕ್ಕೆ ಎಡೆಯೇ ಇಲ್ಲವೆಂಬಂತಹ ಅವರ ಖಚಿತತೆ ಆಶ್ಚರ್ಯವುಂಟುಮಾಡುತ್ತಿತ್ತು. ಮಾತಿನಲ್ಲಿ ಎಲ್ಲ ಕವಿಗಳೂ, ಲೇಖಕರೂ ಬಂದು ಹೋದರು. ಪ್ರತಿಯೊಬ್ಬ ಲೇಖಕನ ಬಗ್ಗೆಯೂ ಒಂದಲ್ಲ ಒಂದು ರೀತಿಯ ತೀರ್ಮಾನ; ಒಟ್ಟು ಸಾಹಿತ್ಯದಲ್ಲಿ ಅವನ ಸ್ಥಾನ, ಸಾಹಿತ್ಯ ಚರಿತ್ರಕಾರನ ರೀತಿಯಲ್ಲಿ ಎಲ್ಲವನ್ನು ನೋಡುವ ಇವರ ರೀತಿ, ಒಂದು ಕೃತಿಯನ್ನು ಆಳವಾಗಿ ಅಗೆಯುವ ರೀತಿಯದಲ್ಲ ಎನಿಸಿತು. ಆದರೆ ಅವರು ಕೊಡುತ್ತಿದ್ದ ತೀರ್ಮಾನಗಳನ್ನು ಒಪ್ಪಲು ಸಾಧ್ಯವಾಗದಿದ್ದರೂ ಅವರ ಪ್ರಾಮಾಣಿಕತೆಯನ್ನು ಪ್ರಶ್ನಿಸುವಂತಿರಲಿಲ್ಲ. ಅವರ ನವೋದಯದ ಮನಸ್ಸನ್ನು ಅನಂತಮೂರ್ತಿ ಛೇಡಿಸಿ ಮಾತನಾಡಿದಾಗಲೂ ಅವರು ಸಿಟ್ಟಿಗೇಳಲಿಲ್ಲ. ಶಾಂತವಾಗಿ ಪ್ರತಿಕ್ರಿಯಿಸಿದರು. ವಿಷಯದಿಂದ ವಿಷಯಕ್ಕೆ, ಕನ್ನಡ, ಸಂಸ್ಕೃತ ಮತ್ತು ಇಂಗ್ಲಿಷ್ ಸಾಹಿತ್ಯಗಳಿಂದ ಅವರು ಚರಣಗಳನ್ನು ಉದ್ಧರಿಸುತ್ತಿದ್ದ ರೀತಿ, ಬುದ್ಧಿಯ ಏಕಾಗ್ರ ವೃತ್ತಿಗಿಂತ ವ್ಯಾಪಕವೃತ್ತಿ ಇವರ ಸ್ವಧರ್ಮ ಎನಿಸುತ್ತಿತ್ತು.

ಯುಗಧರ್ಮ ತನಗೆ ಬೇಕಾದ ಸಾಹಿತ್ಯವನ್ನು ಸೃಷ್ಟಿಸಿಕೊಳ್ಳುತ್ತದೆ, ಎಂದು ನಂಬಿದ್ದ ಅವರು, ನವ್ಯ ಸಾಹಿತ್ಯವನ್ನು ಯುಗಧರ್ಮ ಸಹಜ ಎಂದು ಒಪ್ಪಲು ತಯಾರಿರಲಿಲ್ಲ. ನವ್ಯ ಸಾಹಿತ್ಯದ ಬಗೆ ಮಾತನಾಡುತ್ತಿದ್ದ ಅವರು ಬೇಂದ್ರೆಯವರ ಮಾತೊಂದನ್ನು ಹೇಳಿದರು : ಇವರೆಲ್ಲ ನವ್ಯ, ನವ್ಯ ಅಂತ ಈಗ ಮಾತಾಡ್ತಾರ, ನಾನು ಐವತ್ತು ವರ್ಷದ ಹಿಂದೆ ನವ್ಯ ಕವಿತಾ ಬರೆದೀನಿ. 'ಬೆಳಗು' ನವ್ಯ ಕವಿತಾ ಅಲ್ಲೇನು, ಆದೊಂದು ಮಿಥುನ ಗೀತೆಯೂ ಹೌದು, ಎಂದರಂತೆ. ನಾವು ಬೆರಗಾಗಿ ಆಲಿಸಿದೆವು. ಕೀರ್ತಿ 'ಬೆಳಗು' ಕವಿತೆಯನ್ನು ಅದು ಎಂತಹ ಒಳ್ಳೆಯ ಮಿಥುನಗೀತೆ ಎಂದು ವಿವರವಾಗಿ ತಿಳಿಸಿದರು. ಮೂಡಲ ಮನೆ, ಗಿಡಗಂಟಿ, ಮೊದಲಾದ ಪದಗುಚ್ಛಗಳ ದೇಸಿ ಅರ್ಥವನ್ನು ತಿಳಿಸಿದರು. 'ಇದು ಬರಿ ಬೆಳಗಲ್ಲೊ ಅಣ್ಣಾ' ಎಂದು ಬೇಂದ್ರೆಯವರನ್ನು ಉಲ್ಲೇಖಿಸುತ್ತ ನಮ್ಮತ್ತ ನೋಡಿ, 'ಇದು ಬರಿ ಬೆರಗಲ್ಲೋ ಅಣ್ಣಾ' ಎಂದು ಕಣ್ಣು ಕಿರಿದಾಗಿಸುತ್ತ ಮುಗುಳು ನಕ್ಕರು. ನಾವೆಲ್ಲಾ ಬಚ್ಚಿಟ್ಟ ನಿಧಿಯೊಂದನ್ನು ಬೇಂದ್ರೆಯವರ ಕಾವ್ಯದಿಂದ ಹೊರತೆಗೆದಂತೆ ಉಲ್ಲಸಿತರಾದೆವು. ಕೀರ್ತಿ, ಆ ಕವನವನ್ನು ವ್ಯಾಖ್ಯಾನಿಸಿದ ರೀತಿ, ಒಬ್ಬ ಉತ್ತಮ ಅಧ್ಯಾಪಕನ ರೀತಿ. ವ್ಯಾಖ್ಯಾನ ಇಂದಿಗೂ ಅಚ್ಚಳಿಯದೆ ನನ್ನ ಮನಸ್ಸಿನಲ್ಲಿ ಉಳಿದಿದೆ.

ಈ ಭೇಟಿಯಾದ ಮೇಲೆ ಬಹಳ ವರ್ಷ ಅವರನ್ನು ನೋಡಿರಲಿಲ್ಲ. ನಂತರ ಅನೇಕ ವಿಚಾರ ಸಂಕಿರಣಗಳಲ್ಲಿ ಭೇಟಿಯಾಗಿದ್ದೇನೆ. ಮಾತು ಔಪಚಾರಿಕ; ಸೆಮಿನಾರಿಗೆ ಸಂಬಂಧಪಟ್ಟ ಮಾತುಕತೆ ಮಾತ್ರ. ಈ ಔಪಚಾರಿಕತೆಯನ್ನು ಮೀರಿದ ವಿಚಾರ ಸಂಕಿರಣವೆಂದರೆ ಅಡಿಗರ ಬಗ್ಗೆ ಎಂ. ಇ. ಎಸ್. ಕಾಲೇಜಿನಲ್ಲಿ ನಡೆದ ಸೆಮಿನಾರು. ನಾನಲ್ಲಿ ''ಅಡಿಗರು - ಒಂದು ಸೃಜನಾತ್ಮಕ ಪ್ರತಿಕ್ರಿಯೆ'' ಎಂಬ ಪ್ರಬಂಧ ಮಂಡಿಸಿದೆ. ಶಿಷ್ಯನಾಗಿದ್ದ ನನ್ನನ್ನು ಅಡಿಗರು ತುಂಬ ಆದರದಿಂದ ನೋಡುತ್ತಿದ್ದರು. ಒಮ್ಮೆ ಅವರ ಮನೆಯಲ್ಲಿ ನಡೆದ ಸತ್ಯನಾರಾಯಣ ಪೂಜೆಗೆ ಆಹ್ವಾನಿಸಿದರು. ಊಟಕ್ಕೆ ಮುಂಚೆ ಅಡಿಗರು ನನ್ನ ಕಾಲು ತೊಳೆಯಲು ಬಂದು ತುಂಬ ಮುಜುಗರ ಉಂಟುಮಾಡಿದರು. ಈ ವಿಷಯವನ್ನು ಸ್ವಲ್ಪ ಭಾವುಕನಾಗಿ ನನ್ನ ಪ್ರಬಂಧದಲ್ಲಿ ಉಲ್ಲೇಖಿಸಿದ್ದೆ. ಪ್ರಬಂಧ ಓದಿಯಾದ ಮೇಲೆ ಆಹ್ವಾನಿತರೊಬ್ಬರು, ಸತ್ಯನಾರಾಯಣ ಪೂಜೆಯಲ್ಲಿ ಅತಿಥಿಯ ಕಾಲು ತೊಳೆಯುವುದು ಸಾಮಾನ್ಯ, ಅದೊಂದು ಪದ್ಧತಿ; ರಾಘವ, ಅದರ ಬಗ್ಗೆ ಅಷ್ಟೊಂದು ಉತ್ಪ್ರೇಕ್ಷಿಸುವ ಅವಶ್ಯಕತೆ ಇರಲಿಲ್ಲ, ಅದರಲ್ಲೇನು ವಿಶೇಷ, ಎಂದೆಲ್ಲ ಮಾತನಾಡತೊಡಗಿದರು. ನಾನು ಅಡಿಗರು ಆಗ ನನಗೆ ಗುರುವಾಗಿದ್ದರು ಎಂದರೂ ಬಿಡಲಿಲ್ಲ. ಕಾಡ ತೊಡಗಿದರು, ಛೇಡಿಸಿದರು. ಮುಂದಿನ ಸಾಲಿನಲ್ಲಿ ಕುಳಿತಿದ್ದ ಕುರ್ತಕೋಟಿಗೆ ತಡೆಯಲಾಗಲಿಲ್ಲ. ಗಟ್ಟಿಯಾಗಿ, ''ನೀವು ಪದ್ಧತಿಯ ಬಗ್ಗೆ ಹೇಳ್ತಿದೀರಿ, ರಾಘವ ಹೇಳಿದ್ದು ಬೇರೆ, ಅದು ಗುರು ಶಿಷ್ಯ ಸಂಬಂಧ'' ಎಂದರು. ನನ್ನನ್ನು ಕಾಡುತ್ತಿದ್ದವರು ಮತ್ತೆ ಮಾತಾಡಲು ಪ್ರಯತ್ನಿಸುತ್ತಿದ್ದಂತೆ, ''ಗುರು-ಶಿಷ್ಯ ಸಂಬಂಧದ ಮೌಲ್ಯಗಳನ್ನು ಕೆದಕಬೇಡ್ರಿ. ಅದನ್ನ ಅಲ್ಲಿಗೆ ಬಿಡಿ'' ಎಂದರು. ಅವರ ಸುತ್ತ ಇದ್ದ ನಾಲ್ಕಾರು ಜನ ಅವರೊಂದಿಗೆ ದನಿ ಕೂಡಿಸಿದರು. ನನ್ನ ಭಾವುಕತೆಯನ್ನು ಅರ್ಥಮಾಡಿಕೊಂಡಿದ್ದ ಕೀರ್ತಿನಾಥ, ನನ್ನತ್ತ ನೋಡಿ ಆಪ್ಯಾಯಮಾನವಾದ ಮುಗುಳನಗೆ ತುಳುಕಿಸಿದರು. ನನಗೆ ತಟ್ಟನೆ ಮನಸ್ಸಿಗೆ ಬಂದದ್ದು ಬೇಂದ್ರೆ-ಕೀರ್ತಿಯವರ ಗುರುಶಿಷ್ಯ ಸಂಬಂಧ. ನನ್ನನ್ನು ಚಕಿತಗೊಳಿಸಿದ್ದು, ಕೀರ್ತಿಯವರು ಚಕ್ಕನೆ ಸೂಕ್ಷ್ಮಗಳನ್ನು ಹಿಡಿಯುವ ರೀತಿ, ನಿಖರ ಗ್ರಹಣ ಶಕ್ತಿ, ಪರಂಪರೆಯ ಬಗೆಗಿನ ಆದರ. ಅವರ ನೆನಪಿನ ಶಕ್ತಿ ತನ್ನ ಮೊನಚು ಕಳೆದುಕೊಳ್ಳುತ್ತಿದ್ದರೂ ಬುದ್ಧಿಯ ಚುರುಕು ಮಾತ್ರ ಅವರಲ್ಲಿ ಕೊನೆಯವರೆಗೂ ಇತ್ತು.

ಕೀರ್ತಿನಾಥ ಕುರ್ತಕೋಟಿ ಇಂದು ಇಲ್ಲ. ಆದರೆ ಅವರ ವ್ಯಕ್ತಿತ್ವದ ಪರಾಕಾಷ್ಠೆ ಇರುವುದು, ನನ್ನ ಮನಸ್ಸಿನಲ್ಲಿ ಇರುವ ಅವರ ಇಂತಹ ಸಜ್ಜನಿಕೆಯ ಸಾಹಿತ್ಯ ನಿಷ್ಠೆಯ ಪ್ರಜ್ವಲಿಸುವ ನೆನಪಿನ ಕಿಡಿಗಳಲ್ಲಿ; ಶುಷ್ಕ ಬರವಣಿಗೆಯಲ್ಲಿ ಅಲ್ಲ.

ಟಿ. ಜಿ. ರಾಘವ
೮೮೩, ಡಿ - ಬ್ಲಾಕ್, ಸಹಕಾರನಗರ, ಬೆಂಗಳೂರು - ೫೬೦ ೦೯೨

# ಚಲಂ ಎಂಬ ಅಪರೂಪದ ವ್ಯಕ್ತಿ

**ಚಲಂರು ಬದುಕನ್ನು ತುಂಬಾನೆ ಪ್ರೀತಿಸುತ್ತಿದ್ದರು. ಪ್ರತಿ ಕ್ಷಣವನ್ನು ಹಸಿದವರಂತೆ ಅನುಭವಿಸುತ್ತಿದ್ದರು. ನದಿಯಲ್ಲಿ ಈಜಾಡುವ, ತೆಪ್ಪ ಕಟ್ಟಿಕೊಂಡು ಮೀನು ಹಿಡಿಯಲು ಹೋಗುವ, ಗೋದಾವರಿಯ ಆ ತೀರಕ್ಕೆ ಹೋಗಿ ಮಕ್ಕಳೊಂದಿಗೆ ಮನದಣಿಯೇ ಆಟವಾಡುವ, ಅಡವಿ ಮಧ್ಯೆಯಿದ್ದ ಒಂಟಿ ಗುಡಿಸಲಿನಲ್ಲಿ ಮಿತ್ರರನ್ನು ಕಲೆಹಾಕಿಕೊಂಡು ರಾತ್ರಿ ಪೂರ್ತಿ ಚರ್ಚಿಸುವ, ಮುಳುಗೋ ಸೂರ್ಯ, ಬೆಳಗೋ ಚಂದ್ರರನ್ನು ಕೂಡ ಮುಗ್ಧ ಮಗುವಿನಂತೆ ನೋಡುತ್ತ ಕೂತುಬಿಡುವ.....**

✧ ಚಿದಾನಂದ ಸಾಲಿ ✧

**ಚ**ಲಂ ಎಂಬ ಹೆಸರು ತೆಲುಗರಿಗೆ ಒಮ್ಮೆಗೆ ಒಬ್ಬ ವಿಕ್ಷಿಪ್ತ ವ್ಯಕ್ತಿತ್ವದ, ಅಗಾಧ ಜೀವನ ಪ್ರೀತಿಯ ವಿಚಿತ್ರ ವ್ಯಕ್ತಿಯನ್ನು ಹಾಗೂ ಆಂಧ್ರಸಾರಸ್ವತ ಲೋಕ ಕಂಡ ಒಬ್ಬ ಅದ್ಭುತ ಬರಹಗಾರನನ್ನು ನೆನಪಿಗೆ ತಂದುಕೊಡುತ್ತದೆ. ಇವತ್ತಿಗೂ ತೆಲುಗು ಸಾಹಿತ್ಯ ಓದಿಕೊಂಡ ಸಹೃದಯರಲ್ಲಿ ಶ್ರೀಶ್ರೀ, ಸಿನಾರೆ, ವಿಶ್ವನಾಥ ಸತ್ಯನಾರಾಯಣ ಮತ್ತು ದೇವರಕೊಂಡ ಬಾಲಗಂಗಾಧರ ತಿಲಕ್ ಇವರುಗಳಿಗೆ ಯಾವ ಸ್ಥಾನವಿದೆಯೋ ಅದಕ್ಕಿಂತ ಹೆಚ್ಚಿನ ಮತ್ತು ಮಹತ್ವದ ಸ್ಥಾನ ಚಲಂರಿಗಿದೆ ಎಂಬುದರಲ್ಲಿ ಅನುಮಾನವೇ ಇಲ್ಲ. ಏಕೆಂದರೆ, ಚಲಂರಲ್ಲಿ ಒಬ್ಬ ಅಪರೂಪದ ಕವಿಯಿದ್ದ, ನಿಂತಲ್ಲಿ ನಿಲ್ಲದ ಚಂಚಲನಿದ್ದ, ಅದ್ಭುತವೆನಿಸುವಂಥ ಗದ್ಯ ಲೇಖಕನಿದ್ದ. ಎಲ್ಲಕ್ಕೂ ಮಿಗಿಲಾಗಿ ಜೀವನದ ಪ್ರತಿಕ್ಷಣವನ್ನು ರಸ ಹೀರಿ ಬದುಕಬೇಕೆಂಬ ಮಹತ್ವಾಕಾಂಕ್ಷೆಯ, ಅನನ್ಯ ಜೀವನ ಪ್ರೀತಿಯ ಒಬ್ಬ ಸಾದಾ ಸೀದಾ ಮನುಷ್ಯನಿದ್ದ ಮತ್ತು ಚಲಂರ ಬರಹಗಳಲ್ಲಿ ಕಾಣಸಿಗುವ ಆಶ್ಚರ್ಯದ ನೋಟವಿದೆಯಲ್ಲ ಅದು ಅವರೊಬ್ಬ ಸಾದಾ ಸೀದಾ ಮನುಷ್ಯರಾಗಿದ್ದರಿಂದಲೇ ಕಾಣಿಸುತ್ತಿತ್ತು ಕೂಡಾ.

ಇಡೀ ಭಾರತೀಯ ಸಾಹಿತ್ಯದಲ್ಲಿ ಚಲಂರ ಬರಹಗಳಿಗೊಂದು ವಿಶಿಷ್ಟ ಸ್ಥಾನವಿದೆ. ಬದುಕನ್ನು ಅನುಕ್ಷಣವೂ ಪ್ರೀತಿಸುತ್ತ, ಅನುಭವಿಸುತ್ತ ಮುಖ್ಯವಾಗಿ ಬದುಕುತ್ತ ಸಾಗಿದ ವೈಕಂ ಮಹಮ್ಮದ್ ಬಷೀರ್‌ರ ಹೆಜ್ಜೆಯ ಜಾಡಿನಲ್ಲೇ ನಡೆದುಹೋದ ಮತ್ತೊಬ್ಬ ಲೇಖಕರೆಂದರೆ ಅದು ನಿಸ್ಸಂಶಯವಾಗಿಯೂ ಚಲಂರೇ. ಅವರಿಬ್ಬರ ಬರಹ ಮತ್ತು ಬದುಕುಗಳಲ್ಲಿ ಆ ಮಾತ್ರದ ಹೋಲಿಕೆಗಳು ಎಲ್ಲೆಲ್ಲೂ ಕಾಣಸಿಗುತ್ತವೆ, ಹೇರಳವಾಗಿ.

ಚಲಂರ ಬದುಕೇ ಒಂದು ಸುಂದರ ಕಾವ್ಯ. ಅಲ್ಲಿ ಅಮಾವಾಸ್ಯೆಯ ಕತ್ತಲಿಗೂ, ಅಮಾಯಕ ಮಗುವಿನ ಬೆತ್ತಲೆಗೂ ಕೂಡ ಅವುಗಳದೇ ಆದ ಸೌಂದರ್ಯವಿದೆ. ಅವುಗಳನ್ನು ತಮ್ಮ ಆತ್ಮಚರಿತ್ರೆಯಲ್ಲಿ ದಾಖಲಿಸುವ ರೀತಿಯಾದರೂ ಎಂಥದಂತೀರಿ ? ಅದನ್ನು ಮಾತ್ರ ಓದಿಯೇ ಅನುಭವಿಸಬೇಕು. 'ಮೆಲ್ಲುವನೇ ಬಲ್ಲ ಬೆಲ್ಲದ ಸಿಹಿಯ' ಎಂಬಂತೆ ಚಲಂರ ಬರಹಗಳ ಸೊಗಸನ್ನು ಓದಿ ಅರಿತ ಸಹೃದಯನಲ್ಲದೆ ಮತ್ತ್ಯಾರು ಬಲ್ಲರು ? ಅದನ್ನು, ಅದರ ಸಾರಸಂಗ್ರಹವನ್ನು ಶಬ್ದಗಳಲ್ಲಿ ಹಿಡಿದಿಡುವುದಾದರೂ ಏನು ಸುಮ್ಮನೇ ಮಾತೇ ? ಅದು ಸಂಗೀತವನ್ನು ಕಂಠದಲ್ಲಿ ಕೂಡಿಹಾಕುತ್ತೇನೆಂಬ ಅಹಮಿಕೆಯ ಮಾತಾದೀತಷ್ಟೇ.

ಹೌದು. ಚಲಂರ ಬರಹಗಳಲ್ಲೊಂದು ಸಂಗೀತವಿತ್ತು. ಅದನ್ನು ಓದುತ್ತ ಕೂತವರು ಓದುತ್ತ ಓದುತ್ತ ಒಂದಾಗಬೇಕು. ಅಲ್ಲಿ ಓದುಗ ಮತ್ತು ಬರಹಗಾರ ಎಂಬ ಭೇದವೇ ಇಲ್ಲ. ಪಕ್ಕದ ಮನೆಯ ಅರೆತೆರೆದ ಕಿಟಕಿಯಿಂದ ಕೇಳಿಬರುವ ಮೆಲುದನಿಯ ಸುಮಧುರ ಸಂಗೀತಕ್ಕೆ, ಈ ಮನೆಯಲ್ಲಿರುವವನ ಮನಸ್ಸು ಮೋದಗೊಂಡು ಇಡೀ ದೇಹವನ್ನು ಕಿವಿಯಾಗಿಸಿಕೊಂಡು ಕೂತು ಸಂಭ್ರಮಿಸುವುದಿಲ್ಲವೇ ? ಥೇಟು ಹಾಗೆ – ಚಲಂರನ್ನು ಓದುವುದೆಂದರೆ. ಚಲಂರ ಬರಹಗಳಿಗೆ ನಿರ್ದಿಷ್ಟ ಗುರಿಯಿಲ್ಲ. ಗುರುವಂತೂ ಮೊದಲೇ ಇಲ್ಲ. ಅದೊಂದು ಮುಕ್ತ ಹರಟೆಯಂತೆ. ಅದರ ಓಘ ಎತ್ತವೂ ಹರಿದೀತು. ಹಾಗೆ ಅಂತಿಲ್ಲ. ಸೂತ್ರ ಹರಿದ ಗಾಳಿಪಟ ಸೂತ್ರವಿದ್ದಾಗಿನಕಿಂತ ಚೆಂದವಾಗಿ ಬಳುಕುತ್ತ ಹೀಗೆ ಹೀಗೆ ಬೀಳುತ್ತ ಬರುತ್ತಿರಬೇಕಾದರೆ ಅದು ಇಲ್ಲೇ ಬಿದ್ದೀತೆಂದು ಯಾವ ತಾನೆ ಹೇಳಬಲ್ಲ? ಖುದ್ದು ಅದನ್ನು ಕೈಹಿಡಿದು ಕರೆದುಕೊಂಡು ಬರುತ್ತಿರುವ ಗಾಳಿಗೂ ಗೊತ್ತಿರುವುದಿಲ್ಲ ಅಲ್ಲವೇ? – ಹಾಗೆ, ಚಲಂರ ಕಲಮಿನಿಂದ ಮೂಡಿಬಂದ ಸಾಹಿತ್ಯವಿರುತ್ತೆ.

ಅಷ್ಟಿಲ್ಲದೆ ಒಂದು ಕಾಲದಲ್ಲಿ ತೆಲುಗರೆಲ್ಲ ಚಲಂರ ಒಂದೊಂದು ಕಥೆಗಾಗಿ ಆ ಪರಿ ಚಡಪಡಿಸುತ್ತಿದ್ದರಾ ಮತ್ತೆ? ಮೊದಮೊದಲು ಚಲಂರು ಬರಹ ಪ್ರಾರಂಭಿಸಿದಾಗ ಗುತ್ತಿಗೆ ಸಾಹಿತಿಗಳ ಪರವಹಿಸಿದ್ದ ಪತ್ರಿಕಾ ಸಂಪಾದಕರು ಕೂಡ ಕೊನೆಕೊನೆಗೆ ತಮ್ಮ ವಿಶೇಷಾಂಕಗಳಿಗಾಗಿ ಹೇಗಾದರೂ ಮಾಡಿ ಒಂದು ಕಥೆ ಗಿಟ್ಟಿಸಿಕೊಳ್ಳಬೇಕೆಂದು ಶತಾಯಗತಾಯ ಪ್ರಯತ್ನಿಸುತ್ತಿದ್ದರು. ಚಲಂರ ಭಾಷೆಯ ಮೋಡಿಗೆ ಮುದಗೊಂಡಿದ್ದ ಓದುಗ ಮನಸ್ಸು ಮತ್ತೆ ಮತ್ತೆ ಚಲಂರನ್ನು ಬೇಡುತ್ತಿತ್ತು. ಆ ಬರಹದಲ್ಲಿರುವ ಹರಿವ ನೀರಿನ ಜುಳುಜುಳು ನಿನಾದ, ಕಾಡಿನ ಗವ್ವೆನ್ನುವ ಮೌನ, ತುಂಬಿದ ಮನೆಯ ಸಡಗರ, ಮುಗಿಯದ ಪ್ರೀತಿಯ ಸಂಭ್ರಮ, ಅವಳ ಪ್ರತೀಕ್ಷೆಯಲ್ಲಿನ ಮೋದಗಳಿಗಾಗಿ ಮನಸ್ಸು ಹುರಿಗೊಂಡು ತುದಿಗಾಲ ಮೇಲೆ ನಿಂತು ಕಾಯುತ್ತಿತ್ತು. ಓದುಗ ದೊರೆ ಧಾವಂತಕ್ಕೆ ಬಿದ್ದು ಚಲಂರ ಬರಹಗಳಿಗಾಗಿ ಚಡಪಡಿಸುತ್ತಿದ್ದ. ಏಕೆಂದರೆ ಆ ಬರಹಗಳಲ್ಲಿ ಒಂದು ಭಾಷಾ ಸರಳತೆಯಿತ್ತು; ಆದರೆ, ಅದರ ತುಂಬ ತುಂಬಿರುತ್ತಿದ್ದುದು ಮಾತ್ರ ಭಾವ ಶ್ರೀಮಂತಿಕೆಯೇ. ಪ್ರತಿಯೊಂದನ್ನು ತುಂಬು ಶ್ರದ್ಧೆಯಿಂದ, ಅದಮ್ಯ ಪ್ರೀತಿಯಿಂದ ಮಾಡುವ ಮನಸ್ಸೊಂದು ಅಲ್ಲಿ ಮೌಜೂದಾಗಿರುತ್ತಿತ್ತು. ಚಲಂರು ಬರಹವನ್ನು ಎಷ್ಟು ಪ್ರೀತಿಸುತ್ತಿದ್ದರೋ ಬದುಕನ್ನೂ ಅಷ್ಟೇ ಪ್ರೀತಿಸುತ್ತಿದ್ದರು. ಮೂಲತಃ ಕಥೆಗಾರರಾಗಿದ್ದರಿಂದ ಕಥೆಯನ್ನು ಮಾತ್ರವೇ ಸಾಹಿತ್ಯವೆಂದು ಪರಿಗಣಿಸಿ ಅದನ್ನು ಮಾತ್ರ ತುಂಬು ಶ್ರದ್ಧೆಯಿಂದ ಬರೆಯಲು ಕೂರುವಂಥ ಕೆಲಸ ಚಲಂ ಎಂದೂ ಮಾಡಲಿಲ್ಲ. ಅವರಿಗೆ ಪತ್ರ ಬರೆಯುವುದು ಕೂಡ ಒಂದು ಸೃಜನಶೀಲ ಹವ್ಯಾಸವೇ ಆಗಿದ್ದು ಅದೂ ಕೂಡ ಅವರ ಪಾಲಿಗೆ ಸಾಹಿತ್ಯ ಸೃಷ್ಟಿಯ ಕ್ರಿಯೆಯೇ ಆಗಿರುತ್ತಿತ್ತು. ಎಷ್ಟರಮಟ್ಟಿಗೆ ಅವರ ಪತ್ರಗಳು ಪ್ರಸಿದ್ಧವಾಗಿದ್ದವೆಂದರೆ ಅವುಗಳನ್ನು ಬರೆಸಿಕೊಂಡ ಯಾವೊಬ್ಬ ಅಡ್ರೆಸ್ಸಿಯೂ ತಮಗೆ ಬಂದ ಒಂದೇ ಒಂದು ಪತ್ರವನ್ನೂ ಬಿಸಾಡುತ್ತಿರಲಿಲ್ಲ. ಹಾಗೆ ಅವರೆಲ್ಲ ಜತನದಿಂದ ಎತ್ತಿಟ್ಟುಕೊಂಡ ಪತ್ರಗಳೆಲ್ಲ ಮುಂದೆ ಒಂಬತ್ತು ಸಂಪುಟಗಳಾಗಿ ಪ್ರಕಟಗೊಂಡವು, ಆ ಮಾತು ಬೇರೆ. ಪತ್ರ ಕೂಡ ಒಂದು ಸಣ್ಣ ಕಥೆಯೇ ಎಂಬುದು ಚಲಂರ ನಿಲುವಾಗಿತ್ತು.

ಪತ್ರಗಳದೊಂದು ಕಥೆಯಾದರೆ ಪ್ರೇಮ ಪತ್ರಗಳದು ಮತ್ತೊಂದು ಕಥೆ. ಚಲಂರು ಪತ್ರಿಕೆಗಳಿಗಾಗಿ ಬರೆದುಕೊಟ್ಟ ಪ್ರೇಮ ಪತ್ರಗಳನ್ನು ಮುಂದೆ 'ಪ್ರೇಮ ಲೇಖಲು' ಎಂಬ ಪುಸ್ತಕವಾಗಿ ಹೊರತರಲಾಯಿತು. ಒಮ್ಮೆ ಗಂಡಾಗಿ, ಮತ್ತೊಮ್ಮೆ ವಿರಹಿ ಹೆಣ್ಣಾಗಿ ಹೀಗೆ ವಿಭಿನ್ನ ವಿಭಿನ್ನ ನೆಲೆಗಳಲ್ಲಿ ನಿಂತು ಪ್ರೇಮವನ್ನು ಕುತೂಹಲದಿಂದ, ಉತ್ಸಾಹದಿಂದ, ಮೆಚ್ಚಿನಿಂದ, ರೊಚ್ಚಿನಿಂದ, ಅಸೂಯೆಯಿಂದ, ಬೆರಗಿನಿಂದ ಕಾಣುತ್ತ ಒಮ್ಮೊಮ್ಮೆಯೂ ಪ್ರೇಮದ ಪರಿಯ ಒಂದೊಂದು ಹೊಸ ಚಿತ್ರಣ ಕಟ್ಟಿಕೊಡುತ್ತ ಸಾಗುವ ಆ ಪತ್ರಗಳು ಭಾವುಕರನ್ನು ಕಟ್ಟಿಹಾಕಿಬಿಡುತ್ತವೆ. ಸ್ವತಃ ಚಲಂ ಕೂಡ ಏನು ಕಮ್ಮಿ ಭಾವುಕರಾಗಿದ್ದರೆ ? ಮೂರು ವರ್ಷದ ಮಗಳನ್ನು ಕೂರಿಸಿಕೊಂಡು, ಅವಳು ಬರುವುದಿಲ್ಲವೆಂದು ಗೊತ್ತಿದ್ದೂ, ಸರಿರಾತ್ರಿಯವರೆಗೆ ಅವಳ ಬರುವಿಕೆಗಾಗಿ ಕಾಯುತ್ತ ರೈಲ್ವೆ ಸ್ಟೇಷನ್ನಿನಲ್ಲಿ ಕೂತುಬಿಡುತ್ತಿದ್ದ ಪ್ರಸಂಗಗಳು ಅದೆಷ್ಟೋ. ಆಗೆಲ್ಲ ಅವರಿಗೆ ಮಗ ರವಿಯೇ ಗೆಳೆಯ. ಅವನಿಗೆ ತಮ್ಮ ಪ್ರೇಮದ ಕಥೆಯನ್ನು, ಪ್ರತೀಕ್ಷೆಯ ಕಥೆಯನ್ನು ಹೇಳುತ್ತಿದ್ದರು ಚಲಂ. ಎಲ್ಲ ಟ್ರೇನುಗಳೂ ಹೊರಟಾದ ಮೇಲೆ, ಜಾತ್ರೆಗೆ ಹೊರಟ ಹಳ್ಳಿಗ ಹೆಗಲ ಮೇಲೆ ಮಗನನ್ನು ಕೂರಿಸಿಕೊಂಡು ಹೋಗುವಂತೆ, ರವಿಯನ್ನು ಕೂರಿಸಿಕೊಂಡು ಆ ಕಥೆ ಈ ಕಥೆ ಹೇಳುತ್ತ ಅಡವಿಯೊಳಗಿನ ತಮ್ಮ ಏಕಾಂಗಿ ಮನೆಗೆ ಬಂದು ತಲುಪುತ್ತಿದ್ದರು. ಮಗ ರವಿ ಮಾತ್ರ ಅಪ್ಪ ಹೇಳುವ ಪ್ರತಿ ಪ್ರೀತಿಯ ಪ್ರಸಂಗಗಳನ್ನೂ ಆಸ್ಥೆಯಿಂದ ಕೇಳಿಸಿಕೊಳ್ಳುತ್ತಿದ್ದ. ಅವನಿಗೂ ಇದೆಲ್ಲವನ್ನು ತಿಳಿದುಕೊಳ್ಳುವುದು ಅವಶ್ಯವಿತ್ತು. ಏಕೆಂದರೆ ಚಲಂ ಸ್ಟೇಷನ್ನಿನಲ್ಲಿ ಕೂತು ನಿತ್ಯವೂ ಕಾಯುತ್ತಿದ್ದ ಹೆಂಗಸು ಬೇರಾರೂ ಆಗಿರದೆ ಇದೇ ರವಿಯ ತಾಯಿಯಾಗಿದ್ದಳು. ಅಂದರೆ ಚಲಂರ ಹೆಂಡತಿ. ಹೌದು. ತಮಿಳ್ನಾಡಿಗೆ ಹೆಂಡತಿಯನ್ನು ಮೆಡಿಕಲ್ ಓದಲು ಕಳಿಸಿದ ಚಲಂರು ಮತ್ತೊಬ್ಬ

ಹೆಂಡತಿಯೊಂದಿಗೆ ಇಲ್ಲಿ ವಾಸಿಸುತ್ತಲೇ ಮೆಡಿಕಲ್ ಓದಲು ಹೋದ ರಂಗನಾಯಕಮ್ಮನವರಿಗಾಗಿ ಕಾಯುತ್ತಿದ್ದರು. ಇದೆಲ್ಲ ವಿಚಿತ್ರವೆಂದು ರವಿಗೆ ಎಂದೂ ಅನ್ನಿಸಲೇ ಇಲ್ಲ ರವಿಯ ಮಾತು ಬಿಡಿ; ಸ್ವತಃ ಚಲಂರಿಗೇ ಈ ನಿರೀಕ್ಷೆ ಅರ್ಥಹೀನವೆಂದಾಗಲೀ, ಹುಚ್ಚಿನಂಥದು ಎಂದಾಗಲಿ ಎಂದೂ ಅನ್ನಿಸಲೇ ಇಲ್ಲ. ಹಾಗೆ, ನಡುರಾತ್ರಿ, ಕಾಯುವ ಕೆಲಸ ಮುಗಿಸಿಕೊಂಡು ಬಂದು ಮನೆ ಸೇರುತ್ತಿದ್ದರು ಚಲಂ ಎಂದೆನಲ್ಲ, ಆ ಮನೆಯ ಪರಿಕಲ್ಪನೆಯಾದರೂ ಎಷ್ಟು ಸೊಗಸಾದುದೆಂತೀರಿ? ಅವರ ಮನೆ, ಅಡವೀಲಿ ದೂರ, ಒಬ್ಬಂಟಿಯಾಗಿ ನಿಂತ ಪಾಳು ಬಂಗಲೆಯಾಗಿತ್ತು. ಸುತ್ತ ದಟ್ಟ ಕಾಡು. ಕರೆಂಟಿನ ಮಾತೇ ಇಲ್ಲ. ಕಂದೀಲೆ ಬೆಳಕು. ಪಕ್ಕದಲ್ಲೇ ಗೋದಾವರಿ. ಮೇಲೆ ಪರಿಶುಭ್ರ ಆಕಾಶ. ರಾತ್ರಿಯಾದರೆ ವಿಧವಿಧದ ಕಾಡು ಪ್ರಾಣಿಗಳ, ಹೆಸರೂ ಗೊತ್ತಿರದ ವಿಚಿತ್ರ ಪಕ್ಷಿಗಳ ಕೂಗುಗಳ ಮೆರವಣಿಗೆ.

ಬೆಳಗಾದರೆ ಹತ್ತು ಹರದಾರಿ ಕಾಲ್ನಡಿಗೆಯಲ್ಲೇ ಸಾಗಿ ಮೇಷ್ಟರಿಕೆ ಕೆಲಸ. ಹೌದು. ಚಲಂ ಎಲಿಮೆಂಟರಿ ಸ್ಕೂಲಿನ ಮೇಷ್ಟ್ರಾಗಿದ್ದರು. ಮಾಸ್ತರಿಕೆ ಮುಗಿಸಿಕೊಂಡು ಮನೆಗೆ ಬಂದರೆಂದರೆ, ಓದು, ಹೆಂಡತಿ 'ವೊಯ್ಯಿ'ಯೊಂದಿಗೆ ಹರಟೆ, ಮಕ್ಕಳೊಂದಿಗೆ ಆಟ, ಕಥೆ ಹೇಳುವುದು, ಕಥೆ ಬರೆಯುವುದು, ನೆನಪಾದರೆ ಸಾಕು ಗೆಳೆಯರನ್ನು ಹುಡುಕಿಕೊಂಡು ಹೊರಟೇಬಿಡುತ್ತಿದ್ದರು. ಮಕ್ಕಳು ಜೊತೆ ಬರುತ್ತೇನೆಂದರೆ ಎಂದೂ ಬೇಡವೆಂದವರಲ್ಲ ಚಲಂ. ಅಂಥ ಅಪರಾತ್ರಿಯಲ್ಲೂ ಆ ಹುಡುಗರನ್ನು ಜೊತೆ ಮಾಡಿಕೊಂಡು ತಳ್ಳುಗಾಡಿಯಲ್ಲಿ ಕೂರಿಸಿಕೊಂಡು ಕರೆದೊಯ್ಯುತ್ತಿದ್ದರು. ಪಾಳು ಬಂಗಲೆ ಹತ್ತಿರ ಯಾರೋ ಬಿಟ್ಟು ಹೋಗಿದ್ದ ಆ ಕಸ ಹಾಕಿಕೊಂಡು ಹೋಗಲು ಬಳಸುವ ಕಬ್ಬಿಣದ ತುಕ್ಕು ಹಿಡಿದ ತಳ್ಳುಗಾಡಿಯನ್ನು ಅವರು ಬಳಸುತ್ತಿದ್ದುದು ಈ ಕೆಲಸಕ್ಕೆ. ಕೆಲವೊಮ್ಮೆ ಗೆಳೆಯರೂ ಇವರನ್ನು ಹುಡುಕಿಕೊಂಡು ಆ ಅಡವಿಯೊಳಕ್ಕೆ ಬರುತ್ತಿದ್ದುದುಂಟು. ಆಗೆಲ್ಲ ಚಲಂರ ಹೆಂಡತಿ 'ವೊಯ್ಯಿ' ಅವರಿಗೆಲ್ಲ ಅಡುಗೆ ಮಾಡಿ ಹಾಕುವ ಕಾಯಕದಲ್ಲಿ ನಿರತರಾಗುತ್ತಿದ್ದರೆ, ಇವರೆಲ್ಲ 'ಇನ್ನೇನು ನೆಲಕ್ಕೊರಗುತ್ತದೆ' ಎಂಬ ಸ್ಥಿತಿಯಲ್ಲಿದ್ದ ಆ ಪುಟ್ಟ ಗುಡಿಸಲಿನಲ್ಲಿ ಚಿಮಣಿ ದೀಪ ಹಚ್ಚಿಟ್ಟುಕೊಂಡು ಗಂಭೀರ ಚರ್ಚೆಗೆ ಕೂತುಬಿಡುತ್ತಿದ್ದರು. ರಾತ್ರಿ ಬೆಳಗಾನ ಮಾತೋ ಮಾತು. ನಡುನಡುವೆ ಚಹಾ, ಜೋಕು ಇತ್ಯಾದಿ. ಅಂಥ ಸಂದರ್ಭಗಳಲ್ಲಿ ಎಲಿಫೆಂಟ್ ಬ್ರ್ಯಾಂಡ್ ಸಿಗರೇಟುಗಳನ್ನು ಸೇದುತ್ತಿದ್ದುದು ಬಿಟ್ಟರೆ ಚಲಂರಿಗೆ ಸಿಗರೇಟಿನ ಬಗ್ಗೆ ತೀರದ ವ್ಯಾಮೋಹವಾಗಲಿ, ಬಿಡಿಸಿಕೊಳ್ಳಲಾಗದ ಚಟವಾಗಲಿ ಇರಲಿಲ್ಲ. ಆದರೆ ಚಲಂರೊಳಗೊಬ್ಬ ನಿತ್ಯ ತರುಣ ಇದ್ದ. ಚಲಂ ಬದುಕನ್ನು ಅತಿಯಾಗಿ ಪ್ರೀತಿಸಿದ ವ್ಯಕ್ತಿ. ಅವರ ಆತ್ಮಕತೆಯಲ್ಲಿಯೇ ಹೇಳಿಕೊಳ್ಳುವಂತೆ ಕೆಲವೊಮ್ಮೆ ವ್ಯಾಮೋಹಗಳಿಗೆ ಸುಲಭದಲ್ಲಿ ಬಲಿಯಾಗುತ್ತಿದ್ದರಂತೆ.



ಅವರಿಗೆ ಸ್ತ್ರೀಯರ ಬಗ್ಗೆ ಗೌರವವಿತ್ತು. ಅವರ ಬಗ್ಗೆ ಮಾತನಾಡುತ್ತ ಹೋದರೆ ಎಷ್ಟೊಂದು ಆಶ್ಚರ್ಯವಾಗುತ್ತದೆ ಗೊತ್ತಾ? ಅವರು ತಮ್ಮ ಎಲ್ಲ ಬರಹಗಳುದ್ದಕ್ಕೂ ಸ್ತ್ರೀಯನ್ನು ಗೌರವದಿಂದ ಸಂಬೋಧಿಸುತ್ತಾರೆ. ರಂಗನಾಯಕಮ್ಮಗಾರು, ಲೀಲಗಾರು, ವೊಯ್ಯಿಗಾರು ಅಂತಲೇ ಪ್ರತಿ ಸಂದರ್ಭಗಳಲ್ಲೂ ಚಲಂರ ಕಲಮು ಮಾತನಾಡುತ್ತದೆ. ಅಷ್ಟು ಮಾತ್ರದ ಗೌರವವಿರುವುದರಿಂದಲೇ ರಂಗನಾಯಕಮ್ಮನನ್ನು ತಮಿಳುನಾಡಿನಲ್ಲಿ ಏಕಾಂಗಿಯಾಗಿ ಬಿಟ್ಟು ಮೆಡಿಕಲ್ ಓದಿಸಿದರು ಚಲಂ. ಮುಂದೆ ವಿಜಯವಾಡದಲ್ಲಿ ಬಂದು ತಾವು ಮೇಷ್ಟ್ರಾಗಿ, ಹೆಂಡತಿ ಡಾಕ್ಟ್ರಾಗಿ ಕೈ ತುಂಬ ಹಣ ಓಡಾಡಿದಾಗ ಕೂಡ ಚಲಂ ಶ್ರೀಮಂತಿಕೆಯ ಬದುಕನ್ನು ಬಾಳಲೇ ಇಲ್ಲ. ಆಗೆಲ್ಲ ಗಂಡ ಬಿಟ್ಟವರು, ಅತ್ತೆಯೊಂದಿಗೆ ಜಗಳವಾಡಿ ಬಂದವರು, ಗಂಡನ ಮೇಲೆ ಮುನಿಸು ಮಾಡಿಕೊಂಡವರು ಮುಂತಾದ ಇಂಥವರ ಒಂದು ದಂಡಿಗೆ ಅವರ ಮನೆಯ ಮೊಗಸಾಲೆಯೇ ಆಶ್ರಯದಾಣ. ಚಲಂ ಅವರಿಗೆಲ್ಲ ಸ್ತ್ರೀ ಸ್ವಾತಂತ್ರ್ಯದ ಬಗ್ಗೆ, ಪುರುಷನಿಗೆ ಅಗತ್ಯವಾಗಿ ಬೇಕಾಗಿರುವ ಸ್ತ್ರೀ ಗೌರವದ ಬಗ್ಗೆ ತಿಳಿಹೇಳುತ್ತಿದ್ದರು, ಬೋಧಿಸುತ್ತಿದ್ದರು, ಅಪ್ಪಟ ಯೋಗಿಯಂತೆ. ಆ ಹೊತ್ತಿಗಾಗಲೇ ಚಲಂ ಸಾಹಿತ್ಯ ಲೋಕದ ಸ್ಟಾರ್ ಆಗಿ ರೂಪುಗೊಂಡಿದ್ದರಲ್ಲದೆ ಅವರ ಬರಹಗಳು ಸಕಲಾಂಧ್ರ ಓದುಗ ವರ್ಗದ ಮೇಲೆ ಮೋಡಿ ಮಾಡಿಹಾಕಿದ್ದವು. ಆಗಿನ ಇತರೆ ಮಡಿವಂತ ಸಾಹಿತಿಗಳೆಲ್ಲ ಒಂದೆಡೆ ಸೇರಿ ಚಲಂರ ಜನಪ್ರಿಯತೆಯನ್ನು ಸಹಿಸಲಾಗದೆ ಚಡಪಡಿಸಿದ್ದರಲ್ಲದೆ, ಸಂಪ್ರದಾಯ ವಿರೋಧಿ ನಿಲುವುಗಳನ್ನು ತಳೆಯುತ್ತಾ ಬರೆಯುತ್ತ ಬರೆಯುತ್ತ ಈ ಚಲಂ ಸಮಾಜದ ಸ್ವಾಸ್ಥ್ಯವನ್ನು ಹಾಳುಗೆಡವುತ್ತಿದ್ದಾನೆ ಎಂದು ಬೊಬ್ಬೆ ಹೊಡೆಯುತ್ತಿದ್ದರು. ಆದರೆ ಚಲಂ ಮಾತ್ರ ಎಂದೂ ತಮ್ಮ ಓರಗೆಯ ಬರಹಗಾರರ ಅಸೂಯೆ ಬಗ್ಗೆಯಾಗಲಿ, ತಮ್ಮ ಮೇಲಿನ ಓದುಗರ ಪ್ರೀತ್ಯಾಭಿಮಾನಗಳ ಬಗ್ಗೆಯಾಗಲಿ ಅಸಲು ಒಂದೇ ಒಂದು ಮಾತಾಡಲಿಲ್ಲ. ಅವರಿಗಷ್ಟು ಪುರುಸೊತ್ತೂ ಇರಲಿಲ್ಲ. ಸದಾಕಾಲವೂ ಚಿಂತನೆಯಲ್ಲಿ ತೊಡಗಿರುತ್ತಿದ್ದ ಚಲಂ, ಪ್ರೇಮ, ಮಾನವ ಸಂಬಂಧಗಳು, ಲೋಕರೂಢಿ, ಶಿಕ್ಷಣ ವ್ಯವಸ್ಥೆ, ಧರ್ಮ ಎಲ್ಲವುಗಳ ಬಗ್ಗೆ ಬರೆದರು. ಅವರ 'ಬಿಡ್ಡಲ ಶಿಕ್ಷಣ' ಎಂಬ ಪುಸ್ತಕವಂತೂ ಆಂಧ್ರದ ಶಿಕ್ಷಣ ಕ್ಷೇತ್ರದಲ್ಲಿ ಒಂದು ದೊಡ್ಡ ಬಿರುಗಾಳಿಯನ್ನೇ ಎಬ್ಬಿಸಿಬಿಟ್ಟಿತು. ಮಕ್ಕಳಿಗೆ ಈ ನಾಲ್ಕು ಗೋಡೆಗಳ ನಡುವಿನ ಶಿಕ್ಷಣವನ್ನು ಕೊಡಲೇಬಾರದು. ಅಸಲಿಗೆ ಮಗುವಿಗೆ ಶಿಕ್ಷಣವೆಂಬ ಚೌಕಟ್ಟೇ ಇರಬಾರದು. ಅದು ತನ್ನಷ್ಟಕ್ಕೆ ತಾನೆ ಆಡಿಕೊಂಡು, ಹಾಡಿಕೊಂಡು, ಕಲಿಯುತ್ತಾ ಬೆಳೆಯುತ್ತದೆ. ಬಂಧನ ಮತ್ತು ಭಯಗಳ ನಡುವೆ ಯಾವ ಕಲಿಕೆಯೂ ಯಶಸ್ವಿಯಾಗಲಾರದು ಎಂಬುದು ಚಲಂರ ನಿಲುವಾಗಿತ್ತು. ಹೀಗಾಗಿ ಅವರು ತಮ್ಮ ಮಕ್ಕಳನ್ನು ಶಾಲೆಗೆ ಕಳಿಸಲೇ ಇಲ್ಲ. ಸ್ವತಃ ಮೇಷ್ಟ್ರಾಗಿದ್ದರೂ ಚಲಂರಿಗೆ ಶಿಕ್ಷಣ ವ್ಯವಸ್ಥೆಯ ಬಗ್ಗೆ ತೀವ್ರವಾದ ಅಸಮಾಧಾನವಿತ್ತು. ಮಾಸ್ತರಿಕೆ ಬಗ್ಗೆಯಂತೂ ಜುಗುಪ್ಸೆಯಿತ್ತು, ಅಸಹ್ಯವಿತ್ತು, ಒಂದು ರೀತಿಯ ಹೇವರಿಕೆಯಿತ್ತು. ಆತ್ಮಚರಿತ್ರೆಯಲ್ಲಿ ಒಂದು ಕಡೆ ಅವರೇ ದಾಖಲಿಸುತ್ತಾರೆ – ''ಪ್ರೈಮರಿ ಸ್ಕೂಲ್ ಮಾಸ್ತರಿಕೆ ಎಂದರೆ ಕ್ರಿಯಾಶೀಲನೊಬ್ಬನಲ್ಲಿಯ ಎಲ್ಲ ಸೃಜನಶಕ್ತಿಯನ್ನು ತಿಂದು ಹಾಕಿಬಿಡಬಲ್ಲ ಗುಮ್ಮ'' ಎಂದು. ಆದರೆ ಚಲಂ ಮಕ್ಕಳಿಗೆ ಬದುಕುವುದನ್ನು, ಕ್ಷಣಗಳು ಸಾಯುವ ಮೊದಲೇ ಅವುಗಳನ್ನು ಅನುಭವಿಸುವ ಕಲೆಯನ್ನು ಕಲಿಸಿದರು. ಅಡವೀಲಿ ಇರುತ್ತಿದ್ದ ದಿನಗಳಲ್ಲಿ ರಜೆ ಸಿಕ್ಕರೆ ಸಾಕು, ಮಕ್ಕಳನ್ನು ಕರೆದುಕೊಂಡು ತಾವೇ ಕೈಯಾರೆ ತಯಾರಿಸಿದ ಅಡುಗೆಯ ಬುತ್ತಿ ಕಟ್ಟಿಕೊಂಡು, ತಮ್ಮ ಸ್ವಂತ ತೆಪ್ಪದಲ್ಲಿ ಕೂತು ನದಿಯ ಆಚೆ ದಡಕ್ಕೆ ಹೋಗಿಬಿಡುತ್ತಿದ್ದರು. ತೆಪ್ಪ ನೀರಲ್ಲಿ ಮಕ್ಕಳನ್ನು ಕೂರಿಸಿಕೊಂಡು ತೇಲುತ್ತಾ ಹೋಗುತ್ತಿದ್ದರೆ, ಚಲಂ ಅದನ್ನು ತಳ್ಳುತ್ತ ಹಾಡುತ್ತ ಈಜು ಬೀಳುತ್ತಿದ್ದರು ದಡದವರೆಗೆ. ಅಲ್ಲಿ ನಿರ್ಜನ ತೀರದಲ್ಲಿ ಮಕ್ಕಳೊಂದಿಗೆ ಮಕ್ಕಳಾಗಿ ಮರಳಿನಲ್ಲಿ ಮನೆ ಕಟ್ಟಿ, ಹಾಡುವ ಹಕ್ಕಿಗಳನ್ನು ಅಣಕಿಸಿ, ಮೀನು ಹಿಡಿದು ಹುರಿದು ತಿಂದು, ಓಡಾಡಿ, ಆಟವಾಡಿ, ಇನ್ನೇನು ಸೂರ್ಯ ಮುಳುಗೇಬಿಟ್ಟ ಎಂಬಷ್ಟು ಹೊತ್ತಾದಾಗ ದಣಿದ ದೇಹದೊಂದಿಗೆ ಮನೆಗೆ ಮರಳುತ್ತಿದ್ದರು ಚಲಂ. ಕುತೂಹಲದ ಸಂಗತಿ ಎಂದರೆ ಇಂಥ ಒಬ್ಬ, ಯಾವ ಕಟ್ಟುಪಾಡಿಗೂ ಸಿಲುಕದ, ಯಾರ ಅಂಕೆಗೂ ನಿಲುಕದ ಚಲಂ ಎಂಬ ಈ ವಿಕ್ಷಿಪ್ತ ವ್ಯಕ್ತಿ ಕರ್ನಾಟಕದ ಗಡಿಯಲ್ಲಿದ್ದ ತುಂಗಾತೀರದ ಪಂಡಿತ ತಾರಾನಾಥರ ಪ್ರೇಮಾಯತನದ ಹೆಸರು ಕೇಳಿದರೆ ಸಾಕು, ಸಂತೋಷದಿಂದ ಕೇಕೆ ಹಾಕುತ್ತಿದ್ದರು. ಎಲ್ಲೂ ಹೆಚ್ಚು ದಿನ ಉಳಿಯದ ಚಲಂ 'ಪ್ರೇಮಾಯತನ'ಕ್ಕೆ ಬಂದರಂತೂ ದಿನಗಳ ಪರಿವೆಯನ್ನೇ ಮರೆತುಬಿಡುತ್ತಿದ್ದರು. ತಾರಾನಾಥರೊಂದಿಗೆ ಮಾತಿಗೆ ಕೂರುವುದೆಂದರೆ ಚಲಂರಿಗೆ ಇನ್ನಿಲ್ಲದ ಸಂಭ್ರಮ. ಪಂಡಿತರೆಂದರೆ ಚಲಂರಿಗೆ ವಿಶೇಷ ಪ್ರೀತಿ ಮತ್ತು ಕಾಳಜಿ.

ತಮ್ಮ ಜೀವಿತಾವಧಿಯಲ್ಲಿ ಹೊಸಪೇಟೆ, ಹುಬ್ಬಳ್ಳಿಗಳಿಗೂ ಭೇಟಿ ನೀಡಿದ ಚಲಂ ಬೆಂಗಳೂರಿನ ಚೆಲುವನ್ನು ಮನಸಾ ವರ್ಣಿಸಿ ದಾಖಲಿಸಿದ್ದಾರೆ. ಕರ್ನಾಟಕದ 'ಪ್ರೇಮಾಯತನ' ಆಶ್ರಮ ಬಿಟ್ಟರೆ ಚಲಂ ತುಂಬಾ ಇಷ್ಟಪಡುತ್ತಿದ್ದ ಸ್ಥಳ ತಮಿಳುನಾಡಿನ ಅರುಣಾಚಲಂ. ತಮ್ಮ ಜೀವನದ ಕೊನೆ ದಿನಗಳಲ್ಲಿ ಅರುಣಾಚಲಂನಲ್ಲಿ ನೆಮ್ಮದಿಯಿಂದ ಕಳೆದ ಚಲಂ, ತಮ್ಮದೇ ನೆಲ, ಆಂಧ್ರದ ಹೆಸರೆತ್ತಿದರೆ ಉರಿದುರಿದು ಬೀಳುತ್ತಿದ್ದರು. ಆಂಧ್ರದಲ್ಲಿ ತುಂಬಾ ಕಲಾವಿದರಿದ್ದಾರೆ, ಆದರೆ ಕಲೆಯೇ ಇಲ್ಲ ಅಂತೆಲ್ಲ ಆತ್ಮಚರಿತ್ರೆಯಲ್ಲಿ ಬರೆದುಕೊಂಡು ಹೋಗಿದ್ದಾರೆ ಚಲಂ. ಆತ್ಮಚರಿತ್ರೆ ಬರೆಯುವ ಹೊತ್ತಿಗಂತೂ ಚಲಂರಿಗೆ ಕಣ್ಣೆರಡೂ ಕಾಣಿಸದಂತಾಗಿ ಆರೋಗ್ಯ ತುಂಬಾನೇ ಹದಗೆಟ್ಟುಹೋಗಿತ್ತು. ಇನ್ನು ಆತ್ಮಚರಿತ್ರೆ ಬರೆಯುವುದಾಗದು ಎಂಬಂಥ ಪರಿಸ್ಥಿತಿ. ಆದರೆ ಚಲಂರ ಮಿತ್ರಗಣ

ಬಿಡಬೇಕಲ್ಲ? ದೀಕ್ಷಿತುಲು, ವೆಂಕಟರಮಣ, ಜೀವನ್ ಮುಂತಾದವರು ಸೇರಿ "ನೀವು ಸುಮ್ಮನೆ ಹೇಳ್ತಾ ಹೋಗಿ ಸಾಕು, ಬರೆದುಕೊಳ್ಳೋಕೆ ಅಂತಲೇ ಒಬ್ಬ ಹುಡುಗ ಇರ್ತಾನೆ" ಅಂತ ದುಂಬಾಲು ಬಿದ್ದು ಬರೆಸಿದರು. ಹೀಗೆ ಹೇಳಬೇಕಾದರೆ ಅವರ ಉದ್ದೇಶವಾದರೂ ಏನಿತ್ತೆಂದರೆ – ಪ್ರತಿಯೊಂದರ ಬಗ್ಗೆಯೂ ನೇರ ನಿಷ್ಠುರ ಅನಿಸಿಕೆಗಳನ್ನು ಹೇಳುತ್ತಲೇ ಬದುಕಿದ ಚಲಂ, ಒಂದು ವೇಳೆ ಆತ್ಮಚರಿತ್ರೆ ಬರೆಯುವಂತಾದರೆ ಅದು ಮತ್ತೊಂದು ಅರ್ಥದಲ್ಲಿ ಆಂಧ್ರದಲ್ಲಿ ಒಬ್ಬ ಸಾಹಿತಿಗಿರುವ ಸಾಮಾಜಿಕ ಸ್ಥಾನಮಾನ, ಸಾಹಿತಿಗಳಲ್ಲಿರುವ ಒಳಜಗಳಗಳು, ಗುಂಪುಗಾರಿಕೆ, ಆ ಕಾಲಘಟ್ಟದ ಸಾಹಿತ್ಯಿಕ ವಾತಾವರಣದ ಚಿತ್ರಣ ಇತ್ಯಾದಿಯೆಲ್ಲವನ್ನೂ ಒಂದೇ ಆಕರದಲ್ಲಿ ಹಿಡಿದಿಡುವಂಥ ಅಪೂರ್ವ ದಾಖಲೆಯಾದೀತೆಂಬ ಆಲೋಚನೆ. ಏಕೆಂದರೆ ಚಲಂರಲ್ಲಿ ಪ್ರತಿಯೊಂದನ್ನೂ ಆಳವಾಗಿ ನೋಡುವ, ಸರಿಯಾಗಿ ತಿಳಿದುಕೊಳ್ಳುವ, ನಿಜಾರ್ಥ-ಗೂಢಾರ್ಥಗಳನ್ನು ಗ್ರಹಿಸುವ ಒಳನೋಟಗಳಿದ್ದವು. ಹಾಗೆಂದೇ ಅವರ ಅಭಿಪ್ರಾಯಗಳು ಹತ್ತರಲ್ಲಿ ಹನ್ನೊಂದಾಗಿರದೆ ತೀರ ವಿಭಿನ್ನವಾಗಿರುತ್ತಿದ್ದವು. ಒಬ್ಬ ಶಿಕ್ಷಕನಾಗಿ, ಸಾಮಾಜಿಕ ಸ್ವಾಸ್ಥ್ಯ ಕಾಪಾಡುವ ಗುರುತರ ಜವಾಬ್ದಾರಿಯುಳ್ಳ ಲೇಖಕನಾಗಿ, ಸಹಜವಾಗಿ ಶಿಕ್ಷಣದ ಹರಿಕಾರರಾಗಬೇಕಾಗಿದ್ದ, ಸಾಕ್ಷರತೆಯ ಪ್ರಚಾರಕರಾಗಬೇಕಾಗಿದ್ದ ಚಲಂ, ಶಿಕ್ಷಣವನ್ನು ನಡುಬೀದಿಯಲ್ಲಿ ನಿಂತು ಗೇಲಿ ಮಾಡಿದರು. ಇದರಲ್ಲೇನಿದೆ ಸತ್ವ? ಅಂತ ಲೋಕಕ್ಕೆ ಕೇಳಿಸುವಂತೆ ಪ್ರಶ್ನಿಸಿಬಿಟ್ಟರು. ಮಕ್ಕಳಿಗೆ ಶಿಕ್ಷಣವೆಂಬುದು ಬಂಧನದಂತೆ ಕಣ್ರಯ್ಯಾ ಎಂದರು. ಶಿಕ್ಷಣವೆಂಬುದು ಶಾಲೆಯ ಮೂಲಕವೇ ಸಾಧ್ಯವಾಗುವ ಪ್ರಕ್ರಿಯೆ ಎಂಬ ಪರಿಕಲ್ಪನೆಯೇ ಅರ್ಥಹೀನ ಎಂದರು. ಶಾಲೆಗೆ ಹೋಗದೆ, ಸ್ವಚ್ಛಂದವಾಗಿ ಮಗು ಹಕ್ಕಿಯಂತೆ – ತನಗೆ ತೋಚಿದಂತೆ, ಆಶೆಯಾದಂತೆ ಬದುಕುತ್ತ, ಬದುಕಿನಿಂದ ನೇರವಾಗಿ ಪಾಠಗಳನ್ನು ಕಲಿಯುವುದಿದೆಯಲ್ಲ, ಅದು ಕಣ್ರಯ್ಯ ನಿಜವಾದ ಶಿಕ್ಷಣ; ಮಕ್ಕಳು ಅದನ್ನು ಕಲಿಯಬೇಕಿದೆ ಎಂದುಬಿಟ್ಟರು. ಆ 'ಬಿಡ್ಡಲ ಶಿಕ್ಷಣ' ಎಂಬ ಚಿಕ್ಕ ಪುಸ್ತಕ, ಇಡೀ ಆಂಧ್ರದಲ್ಲಿ ದೊಡ್ಡ ಪರ-ವಿರೋಧಿ ಚರ್ಚೆಯ ಅಲೆಯನ್ನೇ ಎಬ್ಬಿಸಿದ್ದುದು ಎಷ್ಟು ಸತ್ಯವೋ, ವಿರೋಧಿ ಅಲೆಯೂ ತೀವ್ರವಾಗಿತ್ತೆಂಬುದೂ ಅಷ್ಟೇ ಸತ್ಯ. ಚಲಂರ ಪ್ರತಿಯೊಂದು ಕ್ರಾಂತಿಕಾರಿ ವಿಚಾರವೂ ಹೀಗೆ ವಿರೋಧವನ್ನೆದುರಿಸಿದರೂ ಅವರಿಗೆ ಅಪ್ರಿಯ ಸತ್ಯಗಳನ್ನು, ಪ್ರಾಮಾಣಿಕ ಅನಿಸಿಕೆಗಳನ್ನು ಹಾಗೆ ಹಾಗೆ ಹೊರಗೆಡಹಿಬಿಡುವ ಅಭ್ಯಾಸ ಮಾತ್ರ ಹೋಗಲಿಲ್ಲ. ವಿಚಿತ್ರವೆಂದರೆ ಅವರಿಗೆ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸುವ ವಿಚಾರದಲ್ಲಿ ಎಳ್ಳಷ್ಟೂ ಆಸಕ್ತಿಯಿರಲಿಲ್ಲವಾದರೂ ವಿಜಯವಾಡಕ್ಕೆ ಬಂದು ನೆಲೆಗೊಂಡ ಮೇಲೆ ಹೆಂಡತಿಯ ಒತ್ತಾಯದಿಂದಾಗಿ ಮಕ್ಕಳು ಕಾನ್ವೆಂಟ್ ಶಾಲೆಗೆ ಹೋಗಬೇಕಾಗಿ ಬಂದುದು. ಅಲ್ಲಿಯವರೆಗೆ ಏನೇನೂ ಕಲಿಯದೆ, ಯಾವ ಬಂಧನಗಳೂ ಇರದೆ ಸ್ವಚ್ಛಂದವಾಗಿ ತಿಂದು ತಿರುಗಿ ಅಭ್ಯಾಸವಾಗಿದ್ದ ಮಕ್ಕಳಿಗೆ ಆ ವಾತಾವರಣ ಒಗ್ಗಲಿಲ್ಲವಾಗಿ ಮುಂದೆ ಅವರು ರಂಗನಾಯಕಮ್ಮನವರ ನಿರೀಕ್ಷೆಯ ಶಿಕ್ಷಣವನ್ನು ಯಶಸ್ವಿಯಾಗಿ ಪೂರೈಸಲಾಗಲೇ ಇಲ್ಲ. ಬಹುಶಃ ಇದೇ ಕಾರಣವಿರಬೇಕು – ಕೊನೆಕೊನೆಗೆ ಚಲಂರ ಜೀವನದ ಸಂಧ್ಯಾಕಾಲದಲ್ಲಿ ಅವರ ಮಕ್ಕಳು ಬೀದೀಲಿ ನಿಲ್ಲಿಸಿ ಸಾವಿರಾರು ಜನರ ಮಧ್ಯೆ ಅಪ್ಪನ ಕೆನ್ನೆಗೆ ಬಾರಿಸಿದರು. ರಾಮಮೂರ್ತಿಯಂಥ ಗೆಳೆಯರು ದೂರವಾದರು. ಏನು ಏನೇ ಆದರೂ ಚಲಂ ಮಾತ್ರ ಕೊನೆ ಕ್ಷಣದವರೆಗೂ ಚಲಂ ಆಗೇ ಉಳಿದರು.

ಚಲಂ ಎಂಥ ವಿಕ್ಷಿಪ್ತ ಮನುಷ್ಯರಿದ್ದರೆಂದರೆ ಅವರು ತಮ್ಮ ಕುಟುಂಬವನ್ನು ಪೋಷಿಸುತ್ತಿದ್ದ ಶಿಕ್ಷಕ ವೃತ್ತಿಯನ್ನು ಕೂಡ ಪ್ರೀತಿಸುತ್ತಿರಲಿಲ್ಲ. ತಮಗಿದ್ದ ಅಗಾಧ ಓದಿನ ಹಿನ್ನೆಲೆಯ ಬಗ್ಗೆಯಂತೂ ಅವರಿಗೆ ವಿಪರೀತ ಅಸಮಾಧಾನವಿತ್ತು. ಯಾಕಾದರೂ ನಾನು ಇಷ್ಟೆಲ್ಲ ಓದಿಕೊಂಡೆನೋ ಎಂದು ಅವರು ಕೈಕೈ ಹಿಸುಕಿಕೊಳ್ಳುತ್ತಿದ್ದುದು ಉಂಟು. ಒಮ್ಮೆ ಪತ್ರಕರ್ತನೊಬ್ಬ ಅವರನ್ನು ಸಂದರ್ಶಿಸುತ್ತ ನಿಮ್ಮ ಬರಹಗಳಲ್ಲಿ ಕಾಣಸಿಗುವ ಈ ಭಾವತೀವ್ರತೆಗೆ ಕಾರಣ ನಿಮ್ಮ ಅಗಾಧ ಓದಿನ ಹಿನ್ನೆಲೆಯೇ ಇರಬೇಕು ಅಲ್ಲವೇ? ಎಂದಾಗ ಚಲಂ ದೀರ್ಘವಾದ ನಿಟ್ಟುಸಿರುಬಿಟ್ಟು ಹೇಳಿದ್ದರು: ಖಂಡಿತ ಅಲ್ಲ. ಓದಿದ್ದರಿಂದಾಗಿಯೇ ನನ್ನ ಬರಹಗಳು ಜಾಳುಜಾಳಾಗಿವೆ ಎನಿಸುತ್ತಿದೆ. ಓದದೆ ಇದ್ದರೇನೇ ನಾನು ಇನ್ನಷ್ಟು ಮತ್ತಷ್ಟು ಒಳ್ಳೆಯ ಕಥೆಗಳನ್ನು ಬರೆಯಬಹುದಿತ್ತು.




ಆಗಲೇ ಹೇಳಿದಂತೆ ಚಲಂ ಬದುಕನ್ನು ತುಂಬಾನೆ ಪ್ರೀತಿಸುತ್ತಿದ್ದರು. ಪ್ರತಿ ಕ್ಷಣವನ್ನು ಹಸಿದವರಂತೆ ಅನುಭವಿಸುತ್ತಿದ್ದರು. ನದಿಯಲ್ಲಿ ಈಜಾಡುವ, ತೆಪ್ಪ ಕಟ್ಟಿಕೊಂಡು ಮೀನು ಹಿಡಿಯಲು ಹೋಗುವ, ಗೋದಾವರಿಯ ತೀರಕ್ಕೆ ಹೋಗಿ ಮಕ್ಕಳೊಂದಿಗೆ ಮನದಣಿಯೇ ಆಟವಾಡುವ, ಅಡವಿ ಮಧ್ಯೆಯಿದ್ದ ಒಂಟಿ ಗುಡಿಸಲಿನಲ್ಲಿ ಮಿತ್ರರನ್ನು ಕಲೆಹಾಕಿಕೊಂಡು ರಾತ್ರಿ ಚರ್ಚಿಸುವ, ಮುಳುಗೋ ಸೂರ್ಯ, ಬೆಳಗೋ ಚಂದ್ರರನ್ನು ಕೂಡ ಮುಗ್ಧ ಮಗುವಿನಂತೆ ನೋಡುತ್ತ ಕೂತುಬಿಡುವ..... ಹೀಗೆ ಏನೆಲ್ಲವನ್ನು ಮಾಡುತ್ತಿದ್ದ ಚಲಂ ಎಂಬ ಅತಿಭಾವುಕನ ಕಥೆ ಕೇಳಿಯೇ ಬಸವರಾಜು ಎಂಬ ಸಬ್ ರಿಜಿಸ್ಟ್ರಾರು ನೌಕರಿಯನ್ನೇ ತೊರೆದು ಇವರ ಹಿಂದೆ ನಡೆದುಬಂದುಬಿಟ್ಟಿದ್ದ. ನಿಜವಾದ ಸ್ವಾತಂತ್ರ್ಯ ಮತ್ತು ಸಂತೋಷಗಳೆಂದರೆ ನೀವು ಅನುಭವಿಸುತ್ತಿರುವಂಥವು, ನನಗೆ ಎಲ್ಲ ಇದೆ ಆದರೆ ಈ ಎಲ್ಲ ಇಲ್ಲ, ಅದಕ್ಕೆ ನಾನು ನೌಕರಿ ಬಿಟ್ಟು ನಿಮ್ಮ ಹಿಂದೆ ಇದೋ ಬಂದೆ ಎನ್ನುತ್ತ ಬಂದುಬಿಟ್ಟಿದ್ದ. ಚಲಂ ಬಸವರಾಜುಗೆ ತುಂಬ ತಿಳಿಸಿಹೇಳಿದ್ದರು. ಸ್ವಾತಂತ್ರ್ಯ ಮತ್ತು ಸಂತೋಷಗಳನ್ನು ನೀನು ಸರಿಯಾಗಿ ಅರ್ಥೈಸಿಕೊಂಡಿಲ್ಲ ಅಷ್ಟೇ. ಅವು ಬದುಕಿನಲ್ಲಿ ಇಲ್ಲ, ಅರಸಿಕೊಂಡು ಹೋಗಿ ಅನುಭವಿಸುವವರಲ್ಲಿದೆ. ನೀನು ಜನರ ಮಧ್ಯೆ ಬದುಕಿಯೇ ನಮ್ಮಷ್ಟೇ ತೀವ್ರವಾಗಿ ಈ ಎಲ್ಲವನ್ನೂ ಅನುಭವಿಸಬಹುದು. ಅವಸರಪಡಬೇಡ, ಮುಂದೆ ನಾನು ತಪ್ಪುಮಾಡಿಬಿಟ್ಟೆ ಅಂತ ಪಶ್ಚಾತ್ತಾಪ ಪಟ್ಟುಕೊಂಡರೆ ಹೋದ ನೌಕರಿ ಮತ್ತೆ ಬರುವುದಿಲ್ಲ... ಮುಂತಾಗಿ. ಅದಾವುದನ್ನೂ ಕೇಳದ ಬಸವರಾಜು ಮೋಡಿಗೊಳಗಾದವನಂತೆ ನೌಕರಿಯನ್ನು ಬಿಟ್ಟುಬಂದು ಕೊನೆಗೆ ಚಲಂರಂತೆ ಬದುಕಲೂ ಆಗದೆ ಕ್ರೈಸ್ತ ಧರ್ಮದ ಪ್ರಚಾರಕನಾಗಿ ಹೋಗಿಬಿಟ್ಟ. ಚಲಂರ ಬದುಕೆಂಬುದು ಹೀಗೆ ನೋಡುಗರ ಕಣ್ಣುರಿಸುವ ಹಬ್ಬದಂತಿತ್ತು ಎಂದು ಬೇರೆ ಹೇಳಬೇಕಿಲ್ಲವಲ್ಲ!

ಇನ್ನು ಚಲಂರ ಭಾಷೆಗಿರುವ ಮೋಡಿ ಮಾಡುವ ಶಕ್ತಿಯನ್ನಂತೂ ಯಾವನೂ ಒಪ್ಪಿಕೊಳ್ಳಬೇಕು. ಚಲಂರ ಬರಹವೆಂದರೆ ಅದೊಂದು ಸಂಗೀತ. ಅವರ ಬರಹಗಳ ತೆಕ್ಕೆಗೆ ಬಿದ್ದ ಯಾವ ಓದುಗನೂ ಅರ್ಧಕ್ಕೆ ನಿಲ್ಲಿಸಲಾರ. ಅದು ಎಲ್ಲಿಯೂ ನಿಲ್ಲದ ರಭಸ ಪ್ರವಾಹ. ಭಾವನೆಗಳ ಸಮತೋಲಿತ ಓಘ ಕಾಯ್ದುಕೊಂಡು ಹರಿವ ಬರಹದ ನದಿ. ಒಂದು ಕಾಲಕ್ಕಂತೂ ಚಲಂರಂತೆ ನಮಗೆ ಬರೆಯೋಕಾಗಲ್ವೇ ಅಂತ ಚಡಪಡಿಸುತ್ತಿದ್ದ ಒಂದು ವರ್ಗವೇ ಇತ್ತೆಂಬುದೂ ಅತಿಶಯೋಕ್ತಿಯ ಮಾತೇನಲ್ಲ. ವಿಪರ್ಯಾಸವೆಂದರೆ ಆಂಧ್ರದಲ್ಲಿ ಚಲಂರಿಗೆ ಒಬ್ಬ ಬರಹಗಾರನಿಗೆ ಸಿಗಬೇಕಾದ ಯಾವ ಮನ್ನಣೆಗಳೂ ಸಿಗಲಿಲ್ಲ. ಅವರನ್ನು ಸ್ತ್ರೀಲೋಲುಪನಾಗಿ, ವಿಕ್ಷಿಪ್ತನಾಗಿ ಆಂಧ್ರದೇಶ ಗ್ರಹಿಸಿತೇ ಹೊರತು ಅವರೊಳಗಿನ ಅದ್ಭುತ ಬರಹಗಾರರನ್ನು ಗುರುತಿಸಿ ಪುರಸ್ಕರಿಸಲೇ ಇಲ್ಲ.

ಮೇಷ್ಟ್ರಾಗಿದ್ದಾಗೊಮ್ಮೆ ಚಲಂರಿಗೆ ಟ್ರಾನ್ಸ್‌ಫರ್ ಆಗಿತ್ತು. ಅದನ್ನು ಕ್ಯಾನ್ಸಲ್ ಮಾಡಿಸಿಕೊಳ್ಳಬೇಕೆಂದು ಓಡಾಡುತ್ತಿದ್ದ ಚಲಂ ಟ್ರಾನ್ಸ್‌ಫರ್‌ನ ಕ್ಯಾನ್ಸಲಾತಿಗಾಗಿ ನೀಡಬೇಕಾದ ಕಾರಣಗಳ ಜಾಗೆಯಲ್ಲಿ ನನಗೆ ಈ ಊರು, ಇಲ್ಲಿಯ ಜನ, ಪರಿಶುಭ್ರ ಆಕಾಶ, ನದಿ ತೀರದ ನೆಲ, ಬೆಟ್ಟದ ಮೇಲಿನ ಗುಡಿ, ಅದರ ಹಿಂದೆ ಕಾಣಿಸುವ ಸೂರ್ಯೋದಯ - ಸೂರ್ಯಾಸ್ತಗಳೆಂದರೆ ತುಂಬಾ ಇಷ್ಟ. ಅವುಗಳನ್ನು ಬಿಟ್ಟು ಹೋಗೋಕೆ ಮನಸಾಗ್ತಾ ಇಲ್ಲ ಅಂತ ಬರೆದಿದ್ದರು. ಯಾಕೆ ಎಲ್ಲ ನೌಕರಿದಾರರು ವರ್ಗ ಕ್ಯಾನ್ಸಲ್ ಮಾಡಿಸಿಕೊಳ್ಳಬೇಕಾದಾಗ ಮಕ್ಕಳ ಶಿಕ್ಷಣ, ಹೆಂಡತಿಯ ಅನಾರೋಗ್ಯಗಳ ಕಾರಣಗಳನ್ನೇ ಕೊಡ್ತಾರೆ? ಸರ್ಕಾರವೂ ಯಾಕೆ ಇಂಥ ಕಾರಣಗಳನ್ನೇ ಪರಿಗಣಿಸುತ್ತೆ ಮತ್ತು ಬಯಸುತ್ತೆ ಎಂದು ಕೇಳುತ್ತಿದ್ದರು ಚಲಂ.

ಚಲಂರ ಬದುಕಿನ ಬಗ್ಗೆ ಹೇಳುತ್ತಾ ಹೋದರೆ, ಅದು ಮುಗಿಯುವುದಿಲ್ಲ. ವೈಕಂ, ಚಲಂ, ಈ ಸಾಲಿಗೆ ಸೇರಿಸಲು ಅದ್ಯಾಕೋ ಕನ್ನಡದಿಂದ ಒಂದು ಹೆಸರೂ ತೋಚುತ್ತಿಲ್ಲವಾದರೂ ತಕ್ಕಮಟ್ಟಿಗೆ ಪಂಪ ಮತ್ತು ಕೈಲಾಸಂರ ಬದುಕುಗಳು ಅವರ ಬದುಕಿನ ಗಡಿಯ ಹತ್ತಿರ ಹತ್ತಿರದಲ್ಲೇ ಇರುವಂತೆ ಗೋಚರಿಸುವುದಂತೂ ದಿಟ.

**ಚಿದಾನಂದ ಸಾಲಿ**
ಸಿರಿವಾರ - ೫೮೪ ೧೨೯, ರಾಯಚೂರು ಜಿಲ್ಲೆ

ಉಪವಾಸ ಅಂದರೆ ಏನು.... ಅಂತ ಬಹಳಷ್ಟು ಸಲ ಕಾಡುತ್ತದೆ.

ಇವತ್ತು ನಾನು ಟೌನಿನಲ್ಲಿ ನಡೆದುಕೊಂಡು ಹೋಗುವಾಗ ಬಣ್ಣಬಣ್ಣದ ಚೂಡಿದಾರುಗಳನ್ನು ನೋಡುವುದಿಲ್ಲ.... ಅದು ಚೆನ್ನಾಗಿದೆ, ಇದು ಹೀಗಿರಬೇಕಿತ್ತು ಅಂತ ಹರಟೆ ಮಾತನಾಡುವುದಿಲ್ಲ, ಮನಸ್ಸನ್ನು ಬಿಗಿ ಹಿಡಿದು ನಿರ್ಲಿಪ್ತವಾಗಿರುತ್ತೇನೆ. ಟಿವಿಯಲ್ಲಿ ಬರುವ ಎಲ್ಲ ಸೀರಿಯಲ್ಲು, ಸಿನೆಮಾಗಳನ್ನು ನೋಡುವುದಿಲ್ಲ... ಇವತ್ತು ಯಾವುದೇ ಹುಡುಗನನ್ನು ನೋಡಿ ವ್ಹಾ... ಚೆನ್ನಾಗಿದ್ದಾನೆ ಅಂತ ಹೇಳುವುದಿಲ್ಲ.

ಪಕ್ಕದ ಡಿಪಾರ್ಟ್‌ಮೆಂಟ್‌ನ ಹುಡುಗ ಹುಡುಗಿಯ ಕುರಿತು ಸ್ನೇಹಿತರ ಜೊತೆ ಗಾಸಿಪ್ ಮಾತುಗಳನ್ನು ಕೇಳುವುದಿಲ್ಲ. ಅವರು ಮಾತನಾಡುವ ವೇಳೆಯಲ್ಲಿ ಗೂಗ್ಲೆ ಸರ್ಚ್ ಇಂಜಿನ್‌ನಲ್ಲಿ ಅಮೆಜಾನ್ ನದಿಯ ಬಗ್ಗೆ ಹುಡುಕಿ ಓದುತ್ತೇನೆ. ಇವತ್ತು ಬಸ್ಸಿನಲ್ಲಿ ಸೀಟಿಗೋಸ್ಕರ ಹದ್ದುಗಣ್ಣು ಬಿಟ್ಟು ನೋಡುವುದಿಲ್ಲ... ಈ ವಾರವೆಲ್ಲ ಗೋಬಿ ಮಂಚೂರಿ, ಬೇಲ್‌ಪುರಿ ತಿನ್ನುವುದೇ ಇಲ್ಲ... ಬದಲಿಗೆ ಮನೆಯಲ್ಲೇ ತಿಂಗಳ ಹಿಂದೆ ಒಣಗಿಸಿಟ್ಟ ನೆಲ್ಲಿ ಕಾಯಿಯಿಂದ ಚ್ಯವನ ಪ್ರಾಶ ಲೇಹ ಮಾಡುವುದು ಹೇಗೆ ಅಂತ ಕಲಿಯುತ್ತೇನೆ.... ಇವತ್ತು ಸಿಕ್ಕಾಪಟ್ಟೆ ನಗಬಾರದು... ಗಂಭೀರವಾಗಿರಬೇಕು.

# ಉಪವಾಸವೆಂದರೆ ಉಣ್ಣದಿರುವುದು, ಅಷ್ಟೇನಾ?

ಕೋಡಿಬೆಟ್ಟು ರಾಜಲಕ್ಷ್ಮಿ



.... ನಿರ್ಣಯಗಳ ಹಾಗೆ ಕಾಣಿಸಿದರೂ ಇವೆಲ್ಲ ಒಂದು ರೀತಿಯ ಉಪವಾಸವೆ ಅಲ್ಲವೇ. ಆದರೆ ಸಾಮಾನ್ಯವಾಗಿ ಉಪವಾಸ ಎಂದರೆ ನೆನಪಾಗುವುದು ಸಂಕಷ್ಟಿ, ಏಕಾದಶಿ ಅಥವಾ ರಂಜಾನ್.

ಈಚೀಚೆಗೆ ಏಕಾದಶಿ ವ್ರತ ಮಾಡುವವರು ಕಡಿಮೆ. ಏಕಾದಶಿ ಫಲಾಹಾರ ತಮಾಷೆಯ ವಸ್ತುವಾಗಿದ್ದುದು ಈಗ ಕ್ಲೀಷೆಯಾಗಿದೆ. ಹಾಗಂತ ಉಪವಾಸ ಎಂಬ ಪರಿಕಲ್ಪನೆ ಸಮಾಜದಿಂದ ಮಾಯವಾಗಿಲ್ಲ. ಗಾಂಧೀಜಿ ಪಾಲಿಗೆ ಉಪವಾಸ ಬಹುಮುಖಿ ಸಾಧನವಾಗಿತ್ತು. ಮನಸ್ಸಿನ ಆರೋಗ್ಯಕ್ಕಾಗಿ ಆಧ್ಯಾತ್ಮದ ಅವಶ್ಯಕತೆಯನ್ನು ಸಾರುತ್ತಿದ್ದ ಗಾಂಧೀಜಿ ಉಪವಾಸಕ್ಕೆ ಹೊಸ ಅರ್ಥ ಕೊಟ್ಟವರು. ಉಪವಾಸ ಅವರ ಪಾಲಿಗೆ ಆರೋಗ್ಯದ ವಿಧಾನ ಮಾತ್ರವಲ್ಲದೆ ಪ್ರಾಯಶ್ಚಿತ್ತ ಮಾರ್ಗವೂ ಆಗಿತ್ತು. ಅಂತೆಯೇ ಅನ್ಯಾಯವನ್ನು ಪ್ರತಿಭಟಿಸುವ ಮತ್ತು ನ್ಯಾಯವನ್ನು ಗಿಟ್ಟಿಸಿಕೊಳ್ಳುವ ಆಯುಧ ಕೂಡ.

ಈಚೆಗೆ ಉಪವಾಸ ಅಡಗಿರುವುದು ಸಂಕಷ್ಟಿ, ರಂಜಾನ್‌ನಂತಹ ದಿನಗಳಲ್ಲಿ.

ಎಲ್ಲಿ ನೋಡಿದರೂ ಸಂಕಷ್ಟಿ ಚತುರ್ಥಿಯ ಮಾತು. ಬೆಳಗಿನಿಂದ ರಾತ್ರಿಯವರೆಗೆ ಒಂದು ಗ್ಲಾಸ್ ಚಹ ಕೂಡ ಕುಡಿಯದ ಗಂಭೀರ ಉಪವಾಸ. ದೇಹದ ಶುದ್ಧಿಗೆಂದು, ಆರೋಗ್ಯ ಚೆನ್ನಾಗಿರಲೆಂದು ಮಾಡುವ ಸಂಕಷ್ಟಿಯ ಬಗ್ಗೆ ಯಾರ ಹತ್ತಿರವಾದರೂ ಕೇಳಿ : ನನ್ನದು ಮೂಲಾನಕ್ಷತ್ರ, ಮದುವೆ ಸುಸೂತ್ರವಾಗಲೀ ಅಂತ ಸಂಕಷ್ಟಿ ಹಿಡಿದಿದ್ದೇನೆ. ಹೊಸ ಗೋಲ್ಡ್‌ಶಾಪ್ ಇಟ್ಟಿದ್ದೇವೆ. ಸಂಕಷ್ಟಿ ಹಿಡಿದ ಮೇಲೆ ವ್ಯಾಪಾರ ಚೆನ್ನಾಗಿ ಆಗುತ್ತಿದೆ... ಹೀಗೆ.

ರಂಜಾನ್ ಕುರಿತಂತೆ ಕೇಳುವ ಮಾತುಗಳು ಇಂತಹವಲ್ಲದಿದ್ದರೂ ಮೂಲ ಉದ್ದೇಶ ಒಂದೇ. ಅಲ್ಲಾಹನ ಕೃಪೆ ಸಂಪಾದನೆ. ಮುಸ್ಲಿಂತನದ ಮೂಲ ಐದು ನಿಯಮಗಳಲ್ಲಿ ರಂಜಾನ್ ಉಪವಾಸ ಕೂಡ ಒಂದು.

ಅಸಲಿಗೆ ಉಪವಾಸಗಳಿಂದ ಆಗುವ ಸಂಪಾದನೆ ಏನು ? ಸ್ವಾಮೀಜಿಗಳ ಹತ್ತಿರ ನೀವು ಕೇಳಿದರೆ-ನಿರ್ದಿಷ್ಟ ಹಾಗೂ ನಿಯಮಿತ ಉಪವಾಸದಿಂದ ಆಗುವ ಲಾಭ ಅನುಭವಕ್ಕೆ ಮಾತ್ರ ವೇದ್ಯವಾಗುತ್ತದೆ ಎನ್ನುತ್ತಾರೆ. ಸಮಚಿತ್ತದ ಸಂಪಾದನೆ, ನಿರ್ಲಿಪ್ತತೆ... ಇವೆಲ್ಲವನ್ನು ಮಗಳ ಮದುವೆಗಾಗಿ ಒದ್ದಾಡುವಾತನಿಗೆ ಅಥವಾ ಕೊಳೆಯುವ ಮುನ್ನ ಮಾರಾಟವಾಗಬೇಕಾದ ಮೀನುಗಳನ್ನು ಹೊತ್ತವನ ಮುಂದೆ ಹೇಳಿದರೆ ಆತ ನಗುತ್ತಾನೆ. ನಿಮಗೆ ಬೇರೆ ಕೆಲಸ ಇಲ್ಲವಾ ಅಂತ ಅಲ್ಲಿಂದ ತನ್ನ ಕೆಲಸಕ್ಕಾಗಿ ಕದಲುತ್ತಾನೆ. ಕರ್ಮಜೀವಿಗಳ ಬದುಕು ಯಾವತ್ತಿದ್ದರೂ ಬ್ಯುಸಿ.

ಆ ಕರ್ಮ ಜೀವನದಲ್ಲಿ ದೇವರಿಗೊಂದಿಷ್ಟು ಜಾಗವಿದೆ. ಆಧ್ಯಾತ್ಮಕ್ಕೊಂದಿಷ್ಟು ಟೈಮಿದೆ. ಅದು ಹಿರಿಯರು ಹಾಕಿಕೊಟ್ಟ ದಾರಿಯಲ್ಲಿ ನಡೆಯುವ ಸರಳ ಮನಸ್ಥಿತಿ. ಇದರಿಂದ ಲಾಭ ವಿಲ್ಲ ಎನ್ನುವ ಹಾಗೆ ಇಲ್ಲ. ಕರ್ಮ ಯೋಗವನ್ನೇ ನೆಚ್ಚಿಕೊಂಡವನು ಮಾಡುವ ರಂಜಾನ್, ಸಂಕಷ್ಟಿ ಉಪವಾಸಗಳು ಕೊಡುವ ರಿಲ್ಯಾಕ್ಸ್, ನೆಮ್ಮದಿಯ ತೂಕ ಸಣ್ಣದೇ ?

ರಂಜಾನ್ ಎಂದರೆ ಅದೊಂದು ಸಂಸ್ಕೃತಿ. ಕ್ರೈಸ್ತರು ವರ್ಷವೆಲ್ಲ ನಡೆಸಿದ ಜೀವನದ ಬಗ್ಗೆ ರಿಟ್ರೀಟ್ ಮಾಡಿಕೊಂಡ ಹಾಗೆ. ರಂಜಾನ್ ತಿಂಗಳು ಮಸೀದಿಯಲ್ಲಿ ಅಲ್ಲಾಹನ ಪ್ರಾರ್ಥನೆ, ಭಜನೆ, ಮುಸ್ಲಿಂ ಬಡವರಿಗೆ ದಾನ ಧರ್ಮ, ದೇವರ ಕತೆಗಳು, ದೇವರದೇ ಚಿಂತನೆ.... ನಿಷ್ಕಲ್ಮಶ ಮನಸ್ಸಿನ ಅನುಭವಕ್ಕೆ ಬರುವ ಈ ಸಂಸ್ಕೃತಿಯದೇ ಒಂದು ಪರಂಪರೆ.

* * *

ರಂಜಾನ್ ಸಂದರ್ಭದಲ್ಲಿ ಹಣ್ಣಿನ ರೇಟುಗಳು ನೆತ್ತಿಯಲ್ಲಿ ಕುಳಿತಿರುತ್ತವೆ. ವ್ಯಾಪಾರಿಗಳಿಗೇನಾಗಬೇಕು ಹೇಳಿ. ಡಿಮ್ಯಾಂಡು ಇದ್ರೆ ಅರಸು ಅಂಕೆ ಇಲ್ಲದೆ, ದೈವದ ಕಾಟ ಇಲ್ಲದೆ ರೇಟು ಜಾಸ್ತಿ ಮಾಡ್ತಾರೆ. ದಿನವಿಡೀ ತೊಟ್ಟು ನೀರು ಮುಟ್ಟದೆ ಭೀಂಪಾಸದ ಹಾಗೆ ಉಪವಾಸ ಮಾಡಿದ ಮುಸ್ಲಿಮರು ಸಂಜೆ ಹಣ್ಣು ಕೊಳ್ಳುತ್ತಾರೆ. ಒಂದಕ್ಕೆರಡು ಕ್ರಯವಾದರೂ ಸರಿ. ಹಾಪ್‌ಕಾಮ್ಸ್‌ನಿಂದಲೇ ಒಳ್ಳೆಯ ಹಣ್ಣು, ಒಣದ್ರಾಕ್ಷಿ, ಕಾರೆಕಾಯಿಗಳನ್ನು ಕೊಂಡು ವ್ಯಾಪಾರಿಗೆರಡು ಹಿಡಿ ಶಾಪ ಹಾಕಿಕೊಂಡೇ ಹೋಗುತ್ತಾರೆ. ಈ ದೃಶ್ಯ ನೋಡಿದಾಗಲೆಲ್ಲ ನನಗೆ ಮಂಗಳೂರಿನ ಜವುಳಿ ವ್ಯಾಪಾರಿಗಳು ನೆನಪಾಗುತ್ತಾರೆ.

* * *

ಮಂಗಳೂರಿನಿಂದ ಮೂಡಬಿದಿರೆಗೆ ಬಿಎಂಎಸ್ ಓಡಾಡುತ್ತದೆ. ಬಿಎಂಎಸ್ ಎಂದರೆ

ಬಲ್ಲಾಳ್ ಮೋಟಾರು ಸರ್ವೀಸ್. ನಾವು ಬಿಎಂಎಸ್ ಅಂದರೆ ಬೆಳ್ಳೂರು ಮೈಲಾರಯ್ಯ ಶ್ರೀಕಂಠಯ್ಯ ಅಂತ ಹೇಳುತ್ತಿದ್ದುದುಂಟು. ಹಾಗೆ ಕನ್ನಡ ಮಾಷ್ಟ್ರು ಕ್ಲಾಸಿನಲ್ಲಿ ಬಿಎಂಶ್ರೀ ಅನ್ನುತ್ತಲೇ ಹಿಂದಿನ ಬೆಂಚಿನಿಂದ ಬಲ್ಲಾಳ್ ಮೋಟಾರ್ ಸರ್ವೀಸ್ ಅಂತ ಕಿರುಚುತ್ತಿದ್ದೆವು.

ಬೇರೆ ಬಸ್ಸುಗಳಿಗಿಂತ ಬಲ್ಲಾಳ್ ಬಸ್ಸಿನಲ್ಲಿ ಟಕೇಟಿಗೆ ಎಂಟಾಣೆ ಕಡಿಮೆ ತಗೋತಾರೆ. ಅದಕ್ಕೇ ಮಂಗಳೂರು, ಪೊಳಲಿ, ಮೂಡಬಿದ್ರೆ ಕಡೆಯ ಕಟ್ಟಿನ ಜವುಳಿ ವ್ಯಾಪಾರಿಗಳು ಬಲ್ಲಾಳ್ ಬಸ್ಸಿಗೇ ಕಾಯವುದು. ಜವುಳಿ ವ್ಯಾಪಾರಿಗಳೆಲ್ಲ ಹೆಚ್ಚಾಗಿ ಮುಸ್ಲಿಮರು. ಅವರನ್ನು ಜವುಳಿ ಕಟ್ಟಿನ ಬ್ಯಾರಿಗಳು ಅಥವಾ ಕಟ್ಟಿನ ಬ್ಯಾರಿಗಳು ಅಂತಲೇ ಕರೆಯುವುದು.

ಏಳೆಂಟು ಚೂಡಿದಾರು, ಬುರ್‌ಖಾನಿನ ಹಾಗೇ ಕಾಣಿಸುವ ಹತ್ತೆಂಟು ನೈಟಿಗಳು, ಒಂದಷ್ಟು ಬಣ್ಣ ಬಣ್ಣದ ಸೀರೆಗಳನ್ನು ಕಟ್ಟಿಕೊಂಡು ಬಿಸಿಲಿನಲ್ಲಿ ಜವುಳಿ ಬೋಡಾ... ಜವುಳಿ... ಅಂತ ತಿರುಗುತ್ತಿದ್ದರು. ಕಟ್ಟಿನ ಬ್ಯಾರಿಗಳು ಹೆದರುವುದು ಮಳೆಗೆ ಮಾತ್ರ. ಮತ್ತೆ ಯಾವುದೇ ಸ್ಟ್ರೈಕು, ರೋಡ್ ಬ್ಲಾಕು, ಬಿಸಿಲು, ರಂಜಾನ್ ಉಪವಾಸ... ಊಹ್ಲೂಂ ಎಲ್ಲ ಕಾಲದೊಳು ಎಲ್ಲ ವೇಳೆಯೊಳು... ಕಟ್ಟಿನ ಬ್ಯಾರಿಗಳು ಬಲ್ಲಾಳ್ ಬಸ್ಸಿಗೆ ಹತ್ತುತ್ತಾರೆ. ಮಳೆಗಾಲದಲ್ಲಿ ಮಾತ್ರ ಅವರದು ಬಡತನವಿದ್ದರೂ ಟೆನ್ ಬೈ ಟೆನ್ನಲಿ ಸುಂದರ ಸುಖಮಯ ಸಂಸಾರ...

* * *

ಬಲ್ಲಾಳ್ ಬಸ್ಸಿನ ಕಿಟಕಿ ಪಕ್ಕ ಸೀಟು ಹಿಡಿದ ಹುಡುಗ ತನ್ನ ಕರ್ಚೀಪು, ಟೋಪಿಗಳನ್ನು ಇನ್ನೆರಡು ಸೀಟಿನಲ್ಲಿ ಹಾಕಿ ತನ್ನ ಜೊತೆಯವರಿಗೂ ಸೀಟು ಹಿಡಿದ. ಅವರೆಲ್ಲ ಬಂದರು. ಬಸ್ಸು ರಶ್ಶಾಯಿತು. ವಾಚಿನಲ್ಲಿ ಆಗಾಗ ಟೈಮು ನೋಡಿಕೊಳ್ಳುತ್ತಿದ್ದ ಹುಡುಗ. ಕಾಲುಗಂಟೆ ಕಳೆಯಿತೋ ಇಲ್ಲವೋ... ನಾಲ್ಕೈದು ಮಂದಿ ಮುಸ್ಲಿಮರು ಮೆತ್ತಗೆ ಇಫ್ತಾರ್ ಹೇಳಿಕೊಂಡರು. 'ಅಲ್ಲಾಹು ಮಾ ಲಕಾಸಮತು ವ್ಹಾ-ಬಿಕಾಮಂತು ವಾ-ಅಲೈಕಾ ತವಾಕಲ್ತು ಅಲಾಇಸ್ಫಿಕಾ ಅಫ್ತಾರ್ತು ವಾತಕಾಭಲ್-ಮಿನ್ನಿ'

ಕೈಯ್ಯಲ್ಲಿ ಪ್ಲಾಸ್ಟಿಕ್ ಕವರಿನಲ್ಲಿ ಹಾಕಿದ ಲೋಕಲ್ ಮೇಡ್ ಜೂಸ್. ಜೂಸ್ ಎಂದರೆ ಬಣ್ಣದ ನೀರಷ್ಟೆ. ಜೊತೆಗೆ ಒಂದು ಕ್ಯಾವೆಂಡಿಸ್ ಬಾಳೆ ಹಣ್ಣು. ದಿನವಿಡೀ ತೆಕ್ಕೆಗಿಂತ ದೊಡ್ಡ ಜವುಳಿ ಕಟ್ಟು ಹೊತ್ತು ಓಡಾಡುವ ಈತ ಯಾಕೆ ಒಣದ್ರಾಕ್ಷಿ, ಕಾರೆಕಾಯಿ ತಿನ್ನುತ್ತಿಲ್ಲ ಎಂದು ಅಚ್ಚರಿಯಾದರೆ... ಅದಕ್ಕೆ ಉತ್ತರ ಬಡತನ.

ನಿಯಮ ಹೇಳುವುದಿದ್ರೆ ರಂಜಾನ್ ಉಪವಾಸದ ನಂತರ ತಿನ್ನುವ ಪದಾರ್ಥ ಪೌಷ್ಟಿಕವಾದ್ದೇ ಇರಬೇಕು. ಈಯಪ್ಪನಿಗೆ ಹಣದ ಮುಗ್ಗಟ್ಟು ಇರುವಾಗ ಉಪವಾಸ ಯಾಕೆ ಮಾಡಬೇಕು. ಪುನರ್ಪುಳಿ ಎಸೆನ್ಸ್ ಹಾಕಿದ ಜೂಸ್ ಕುಡಿದರೆ ಆರೋಗ್ಯ ಏನಾಗಬೇಕು ?

– ಯಾಅಲ್ಲಾ... ರಂಜಾನ್ ಉಪವಾಸ ಮಾಡದೇ ಇರುವುದಾ... ನಮಗೇನು ಅಂಥಾ ಬಡತನವಾ, ಚೆನ್ನಾಗೇ ಇದ್ದೀವಲ್ಲ ?

**ಕೋಡಿಬೆಟ್ಟು ರಾಜಲಕ್ಷ್ಮಿ**
ಕೋಡಿಬೆಟ್ಟು, ಅಡ್ಯೂರು ಅಂಚೆ
ಮಂಗಳೂರು - ೫೭೪ ೧೪೫

## ಸ್ವಾಮೀಜಿಯ ಸ್ವಗತ



ಭ್ರೂಣಗೊಂಡದ್ದು ನಿಮ್ಮ ಹಾಗೆಯೇ -
ಕಾಮದ ಫಲದಲ್ಲಿ; ರಕ್ತ ಮಾಂಸಗಳ ಹೊಲದಲ್ಲಿ
ಭೂಮಿಗೆ ಬಿದ್ದದ್ದೂ ನಿಮ್ಮ ಹಾಗೆಯೇ -
ಅತ್ತು ಚೀರಾಡಿ; ಅಬ್ಬೆಗೆ ಯಾತನೆ ನೀಡಿ.
ಬಳಿಕದ ಪಯಣ ಮಾತ್ರ
ಗುರಿಯಿರದ ಭಿನ್ನ ಹಾದಿ
ಆತ್ಮವಂಚನೆಯ ಹಾಳು ಬೀದಿ.

ಬದುಕಿಗೆ ಬೇಕಾದದ್ದ ಓದಲಿಲ್ಲ; ಕಲಿಯಲಿಲ್ಲ
ಬೆವರು ಸುರಿಸಿ ಒಂದಿನಿತೂ ದುಡಿಯಲಿಲ್ಲ;
ಗಳಿಸಲಿಲ್ಲ
ಪರದ ಪರಮಾರ್ಥ ಅರೆದು ಕುಡಿದವಗೆ
ಇಹದ ಸರಳಾರ್ಥವೂ ಸಿಕ್ಕಲಿಲ್ಲ
ಆತ್ಮ ಪರಮಾತ್ಮ ಹುಡುಕಿ ಗೆದ್ದವಗೆ
ದುಡಿದುಣ್ಣುವ ಸಹಜ ಕಲೆ ದಕ್ಕಲಿಲ್ಲ.

ಯೌವನ ಅರಳಿ, ಮೈಮನ ಕೆರಳಿ
ಕಾವಿಗೆ ಕಾವಿ ಸೋಲ ತೊಡಗಿದಾಗ;
ಅಂತರಂಗದ ಬೆಂಕಿ ಆರಿಸಲಾಗದೆಯೂ
ಲೋಕಕ್ಕೆ ಇಂದ್ರಿಯ ನಿಗ್ರಹ ಬೋಧಿಸುವಾಗ
ಏಕೆ ಜ್ಞಾನೋದಯವಾಗಲಿಲ್ಲ ?

ಬಡಪಾಯಿ ಬಸವಳಿದು ಹೊಲದಲ್ಲಿ ಬೆಳೆದದ್ದ
ಸೋಮಾರಿಯಾಗಿ ಕುಳಿತು ತೇಗುವಾಗ,
ದಣಿದ ಕೈಗಳ ಫಲದಲ್ಲಿ
ತುಲಾಭಾರಕ್ಕೆ ಕುಳಿತಾಗ
ಮನಸೇಕೆ ಭಾರ ಅನಿಸಲಿಲ್ಲ ?

ಮುಕ್ತಿಯ ಬಗ್ಗೆ ವಕ್ತಾರನಂತೆ ಆಡಿದ್ದ
ದೇವಮಾನವ ನಾನೂ
ಕಾಯಿಲೆಗಳಿಂದ ಏಕೆ ಮುಕ್ತನಾಗಲಿಲ್ಲ ?
ದೇವರ ಅಪರಾವತಾರನಿಗೆ ಆಸ್ಪತ್ರೆಯ ಹಾದಿ
ಏಕೆ ತಪ್ಪಲಿಲ್ಲ ?

ಒಂದು ದಿನ
ನೀವು ಸತ್ತಿರಿ; ನಾನು ಶಿವೈಕ್ಯನಾದೆ !
ಇದ್ದೊಂದು ಬದುಕ ಸಮೃದ್ಧವಾಗಿ ಬದುಕಿ
ಧುತ್ತೆಂದು ನೀವು ಕಣ್ಮರೆಯಾದಿರಿ.
ಪರಲೋಕ ಬೋಧಿಸುತ್ತಾ ಇಹಲೋಕ
ವ್ಯರ್ಥವಾಗಿಸಿ
ನಾನಾದರೋ ಸುಂದರ ವೃಂದಾವನದಲ್ಲಿ
ನಿರಂತರ ನರಳಿದ್ದೇನೆ.

ನಶ್ವರ ದೇಹ ಮಾತ್ರವಲ್ಲ
ಶಾಶ್ವತ ಆತ್ಮವೂ
ಕೊಳೆತು ನಾರುತಿದೆಯಿಲ್ಲಿ !

**ಶ್ರೀನಿವಾಸ ಕಾರ್ಕಳ**
'ನೆಲೆ', ಭಜನಾಮಂದಿರ ರಸ್ತೆ, ಬಿಜೈ
ಮಂಗಳೂರು-೫೭೫ ೦೦೪

# ಮೇಘಾವಲೋಕನ ?



ಶರದೃತುವಿನ ಆಗಸದ ವೈಭವವನ್ನು ನೋಡಲು ಹೊರಟಿರುವವರಿಗೆ ದಕ್ಕುವುದು ಮೇಘಾವಲೋಕನವೇ. ಆದರೂ ಮೋಡಗಳು ಆಗೊಮ್ಮೆ ಈಗೊಮ್ಮೆ ಬಿಡುವು ಕೊಟ್ಟು ಅಲ್ಲಲ್ಲಿ ಕಿಂಡಿಗಳನ್ನು ಒದಗಿಸಬಹುದು. ಅಥವಾ ಮಳೆ ಇಲ್ಲದೆ ತೆಳ್ಳನೆಯ ಮೋಡಗಳು ಹರಡಿ ನಕ್ಷತ್ರಲೋಕದ ಪರಿಚಯಕ್ಕೆ ಆಸ್ಪದ ಕೊಡಬಹುದು. ಇಂತಹ ಸಂದರ್ಭದಲ್ಲಿ ಮೋಡ ಇದೆಯೋ ಇಲ್ಲವೋ, ಎಂದು ತಿಳಿಯುವುದು ಹೇಗೆ ? ಇಲ್ಲಿಯೂ ಮಾರ್ಗದರ್ಶಿಯಾಗುವುದು ಚಂದ್ರನೇ.

ಹಗಲಲ್ಲಿ ಮೋಡ ಹುಡುಕಲು ಶ್ರಮಪಡಬೇಕಾಗಿಲ್ಲ. ಆದರೆ ಕಾಮನಬಿಲ್ಲನ್ನು ಕಾಣಲು ಕೆಲವೊಂದು ಅಂಶಗಳನ್ನು ನೆನಪಿಡಬೇಕು. ಉದಾಹರಣೆಗೆ ಸೂರ್ಯ ದಿಗಂತಕ್ಕೆ ಸಮೀಪವಾಗಿರಬೇಕು; ಅದರ ವಿರುದ್ಧ ದಿಕ್ಕಿನಲ್ಲಿ ಕಪ್ಪು ಮೋಡವಿರಬೇಕು – ಹೀಗೆ. ರಾತ್ರಿಯಲ್ಲಿ ಮೋಡವಿದ್ದಾಗ ಚಂದ್ರನನ್ನು ನೋಡಿ. ಅದರ ಸುತ್ತ ಪ್ರಭಾವಳಿ ಇತ್ತೆಂದರೆ ಮೋಡ ಇದೆಯೆಂದೇ ಅರ್ಥ. ಇದನ್ನು ''ಗೂಡು ಕಟ್ಟುವುದು'' ಎಂದೂ ಕರೆಯುತ್ತಾರೆ. ಸೂಕ್ಷ್ಮವಾಗಿ ಗಮನಿಸಿದರೆ ಒಂದೆರಡು ಅಂಶಗಳು ಸ್ಫುಟವಾಗಿ ಗೋಚರಿಸುತ್ತವೆ. ಚಂದ್ರನ ಆಕಾರ ಏನೇ ಇದ್ದರೂ (ಬಾಲಚಂದ್ರ, ಅರ್ಧಾಧಿಕ, ಅರ್ಧ, ಪೂರ್ಣ – ಹೀಗೆ) ಪ್ರಭಾವಳಿ ಮಾತ್ರ ಗುಂಡಗೇ ಇರುತ್ತದೆ. ಕಾಮನಬಿಲ್ಲಿನ ಏಳೂ ಬಣ್ಣಗಳು ಇಲ್ಲೂ ಕಾಣುತ್ತವೆ. ನೀರಿನ ಹನಿಗಳು ಮಾತ್ರವಲ್ಲದೆ ಹಿಮಸ್ಫಟಿಕಗಳೂ ಪ್ರಭಾವಳಿಗೆ ಕಾರಣವಾಗುತ್ತವೆ. ಚಂದ್ರನ ಸುತ್ತ ಚಿಕ್ಕ ಪ್ರಭಾವಳಿ ಇದ್ದರೆ ನೀರಹನಿಗಳ ಮೋಡ ಆವರಿಸಿದೆ ಎಂದರ್ಥ. ವಿಸ್ತಾರವಾದ ಪ್ರಭಾವಳಿ ಇದ್ದರೆ ಹಿಮಸ್ಫಟಿಕಗಳ ಮೋಡ ಆವರಿಸಿದೆ ಎಂದರ್ಥ. ಮೋಡಗಳು ತೀವ್ರಗತಿಯಿಂದ ಚಂದ್ರನ ಮುಂದೆ ಹಾದುಹೋದಾಗ ಮೋಡದ ಭಾಗದಲ್ಲಿ ಮಾತ್ರ ಪ್ರಭಾವಳಿ ಕಾಣುತ್ತದೆ. ಪ್ರಭಾವಳಿಯ ರಚನೆಯನ್ನು ಭೌತ ವಿಜ್ಞಾನದ ಪಾಠಗಳಿಂದ ತಿಳಿಯಬಹುದು.

ಮೋಡಗಳಿವೆಯೇ ಇಲ್ಲವೇ ಎಂದು ತಿಳಿಯಲು ಹೀಗೆ ಚಂದ್ರನ ನೆರವು ಪಡೆದು ಮೋಡವಿಲ್ಲ ಎಂದು ಖಚಿತಪಡಿಸಿಕೊಂಡಮೇಲೂ, ವೃಶ್ಚಿಕ-ಧನು ರಾಶಿಗಳ ಭಾಗದಲ್ಲಿ ಮಾತ್ರ ಮೋಡ ಇರಬಹುದೇ, ಎಂಬ ಅನುಮಾನ ಬರುತ್ತದೆ. ಅದು ಮೋಡವಲ್ಲ. ಅದೊಂದು ನಕ್ಷತ್ರ ನಗರ ಎನ್ನಬಹುದು. ನಗರ ಎಂದೊಡನೆ ಮನಸ್ಸಿನಲ್ಲಿ ಮೂಡುವ ವೈವಿಧ್ಯಮಯ ಕಟ್ಟಡಗಳು, ಜನಸಂದಣಿ ಇವುಗಳ ನಾಕ್ಷತ್ರಿಕ ಅವತರಣಿಕೆ ಅದು. ಒಂದೆಡೆ ನಕ್ಷತ್ರಗಳು ಒತ್ತಾಗಿ ಸೇರಿಕೊಂಡಿದ್ದರೆ ಮತ್ತೊಂದೆಡೆ ವಿರಳ. ಅಸಂಖ್ಯಾತ ನಕ್ಷತ್ರ ಗುಚ್ಛಗಳು, ನೆಬ್ಯುಲಗಳು ಎಲ್ಲವನ್ನೂ ಒಳಗೊಂಡಿರುವ ಈ ಭಾಗ ಆಕಾಶಗಂಗೆಯ ಕೇಂದ್ರ. ಆಕಾಶಗಂಗೆ ಎಂಬುದು ನಮ್ಮ ಗ್ಯಾಲಕ್ಸಿಯ ಹೆಸರು. ಬರಿಗಣ್ಣಿಗೆ ಕಾಣುವ ಪ್ರತಿಯೊಂದು ನಕ್ಷತ್ರವೂ ಇದಕ್ಕೆ ಸೇರಿದುದೇ. ಬಾವಿಯೊಳಗೇ ಕುಳಿತು ಬಾವಿಯ ಅಂಚನ್ನು ಅಳತೆ ಮಾಡಲು ಹೊರಟಿರುವ ಕಪ್ಪೆಗಳು ನಾವು. ಆದ್ದರಿಂದ ನಕ್ಷತ್ರಗಳು ನಮ್ಮ ಆಕಾಶ ದುದ್ದಕ್ಕೂ ಹರಡಿಕೊಂಡಂತೆ ಕಾಣುತ್ತವೆ. ೬೦-೭೦ ವರ್ಷಗಳ ಹಿಂದೆ ಆಕಾಶಗಂಗೆಯ ವಿಸ್ತಾರ ಹಾಗೂ ಆಕಾರ ತಿಳಿಯಲು ಸಾಧ್ಯವಾಯಿತು. ಅಲ್ಲಿಯವರೆಗೂ ಹೀಗೆ ಆಕಾಶದಲ್ಲಿ ಕಾಣುವ ಮೋಡದಂತಹ ರಚನೆ ಮಾತ್ರ ಆಕಾಶಗಂಗೆ (Milky way) ಎಂಬ ಹೆಸರು ಪಡೆದಿತ್ತು.

ಆಕಾಶಗಂಗೆಯನ್ನು ಬೆಂಗಳೂರಿನ ವಿಸ್ತಾರಕ್ಕೆ ''ಇಳಿಸುವ'' ಪ್ರಯತ್ನ ಮಾಡೋಣ. ಆಗ ನೆಬ್ಯುಲಗಳು, ನಕ್ಷತ್ರಗುಚ್ಛಗಳು, ಅನಿಲ, ಧೂಳು ಇವೆಲ್ಲ ಗಗನಚುಂಬಿ ಕಟ್ಟಡಗಳು; ಕೆರೆಗಳು, ಉದ್ಯಾನಗಳು, ಬೃಹತ್ ಬಂಗಲೆಗಳು ಆಗುತ್ತವೆ. ಆದರೆ ಒಂದೇ ವ್ಯತ್ಯಾಸ – ಪ್ರತಿಯೊಂದು ಕಟ್ಟಡವೂ ಕನಿಷ್ಠ ೪೦೦ ಮೀಟರ್ ಎತ್ತರ ಇರಬೇಕಾಗುತ್ತದೆ !

ಸೂರ್ಯಾಸ್ತವಾದಾಗ ಸ್ಫುಟವಾಗಿ ಕಾಣುವ ವೃಶ್ಚಿಕ-ಧನುರಾಶಿಗಳ ನಕ್ಷತ್ರ ದಟ್ಟಣೆಗೆ ವ್ಯತಿರಿಕ್ತವಾಗಿ ಪೂರ್ವದ ಆಕಾಶ ಖಾಲಿ ಎನ್ನಿಸುತ್ತದೆ. ಉತ್ತರದಲ್ಲಿ ಸಪ್ತರ್ಷಿಮಂಡಲ ಪಶ್ಚಿಮದ ಅಂಚನ್ನು ತಲುಪುತ್ತಿದ್ದಂತೆ, ಈಶಾನ್ಯದಲ್ಲಿ ಬೇಸಿಗೆ ತ್ರಿಕೋಣ ಸ್ಪಷ್ಟವಾಗಿ ಕಾಣುತ್ತದೆ. ಆಕಾಶಗಂಗೆಯ ಇನ್ನೊಂದು ಭಾಗ ಬೇಸಿಗೆ ತ್ರಿಕೋಣ ಅಂದರೆ ರಾಜಹಂಸ (ಸಿಗ್ನಸ್), ಗರುಡ (ಅಕ್ವಿಲಾ) ಮತ್ತು ವೀಣಾ (ಲೈರಾ) ಮುಖಾಂತರ ಹಾದುಹೋಗುತ್ತದೆ. ಆದರೆ ಈ ಭಾಗವನ್ನು ಕಾಣಲು ಆಕಾಶ ಅತಿ ಶುಭ್ರವಾಗಿರಬೇಕು.

ಸೂರ್ಯಾಸ್ತವಾಗುತ್ತಿದ್ದ ಹಾಗೆ ಪೂರ್ವದಲ್ಲಿ ನಕ್ಷತ್ರಗಳೇನೂ ಕಾಣದಿದ್ದರೂ ಆ ಕೊರತೆಯನ್ನು ತುಂಬುವಂತೆ ಮಂಗಳಗ್ರಹ ಪ್ರಕಾಶಿಸುತ್ತದೆ. ಕಳೆದ ತಿಂಗಳು ಪ್ರಕಾಶದ ಗರಿಷ್ಠವನ್ನು ಮುಟ್ಟಿದ ಇದು ಇನ್ನೂ ಕುಂದಿಲ್ಲ. ಕಳೆದ ತಿಂಗಳ ೧೨ರಂದು ತೆಳ್ಳನೆಯ ಮೋಡದ ಮೂಲಕವೂ ಇದು ಚಂದ್ರನ ಪಕ್ಕ ಪ್ರಕಾಶಿಸಿದ್ದನ್ನು ಕಂಡವರು, ಅದರ ಬಣ್ಣ ಕೆಂಪಲ್ಲ ಕಿತ್ತಳೆ ಎಂದು ಗುರುತಿಸಿದರು. ಇದಕ್ಕೆ Red Planet ಬದಲು Orange Planet ಎಂಬ ಹೆಸರೇ ಸೂಕ್ತ ಎಂದವರ ಅನಿಸಿಕೆ. ಈ ತಿಂಗಳುದ್ದಕ್ಕೂ ಪ್ರಕಾಶಮಾನವಾಗಿ ಬೆಳಗುವ ಇದನ್ನು ಗುರುತಿಸಲು ನಕ್ಷೆ ಬೇಕಿಲ್ಲ; ಯಾರ ಸಹಾಯವೂ ಬೇಕಿಲ್ಲ. ತೆಳುವಾದ ಮೋಡವಿದ್ದರೆ ಇದರ ಸುತ್ತಲೂ ''ಗೂಡು'' ಕಟ್ಟುವುದನ್ನು ಕಾಣಬಹುದು. ಅಷ್ಟೇ ಅಲ್ಲ ರಾತ್ರಿ ಇಡೀ ನೋಡಲು ಅವಕಾಶವಿದೆ. ಯಾವಾಗ ಮೋಡಗಳು ಮರೆಯಾದರೂ ಹೊರಗೆಬಂದು ನಭಾವಲೋಕನ ನಡೆಸಿದರೆ ಸಾಕು. ಹುಣ್ಣಿಮೆಯ ಹಿಂದಿನ ದಿನಗಳಲ್ಲಿ ಚಂದ್ರ ಇದರ ಪಕ್ಕವೇ ಕಾಣುವುದು.

ಭೂಮಿ ಮಂಗಳದ ಓಟದ ಸ್ಪರ್ಧೆಯ ಕಾರಣ ಮಂಗಳ ಹೀಗೆ ಅತಿ ಪ್ರಕಾಶಮಾನವಾಗಿದೆ ಎಂದು ತಿಳಿದಿದ್ದೇವಷ್ಟೇ. ಮಂಗಳವನ್ನು ಹಿಂದೆ ಬಿಟ್ಟು ಮುಂದೆ ಓಡಿದ ಭೂಮಿ ಈಗ ಸಾಕಷ್ಟು ಮುಂದಿದೆ. ಓಟದ ವಿಜಯವನ್ನು ಸೂಚಿಸುವ ಘಟನೆ ೨೯ರಂದು ನಡೆಯಲಿದೆ. ಇದೇ ಹಿನ್ನಡೆಯ ಮುಕ್ತಾಯ. ಕುಂಭದಿಂದ ಮಕರದ ದಿಕ್ಕಿಗೆ ಹೊರಟಿದ್ದ ಮಂಗಳ ಈಗ ಪುನಃ ನೇರ ನಡೆ ಆರಂಭಿಸುತ್ತದೆ. ಇದು ಮಂಗಳದ ರಾಜವೈಭವದ ಮುಕ್ತಾಯ ಎಂದೂ ಹೇಳಬಹುದು. ಏಕೆಂದರೆ ಇನ್ನು ಮುಂದೆ ಅದರ ಪ್ರಕಾಶ ಕ್ಷೀಣಿಸುತ್ತದೆ. ಸಂಜೆಯ ಆಕಾಶದ ರಾಜನಾಗಿದ್ದ ಅದಕ್ಕೊಂದು ಪ್ರತಿಸ್ಪರ್ಧಿ ಪಶ್ಚಿಮದಂಚಿನಲ್ಲಿ ಕಾಣಿಸಿಕೊಳ್ಳುತ್ತದೆ. ಇದೇ ಶುಕ್ರ.

ಶನಿ, ಬುಧ ಮತ್ತು ಗುರು – ಈ ಮೂರೂ ಗ್ರಹಗಳನ್ನು ಬೆಳಗಿನ ಜಾವ ನೋಡಬಹುದು. ಶನಿ ರಾತ್ರಿ ಸುಮಾರು ಎರಡು ಗಂಟೆಗೆ ಉದಯಿಸುತ್ತದೆ. ಮಿಥುನ ರಾಶಿಯ ಪ್ರಕಾಶಮಾನ ನಕ್ಷತ್ರಗಳ ಚೌಕಟ್ಟಿನೊಳಗೆ ಅದು ಸೇರಿಕೊಂಡಿದೆ. ಬೆಳಗಿನ ಸುಮಾರು ೫.೩೦ರ ಹೊತ್ತಿಗೆ ಪೂರ್ವ ದಿಕ್ಕಿಗೆ ದೃಷ್ಟಿ ಹರಿಸಿದಿರಾದರೆ, ದಿಗಂತದ ಅಂಚಿನಲ್ಲಿ ಗುರುಗ್ರಹ ಕಾಣುತ್ತದೆ. ತಿಂಗಳ ಕೊನೆಯಲ್ಲಿ ಬುಧ-ಗುರು ಒಂದಾಗುತ್ತವೆ. ೨೪ರಂದು ಬೆಳಗಿನ ಜಾವ ಗುರು ಮತ್ತು ಬುಧಗಳನ್ನು ಗುರುತಿಸಲು ಬಾಲಚಂದ್ರನ ಸಹಾಯ ಪಡೆಯಬಹುದು.

ಭೂಮಿ ತನ್ನ ಕಕ್ಷೆಯಲ್ಲಿನ ಒಂದು ಮುಖ್ಯ ಹಂತವನ್ನು ಈ ತಿಂಗಳ ೨೩ರಂದು ದಾಟಲಿದೆ. ಶರದ್ ವಿಷುವ ಎಂಬುದು ಈ ಘಟನೆಯ ಹೆಸರು. ಹಗಲು-ರಾತ್ರಿಗಳು ಸಮಾವಧಿಯವು. ಮುಂದೆ ಹಗಲಿನ ಅವಧಿ ಕಡಿಮೆಯಾಗುತ್ತಾ ಹೋಗುತ್ತದೆ. ಅಂಟಾರ್ಕ್ಟಿಕಾದಲ್ಲಿ ಸೂರ್ಯನ ಮೊದಲ ಕಿರಣಗಳು ಬೀಳತೊಡಗಿದರೆ ಆರ್ಕ್ಟಿಕ್‌ನಲ್ಲಿ ಕತ್ತಲು ಮುಸುಕುತ್ತದೆ. ಗಣಿತರೀತ್ಯಾ ಹೇಳುವುದಾದರೆ ಸೂರ್ಯನ ಸ್ಥಾನ ವಿಷುವದ್ ಮತ್ತು ಕ್ರಾಂತಿ ವೃತ್ತಗಳ ಸಂಗಮದ ಬಿಂದುವಿನಲ್ಲಿ.

ಹುಣ್ಣಿಮೆಯ ಚಂದ್ರ ಸೂರ್ಯನಿಗೆ ವ್ಯಾಸೀಯವಾದ ವಿರುದ್ಧ ಬಿಂದುವಿನಲ್ಲಿರುತ್ತದೆಯಾದ್ದರಿಂದ, ಅದು ಇನ್ನೊಂದು ವಿಷುವ-ವಸಂತವಿಷುವದ ಬಳಿ ಇರಬೇಕಲ್ಲವೇ ? ಇದನ್ನು ತಿಳಿಯಲು ಈಗ ಒಳ್ಳೆಯ ಅವಕಾಶವಿದೆ. ಹುಣ್ಣಿಮೆ ಹತ್ತರಂದು. ಪೂರ್ವಾಭಾದ್ರ-ಉತ್ತರಾಭಾದ್ರ ನಕ್ಷತ್ರಗಳ ನೇರಕ್ಕೆ ವಸಂತವಿಷುವ ಬಿಂದುವಿನ ಸಮೀಪದಲ್ಲೇ ಚಂದ್ರನ ಸ್ಥಾನ. ಹಾಗಾಗಿ ಈ ತಿಂಗಳ ಹೆಸರೇ ಭಾದ್ರಪದ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

# ಭಾರತ-ಚೀಣಾ : ಕಗ್ಗಂಟಾಗಿರುವ ಗಡಿ ಸಮಸ್ಯೆ

ಭಾರತ-ಚೀಣಾ ಸಂಬಂಧಗಳ ವರ್ಧನೆಯಲ್ಲಿ ಪ್ರಧಾನಿ ವಾಜಪೇಯಿಯವರು ಚೀಣಾ ಜನತಾ ಗಣರಾಜ್ಯಕ್ಕೆ ಇತ್ತೀಚೆಗೆ ನೀಡಿದ ಭೇಟಿ, ಚೀಣೀ ನಾಯಕರ ಜೊತೆ ನಡೆಸಿದ ಮಾತುಕತೆಗಳು ಒಂದು ಪ್ರಮುಖ ಮುನ್ನಡೆ. ಹತ್ತು ವರ್ಷಗಳ ನಂತರ ಭಾರತದ ಪ್ರಧಾನಿಯೊಬ್ಬರು ನೀಡಿದ ಈ ಅಧಿಕೃತ ಭೇಟಿ ಎರಡೂ ದೇಶಗಳ ನಡುವಣ ಸಂಬಂಧಗಳನ್ನು ಹೊಸ ಮಜಲಿಗೆ ಕೊಂಡೊಯ್ಯಲಿದೆ. ಭೇಟಿಯ ಕಾಲದಲ್ಲಿ ಮಾಡಿಕೊಳ್ಳಲಾದ ಒಪ್ಪಂದಗಳು, ಅಂಗೀಕರಿಸಿದ ಜಂಟಿಘೋಷಣೆಯಲ್ಲಿ ಅಭಿವ್ಯಕ್ತವಾಗಿರುವ ಭಾವನೆಗಳು, ಪಂಚಶೀಲ ತತ್ವಗಳ ಪುನರ್ ಪ್ರತಿಪಾದನೆ, ವಿವಾದಾತ್ಮಕ ಪ್ರಶ್ನೆಗಳನ್ನು ಶಾಂತಿಯುತವಾಗಿ ಬಗೆಹರಿಸಲು ನಿರ್ಧಾರ, ಎಲ್ಲವೂ ಸ್ವಾಗತಾರ್ಹ. ಟಿಬೇಟಿನ ವಿಚಾರದಲ್ಲಿ ಭಾರತದ ನಿಲುವಿನ ಸ್ಪಷ್ಟೀಕರಣ, ಸಿಕ್ಕಿಂ-ಟಿಬೇಟ್ ಗಡಿಯಲ್ಲಿ ವ್ಯಾಪಾರ ವೃದ್ಧಿಗೆ ಅವಕಾಶ, ಗಡಿ ವಿವಾದವನ್ನು ಸಮಗ್ರವಾಗಿ ಪರಿಶೀಲಿಸಲು ವಿಶೇಷ ಪ್ರತಿನಿಧಿಗಳ ನೇಮಕಕ್ಕೆ ಅಂಗೀಕಾರ, ಇವೇ ಮೊದಲಾದುವು ಸಕಾರಾತ್ಮಕ ಬೆಳವಣಿಗೆ.

ಪ್ರಚಲಿತ ಅಂತಾರಾಷ್ಟ್ರೀಯ ಪರಿಸ್ಥಿತಿಯಲ್ಲಿ ಏಷಿಯಾ ಖಂಡದ ಈ ಎರಡು ಬೃಹತ್ ರಾಷ್ಟ್ರಗಳ ಮಧ್ಯೆ ಉತ್ತಮ ಸಂಬಂಧಗಳು ಹಾಗೂ ಸಹಕಾರ ಅತ್ಯಗತ್ಯ. ಏಕಶಕ್ತಿ ಕೇಂದ್ರೀಯ ಜಗತ್ತಿನಲ್ಲಿ ಶಾಂತಿ, ಸುಭದ್ರತೆಯನ್ನು ಕಾಪಾಡುವುದರಲ್ಲಿ, ವಿವಾದಗಳನ್ನು ಬಗೆಹರಿಸುವುದರಲ್ಲಿ ಭಾರತ, ಚೀಣಾಗಳು ಕಲೆತರೆ ಪರಿಣಾಮಕಾರಿ ಪಾತ್ರವಹಿಸುವುದು ಸಾಧ್ಯವಿದೆ. ಆ ದಿಶೆಯಲ್ಲಿ ಎರಡೂ ರಾಷ್ಟ್ರಗಳು ಕಾರ್ಯಪ್ರವೃತ್ತವಾಗಬೇಕಾಗಿದೆ.


ವಿಶ್ವ ವೀಕ್ಷಣೆ

ಪರಂಪರಾಗತ ಮೈತ್ರಿ ಸಂಬಂಧಗಳಲ್ಲಿ ಏರಿಳಿತಗಳಿದ್ದಾಗ್ಯೂ, ಅದು ವಿಪರೀತದ ಮಟ್ಟಕ್ಕೆ ಹೋದದ್ದು ನಲವತ್ತು ವರ್ಷಗಳ ಹಿಂದೆ. ಸ್ವಾತಂತ್ರ್ಯಪೂರ್ವದ ವರ್ಷಗಳಲ್ಲಿಯೂ ಪುರಾತನ ಸಂಸ್ಕೃತಿ ಹೊಂದಿರುವ ಭಾರತ-ಚೀಣಾಗಳ ನಡುವೆ ಮೈತ್ರಿ ಸಂಬಂಧಗಳು ಮಧುರವಾಗಿಯೇ ಇದ್ದವು. ಸಾಮ್ರಾಜ್ಯಶಾಹಿ ವಿರೋಧಿ ಹೋರಾಟದಲ್ಲಿ ಪರಸ್ಪರ ಒತ್ತಾಸೆಯಿತ್ತು. ಸ್ವಾತಂತ್ರ್ಯಾನಂತರದ ಕಾಲದಲ್ಲಿ, ಚೀಣೀ ಜನತಾ ಗಣರಾಜ್ಯ ಅಸ್ತಿತ್ವಕ್ಕೆ ಬಂದಮೇಲೆ ೧೦ ವರ್ಷಗಳ ಕಾಲ ಸಂಬಂಧಗಳು ಆತ್ಮೀಯವಾಗಿಯೇ ಇದ್ದುವು. ಉಲ್ಬಣಿಸಿದ ಗಡಿ ವಿವಾದದಿಂದಾಗಿ ಕಳೆದ ಶತಮಾನದ ಅರವತ್ತರ ದಶಕದ ಪ್ರಾರಂಭದಲ್ಲಿ ಎರಡೂ ದೇಶಗಳ ನಡುವೆ ನಡೆದ ಸಶಸ್ತ್ರ ಘರ್ಷಣೆ ಸಂಬಂಧಗಳನ್ನು ಹದಗೆಡಿಸಿ, ಪರಸ್ಪರ ವೈಮನಸ್ಯ, ಅಪನಂಬಿಕೆಗಳಿಗೆ ಎಡೆಕೊಟ್ಟಿತು. ಗಡಿ ವಿವಾದ ಯಥಾಸ್ಥಿತಿಯಲ್ಲೇ ಇದ್ದು, ಸಾವಿರಾರು ಕಿಲೋಮೀಟರುಗಳು ಭಾರತದ ನೆಲ ಚೀಣೀಯರ ವಶದಲ್ಲೇ ಇದ್ದರೂ, ಈಗ ಎರಡು ದಶಕಗಳಿಂದ ಕ್ರಮೇಣ ಸಂಬಂಧಗಳು ಗಮನಾರ್ಹವಾಗಿ ಸುಧಾರಿಸುತ್ತಿವೆ.

ಭಾರತ ಚೀಣಾಗಳ ಮಧ್ಯೆ ಗಡಿ ನಿಷ್ಕರ್ಷೆಯಾಗಿಲ್ಲ ಎನ್ನುವುದು ನಿರ್ವಿವಾದ ಸಂಗತಿ. ೧೯೫೯ರ ಸೆಪ್ಟೆಂಬರ್ ೨೬ರಂದು ಪ್ರಧಾನಿ ನೆಹರೂರವರು ಚೀಣೀ ಪ್ರಧಾನಿ ಚೌಎನ್‌ಲ್ಯಾಗೆ ಬರೆದ ಪತ್ರದಲ್ಲಿ ಭಾರತದ ಈಶಾನ್ಯದಲ್ಲಿ ಸುಮಾರು ೩೫೦೦ ಕಿಲೋಮೀಟರ್ ಉದ್ದಕ್ಕೆ ವ್ಯಾಪಿಸಿಕೊಂಡಿರುವ ಎರಡೂ ದೇಶಗಳ ನಡುವಿನ ಗಡಿ ನಿರ್ಧಾರವಾಗಿಲ್ಲ ಎನ್ನುವುದನ್ನು ಮಾನ್ಯ ಮಾಡಿದ್ದರು. ಹಾಗಾಗಿ ಈ ಗಂಭೀರವಾದ ಸಮಸ್ಯೆಯನ್ನು ಕುರಿತು ಪರ್ಯಾಲೋಚಿಸಲು, ಪರಿಹಾರ ಕಂಡುಹಿಡಿಯಲು ಉಭಯ ದೇಶಗಳ ಅಧಿಕಾರಿಗಳು ೧೯೬೦ರ ಜೂನ್‌ನಿಂದ ಸೆಪ್ಟೆಂಬರ್ ಅವಧಿಯಲ್ಲಿ ದೆಹಲಿ ಹಾಗೂ ಬೀಜಿಂಗ್‌ಗಳಲ್ಲಿ ಪರಸ್ಪರ ಭೇಟಿಯಾಗಿ ವರದಿ ಸಲ್ಲಿಸಬೇಕೆಂದು ನಿಗದಿಪಡಿಸಲಾಗಿತ್ತು. ೧೯೬೦ರ ಏಪ್ರಿಲ್ ಕೊನೆಯ ವಾರದಲ್ಲಿ ಚೀಣೀ ಪ್ರಧಾನಿ ಚೌಎನ್‌ಲ್ಯಾ ಭಾರತಕ್ಕೆ ಭೇಟಿ ನೀಡಿ ಪ್ರಧಾನಿ ನೆಹರೂರೊಂದಿಗೆ ನಡೆಸಿದ ಮಾತುಕತೆಯ ಪರಿಣಾಮವಾಗಿ ಈ ಒಪ್ಪಂದಕ್ಕೆ ಬರಲಾಗಿತ್ತು. ಹಾಗಿದ್ದರೂ ೧೯೬೨ರ ಅಕ್ಟೋಬರ್ ೨೦ರಂದು ಚೀಣೀ ಸೇನೆಗಳು ಭಾರತದ ಗಡಿಯುದ್ದಕ್ಕೂ ಆಕ್ರಮಣ ನಡೆಸಿ, ತನಗೆ ಸೇರಿದ್ದೆಂದು ಪರಿಗಣಿಸಿದ್ದ ಭೂಭಾಗಗಳನ್ನು ಆಕ್ರಮಿಸಿಕೊಂಡು ಯುದ್ಧ ಸ್ತಂಭನ ಘೋಷಿಸಿತು. ಇಂದೂ ಕೂಡ ಆ ಭೂಭಾಗ ಚೀಣೀಯರ ವಶದಲ್ಲಿಯೇ ಇದೆ. ಸಮಾಜವಾದಿ ಸಮಾಜದತ್ತ ಸಾಗುತ್ತಿರುವ ದೇಶವೆಂದು ಪರಿಗಣಿಸಲಾಗಿದ್ದ ಚೀಣಾದಿಂದ ನಡೆದ ಈ ದಾಳಿ ಎಲ್ಲ ಪ್ರಗತಿಪರರನ್ನೂ ದಿಗ್ಭ್ರಮೆಗೊಳಿಸಿತು. ಭಾರತದ ಮಟ್ಟಿಗೆ ಅದು ಅನಿರೀಕ್ಷಿತವಾಗಿತ್ತು. ಸಾಕಷ್ಟು ವಾದ-ವಿವಾದಗಳನ್ನು ಸೃಷ್ಟಿಸಿದ ಭಾರತ-ಚೀಣಾ ನಡುವಣ ಈ ಯುದ್ಧದಲ್ಲಿ ಚೀಣಾ ನಡೆದುಕೊಂಡ ಬಗೆ ವಿಶ್ವಾಸದ್ರೋಹ. ಐವತ್ತರ ದಶಕದ ಮಧ್ಯದಿಂದಲೇ ಹೊಗೆಯಾಡುತ್ತಿದ್ದ ಗಡಿ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿ ಭಾರತ ಸರಕಾರ ಸೂಕ್ತ ಕ್ರಮ ಕೈಗೊಳ್ಳದೇ ಹೋದದ್ದು ಅಕ್ಷಮ್ಯ. ನೂರಾರು ವರ್ಷಗಳಿಂದಲೂ ಭಾರತ-ಚೀಣಾಗಳ ನಡುವೆ ಗಡಿ ನಿಗದಿಯಾಗಿರಲಿಲ್ಲ. ಆಂತರಿಕ ಘರ್ಷಣೆಗಳಲ್ಲೇ ಮುಳುಗಿದ್ದ ಚೀಣಾ ಈ ಗಡಿ ಪ್ರದೇಶದ ಕಡೆಗೆ ಗಮನಹರಿಸಿದ್ದು ಚೀಣೀ ಜನತಾ ಗಣರಾಜ್ಯ ಅಸ್ತಿತ್ವಕ್ಕೆ ಬಂದ ನಂತರವೇ. ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ತಮ್ಮ ಹಿತಾಸಕ್ತಿ ಕಾಪಾಡಿಕೊಳ್ಳಲು ಟಿಬೇಟನ್ನು ತಟಸ್ಥವಾಗಿರಿಸಿ ರಕ್ಷಾಕವಚವನ್ನಾಗಿಸಿಕೊಳ್ಳುವುದರಲ್ಲಿ ಆಸಕ್ತರಾಗಿದ್ದರೇ ಹೊರತು ಗಡಿ ನಿಷ್ಕರ್ಷೆ ಮಾಡುವ ಗೋಜಿಗೆ ಹೋಗಲಿಲ್ಲ. ಅಲ್ಲದೆ ಕಮ್ಯುನಿಸ್ಟರ ವಿರುದ್ಧ ಹೋರಾಡಲು ಚೀಣಾದ ಚಿಯಾಂಗ್ ಕೈಷೇಕ್ ಆಡಳಿತಕ್ಕೆ ಬ್ರಿಟನ್ನಿನ ಪೂರ್ಣ ಬೆಂಬಲವಿತ್ತು. ಆದರಿಂದ ಭಾರತ ಮತ್ತು ಚೀಣಾಗಳ ನಡುವಣ ನಿರ್ವಾಸಿತ ಬೆಟ್ಟಗುಡ್ಡಗಳ ಗಡಿ ಪ್ರದೇಶದಲ್ಲಿ ಆಸಕ್ತಿ ಬಂದದ್ದು, ಮುಖ್ಯವಾಗಿ ಚೀಣೀಯರು ಟಿಬೇಟನ್ನು ಚೀಣಾದ ಭಾಗವನ್ನಾಗಿಸಿಕೊಂಡ ನಂತರವೇ. ದಲಾಯಿ ಲಾಮಾ ತನ್ನ ಅನುಚರರೊಂದಿಗೆ ಭಾರತಕ್ಕೆ ವಲಸೆ ಬಂದ ನಂತರ ಭಾರತ-ಚೀಣಾಗಳ ನಡುವೆ ಪರಸ್ಪರ ಅಪನಂಬಿಕೆ ಪ್ರಾರಂಭವಾದ್ದನ್ನು ಗಮನಿಸದಿರಲಾಗದು.

ಸಮಾಜವಾದಿ ರಾಷ್ಟ್ರವೆನಿಸಿಕೊಂಡಿದ್ದ ಚೀಣಾ ದುರಾಕ್ರಮಣದಲ್ಲಿ ತೊಡಗದು ಎಂದು ಭಾರತ ಸರಕಾರ ಗಡಿ ಸಮಸ್ಯೆಯ ಬಗ್ಗೆ ಅಜಾಗರೂಕವಾಗಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ. ಚೀಣಾ ಎಷ್ಟುಮಟ್ಟಿಗೆ ಸಮಾಜವಾದಿ ರಾಷ್ಟ್ರ ಎನ್ನುವುದು ಬೇರೆಯೇ ವಿಷಯ. ಭಾರತದ ಗಡಿಯಲ್ಲಿ ಅದು ನಡೆಸಿದ ಆಕ್ರಮಣ ಸಮಾಜವಾದಿ ಸಿದ್ಧಾಂತ ಆಧಾರಿತ ರಾಷ್ಟ್ರಕ್ಕೆ ತಕ್ಕುದಾಗಿರಲಿಲ್ಲ ಎನ್ನುವುದು ನಿಜ. ಈಗಲೂ ಚೀಣಾ ಸಮಾಜವಾದಿ ಸಿದ್ಧಾಂತಕ್ಕೆ ಎಷ್ಟು ಬದ್ಧ ಎನ್ನುವ ಪ್ರಶ್ನೆ ಇದೆ. ಭಾರತದ ಸಾವಿರಾರು ಚದರ ಕಿಲೋಮೀಟರುಗಳ ಪ್ರದೇಶವನ್ನು ತನ್ನ ವಶದಲ್ಲೇ ಇರಿಸಿಕೊಂಡಿರುವ ಚೀಣಾ ಅದರ ಜೊತೆಗೆ ಇನ್ನಷ್ಟು ಪ್ರದೇಶ ತನಗೆ ಸೇರಬೇಕೆಂದು ಕೇಳುತ್ತಿದೆ. ಚೀಣಾ ಆಕ್ರಮಣವನ್ನು ತೆರವು ಮಾಡಬೇಕೆಂದು ಭಾರತ ಒತ್ತಾಯಿಸುತ್ತಿದೆ. ಭಾರತ ಸರಕಾರ ಟಿಬೇಟಿನ ವಿಚಾರದಲ್ಲಿ ಸ್ಪಷ್ಟವಾದ ಧೋರಣೆ ತಳೆದಿದ್ದರೂ ಚೀಣಾ ಸಿಕ್ಕಿಂ ಭಾರತದ ಭೂಭಾಗವೆಂದು ಮಾನ್ಯ ಮಾಡಲು ಹಿಂದೆ ಮುಂದೆ ನೋಡುತ್ತಿದೆ. ಪ್ರಧಾನಿ ವಾಜಪೇಯಿ ಬೀಜಿಂಗ್ ಭೇಟಿಯ ತರುವಾಯ ಕೆಲವೇ ದಿನಗಳು ಕಳೆದ ಮೇಲೆ ಪ್ರಕಟವಾದ ಒಂದು ವರದಿಯಂತೆ ಚೀಣಾ ಭಾರತದ ಅರುಣಾಚಲ ಪ್ರದೇಶವನ್ನು ವಿವಾದಾತ್ಮಕವಾಗಿ ಪರಿಗಣಿಸುತ್ತಿದೆ. ಅದರ ಭೂಪಟಗಳಲ್ಲಿ ಹಾಗೆಯೇ ಗುರ್ತಿಸಲಾಗಿದೆ. ಈ ಬಗೆಯ ಕೇಳಿಕೆ, ನಿರಾಕರಣೆ, ಅದರ ಸತ್ಯಾಸತ್ಯತೆಗಳು ಏನೇ ಇರಲಿ, ಅವು ಭಾರತ-ಚೀಣಾ ಗಡಿ ವಿವಾದವನ್ನು ಇನ್ನಷ್ಟು ಕಗ್ಗಂಟಾಗಿಸುವುದೇ ಹೊರತು ಬೇರೇನೂ ಇಲ್ಲ. ನಾಲ್ಕು ದಶಕಗಳಿಗೂ ಹೆಚ್ಚು ಕಾಲದಿಂದ ಬೆಳೆದು ಬಂದಿರುವ ಈ ಕಗ್ಗಂಟನ್ನು ಬಿಡಿಸುವುದು ಸುಲಭವೇನಲ್ಲ. ಯಾರದು ಸರಿ, ಯಾರದು ತಪ್ಪು, ಯಾವುದು ಯಾರಿಗೆ ಸೇರಿದ್ದು ಎನ್ನುವ ವಿಚಾರಕ್ಕಿಂತ ಮುಖ್ಯವಾಗಿ ಇಂದು ಈ ಎರಡು ದೇಶಗಳು ಕೊಡು ಕೊಳ್ಳು ಮನೋಭಾವದಿಂದ ವರ್ತಿಸಬೇಕು. ಎರಡೂ ಸರಕಾರಗಳು ಜವಾಬ್ದಾರಿಯಿಂದ ಶಾಂತಿಯುತವಾಗಿ ವಿವಾದವನ್ನು ಬಗೆಹರಿಸಲು ಪ್ರಯತ್ನಿಸಿದರೆ ಶಾಶ್ವತವಾಗಿ ಗಡಿ ನಿಷ್ಕರ್ಷೆ ಮಾಡುವುದು ಸಾಧ್ಯವಾಗುತ್ತದೆ. ಇದಕ್ಕೆ ಸಾಕಷ್ಟು ಕಾಲಾವಕಾಶವೂ ಬೇಕು. ಈ ಮಧ್ಯೆ ಪರಸ್ಪರ ಸಂಬಂಧಗಳನ್ನು ಸದ್ಭಾವನೆಯಿಂದ ಎಲ್ಲ ಕ್ಷೇತ್ರಗಳಿಗೂ ವಿಸ್ತರಿಸಿ ಬೆಳೆಸುವುದು ಸೂಕ್ತ ಮಾರ್ಗ.

■ ಸೀಯಾರ್ಕೆ

# ವಿ. ಗೋರ್ಡನ್ ಚೈಲ್ಡ್‌ರವರ 'ನಗರ ಕ್ರಾಂತಿ' ಪರಿಕಲ್ಪನೆ

ಮೋಹನ್‌ಕೃಷ್ಣ ರೈ, ಕೆ.

ನಗರ ಚರಿತ್ರೆಯ ಅಧ್ಯಯನ ಕೈಗೊಳ್ಳುವಾಗ ಕಂಡುಬರುವ ಪ್ರಮುಖ ಹೆಸರು ವಿ. ಗೋರ್ಡನ್ ಚೈಲ್ಡ್. ಚೈಲ್ಡ್ ಒಂದು ಗ್ರಾಮೀಣ ಪ್ರದೇಶ ನಗರವಾಗಿ ಪರಿವರ್ತನೆಗೊಳ್ಳುವ ಪ್ರಕ್ರಿಯೆಯನ್ನು 'ನಗರ ಕ್ರಾಂತಿ' ಎನ್ನುವ ಪರಿಕಲ್ಪನೆಯೊಂದಿಗೆ ವಿವರಿಸಿದ್ದಾರೆ. ಅದೇ ರೀತಿ ಮಾನವ ತನ್ನ ಬದುಕಿಗಾಗಿ ನಗರಗಳನ್ನು ನಿರ್ಮಿಸಿಕೊಂಡ ಬಗೆ ಹಾಗೂ ಅವುಗಳ ವಿವಿಧ ಹಂತಗಳ ಕೂಲಂಕಷ ಚರ್ಚೆಯನ್ನೂ ಮಾಡಿದ್ದಾರೆ. ಈ ಎಲ್ಲ ವಿವರಗಳು ಅವರ 'ಮ್ಯಾನ್ ಮೇಕ್ಸ್ ಹಿಮ್‌ಸೆಲ್ಫ್' (ಲಂಡನ್, ೧೯೩೬) ಮತ್ತು 'ದಿ ಅರ್ಬನ್ ರೆವಲ್ಯೂಶನ್' (ಲಿವರ್‌ಪೂಲ್, ೧೯೫೦)ನಲ್ಲಿ ಸಿಗುತ್ತವೆ. ನಗರ ಪ್ರದೇಶಗಳು ಗ್ರಾಮೀಣ ಪ್ರದೇಶಗಳಿಗಿಂತ ಯಾವ ರೀತಿ ಭಿನ್ನವಾಗಿರುತ್ತವೆ ಹಾಗೂ ಗ್ರಾಮೀಣ ಪ್ರದೇಶ ನಗರ ಪ್ರದೇಶವಾಗಿ ಪರಿವರ್ತನೆಗೊಳ್ಳುವ ಪ್ರಕ್ರಿಯೆ ಯಾವ ಯಾವ ಅಂಶಗಳನ್ನು ಒಳಗೊಂಡಿರುತ್ತದೆ ಎನ್ನುವುದನ್ನು 'ನಗರ ಕ್ರಾಂತಿ' ಪರಿಕಲ್ಪನೆಯಲ್ಲಿ ಪ್ರತಿಪಾದಿಸಿದ್ದಾರೆ. ಚೈಲ್ಡ್ ಗುರುತಿಸಿದ ಈ ಕೆಳಕಂಡ ಹತ್ತು ಅಂಶಗಳು ಪ್ರಾಚೀನ ನಗರ ಕೇಂದ್ರಗಳಿಗೆ ಸಂಬಂಧಿಸಿದ್ದಾಗಿವೆ :

೧. ಮೊಟ್ಟಮೊದಲ ಬಾರಿಗೆ ಕಾಣಿಸಿಕೊಂಡ ಪಟ್ಟಣಗಳು ಅದಕ್ಕಿಂತ ಹಿಂದಿನ ವ್ಯವಸ್ಥೆಗೆ ಹೋಲಿಸಿ ನೋಡಿದರೆ ಹೆಚ್ಚು ವಿಸ್ತಾರವಾಗಿದ್ದು ದಟ್ಟವಾದ ಜನಸಂದಣಿಯಿಂದ ಕೂಡಿದ್ದವು.

೨. ನಗರ ಮಿತಿಯ ಹೊರಗಡೆ ಕೃಷಿಕರು ವ್ಯವಸಾಯ ಮಾಡುತ್ತಿದ್ದರು. ನಗರ ಪ್ರದೇಶ ಕೃಷಿಯೇತರ, ಅನುತ್ಪಾದಕ ವರ್ಗಗಳಿಂದ ಕೂಡಿತ್ತು. ತಾತ್ಕಾಲಿಕವಾಗಿ ಜೀವಿಸುತ್ತಿದ್ದ ವರ್ಗಗಳೂ ಇದ್ದವು. ಕೃಷಿ ಮತ್ತು ಕೃಷಿ ಸಂಬಂಧಿ ಉದ್ದಿಮೆಗಳಲ್ಲಿ ತೊಡಗಿಸಿಕೊಂಡಿದ್ದ ಜನರು ಈ ರೀತಿ ನಗರ ಪ್ರದೇಶಗಳಲ್ಲಿ ತಾತ್ಕಾಲಿಕವಾಗಿ ಜೀವಿಸುತ್ತಿದ್ದರು. ಕುಶಲಕರ್ಮಿಗಳು, ವ್ಯಾಪಾರಸ್ಥರು, ಅಧಿಕಾರಿಗಳು, ಪುರೋಹಿತ ವರ್ಗ ನಗರ ಪ್ರದೇಶಗಳಲ್ಲಿ ಜೀವಿಸುತ್ತಿದ್ದು ಕೃಷಿಕರ ಹೆಚ್ಚುವರಿ ಉತ್ಪಾದನೆಯನ್ನು ಅವಲಂಬಿಸಿದ್ದರು.

೩. ಉತ್ಪಾದನೆಯಲ್ಲಿ ತೊಡಗಿರುತ್ತಿದ್ದ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಹೆಚ್ಚುವರಿ ಉತ್ಪಾದನೆಯನ್ನು ದೇವತೆಗೆ ಅಥವಾ ದೇವಾಂಶಸಂಭೂತ ನಾಯಕನಿಗೆ ಕೊಡಬೇಕಾಗಿತ್ತು. ಅವನು ಹೆಚ್ಚುವರಿ ಉತ್ಪಾದನೆಯನ್ನು ಕ್ರೋಢೀಕರಿಸುತ್ತಿದ್ದ.

೪. ಸ್ಮಾರಕ ಕಟ್ಟಡಗಳು ನಗರ ಪ್ರದೇಶಗಳನ್ನು ಗ್ರಾಮೀಣ ಪ್ರದೇಶಗಳಿಂದ ಬೇರ್ಪಡಿಸುತ್ತಿದ್ದುದೇ ಅಲ್ಲದೆ ಹೆಚ್ಚುವರಿ ಸಂಪತ್ತಿನ ಸಂಕೇತಗಳಾಗಿದ್ದವು.

೫. ಗ್ರಾಮೀಣ ಪ್ರದೇಶದ ಹೆಚ್ಚುವರಿ ಸಂಪತ್ತು ದೇವಾಲಯಗಳಲ್ಲಿ ಮತ್ತು ಅಧಿಕಾರಿಗಳ ಮನೆಗಳಲ್ಲಿ ಸಂಗ್ರಹವಾಗುತ್ತಿತ್ತು. ಈ ಸಂಪತ್ತಿನ ಹೆಚ್ಚಿನ ಭಾಗ ಪುರೋಹಿತರು, ಸೈನಿಕ ಮುಖಂಡರು ಹಾಗೂ ಅಧಿಕಾರಿಗಳಿಗೆ ಹೋಗುತ್ತಿತ್ತು. ಇದು ಆಳುವ ವರ್ಗ ರೂಪುಗೊಳ್ಳುವುದಕ್ಕೆ ನೇರವಾಗಿ ಕಾರಣವಾಯಿತು. ನಗರ ಪ್ರದೇಶಗಳಲ್ಲಿನ ಇನ್ನಿತರ ಅನುತ್ಪಾದಕ ವರ್ಗದವರು ಆಳುವ ವರ್ಗವನ್ನು ಸಂಪತ್ತು ಹಾಗೂ ಇನ್ನಿತರ ಅವಶ್ಯಕತೆಗಳಿಗಾಗಿ ಅವಲಂಬಿಸಿರಬೇಕಾಗುತ್ತಿತ್ತು.

೬. ಕ್ರೋಢೀಕರಣಗೊಳ್ಳುವ ಹೆಚ್ಚುವರಿ ಸಂಪತ್ತು ಹಾಗೂ ಕಂದಾಯ ಆಡಳಿತಕ್ಕೆ ಸಂಬಂಧಿಸಿದ ವಿವರಗಳನ್ನು ದಾಖಲಿಸುವ ಹೊಸ ವ್ಯವಸ್ಥೆಯೊಂದು ಕಾಣಿಸಿಕೊಂಡಿತು. ಅಂಕಿ-ಸಂಖ್ಯೆಗಳ ಮೂಲಕ ಬರೆದಿಡುವ ವಿಧಾನ ಆರಂಭಗೊಂಡಿತು.

೭. ಬರವಣಿಗೆಯ ಅನ್ವೇಷಣೆ ಆಡಳಿತ ಯಂತ್ರವನ್ನು ಚುರುಕುಗೊಳಿಸಿತು. ಅಂಕಗಣಿತ, ರೇಖಾಗಣಿತ ಮತ್ತು ಖಗೋಳ ವಿದ್ಯೆ ಪ್ರಚಾರಗೊಳ್ಳಲಾರಂಭಿಸಿತು.

೮. ಕಲಾತ್ಮಕವಾದ ಕೆಲಸಗಳಿಗೆ ಹೊಸ ನಿರ್ದೇಶನ ನೀಡಲಾಯಿತು. ಕುಶಲ ಕರ್ಮಿಗಳು ಹೊಸ ಕಲಾ ಶೈಲಿಗಳಿಂದ ನಗರ ಜೀವನದ ವಿಭಿನ್ನ ಲಕ್ಷಣಗಳನ್ನು ಸೂಚಿಸಿದರು.

೯. ಸಂಪತ್ತಿನ ಕ್ರೋಢೀಕರಣ ವಿದೇಶಿ ವ್ಯಾಪಾರಕ್ಕೆ ಎಡೆಮಾಡಿಕೊಟ್ಟಿತು. ಕೈಗಾರಿಕೆಗಳಿಗೆ ಬೇಕಾದ ಕಚ್ಚಾ ವಸ್ತುಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು.

೧೦. ಕುಶಲಕರ್ಮಿಗಳಿಗೆ ಅವರ ಉದ್ಯೋಗಕ್ಕೆ ಬೇಕಾಗುವ ಕಚ್ಚಾ ಸಾಮಗ್ರಿಗಳನ್ನು ಪೂರೈಸಲಾಗುತ್ತಿತ್ತು ಹಾಗೂ ರಕ್ಷಣೆಯನ್ನೂ ನೀಡಲಾಗುತ್ತಿತ್ತು. ನಗರ ಪ್ರದೇಶ ಒಂದು ಸಮುದಾಯವಾಗಿದ್ದರಿಂದಾಗಿ ಕುಶಲ ಕರ್ಮಿಗಳು ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ಅದಕ್ಕೆ ಸಂಬಂಧಿಸಿದ್ದವರಾಗಿದ್ದರು.

ಚೈಲ್ಡ್‌ರವರ ನಗರ ಕ್ರಾಂತಿಯನ್ನು ಸೂಚಿಸುವ ಈ ಹತ್ತು ಅಂಶಗಳು ಅನೇಕ ರೀತಿಯ ವಾದ-ಪ್ರತಿವಾದಗಳಿಗೆ ಹಾಗೂ ಹೊಸ ನಗರ ಸಿದ್ಧಾಂತಗಳ ಹುಟ್ಟಿಗೆ ಕಾರಣವಾಯಿತು. ಚೈಲ್ಡ್‌ಗೆ ವಿದ್ವಾಂಸರ ವಲಯಗಳಲ್ಲಿ ವ್ಯಾಪಕ ಬೆಂಬಲವೇನೂ ಸಿಗಲಿಲ್ಲ. ಆದರೆ ಪ್ರತಿಯೊಬ್ಬ ನಗರ ಅಧ್ಯಯನಕಾರನಿಗೂ ಚೈಲ್ಡ್ ಪರಿಚಿತರಾಗಿಬಿಟ್ಟರು. ಅವರು ಪ್ರತಿಪಾದಿಸಿದ ನಗರ ಕ್ರಾಂತಿ ಪರಿಕಲ್ಪನೆ ನಗರ ಅಧ್ಯಯನ ಕ್ಷೇತ್ರದಲ್ಲಿ ಕ್ರಾಂತಿಯನ್ನು ಉಂಟುಮಾಡಿದ್ದಂತೂ ನಿಜ. ರಾಬರ್ಟ್ ಮೆಕ್‌ಕಾರ್‌ಮಿಕ್ ಆಡಮ್ಸ್, ಲೂಯಿ ಮಂಫೋರ್ಡ್, ಎ. ಘೋಷ್, ಆರ್. ಎಸ್. ಶರ್ಮಾ, ವಿಜಯ್ ಕುಮಾರ್ ಟಾಕೂರ್ ಮುಂತಾದ ವಿದ್ವಾಂಸರು ನಗರಕ್ರಾಂತಿ ಪರಿಕಲ್ಪನೆಯನ್ನು ಗಂಭೀರವಾಗಿ ಪರಿಗಣಿಸಿ ತಮ್ಮ ಕೃತಿಗಳಲ್ಲಿ ಚರ್ಚೆಗೆ ಎತ್ತಿಕೊಂಡರು. ಕ್ರಾಂತಿ ಎನ್ನುವ ಪದ ಇಲ್ಲಿ ಹೆಚ್ಚು ಚರ್ಚೆಗೆ ಒಳಗಾಗಿರುವಂಥದು. ಕ್ರಾಂತಿಯೆಂದರೆ ಅದು ಇರುವ ವ್ಯವಸ್ಥೆಯನ್ನು ಬುಡಮೇಲು ಮಾಡಿ ಹೊಸ ವ್ಯವಸ್ಥೆಯ ಹುಟ್ಟಿಗೆ ಕಾರಣವಾಗುವಂಥದ್ದು. ಆದರೆ ಚೈಲ್ಡ್ ಗುರುತಿಸಿದ ಹತ್ತು ಅಂಶಗಳು ಕ್ರಾಂತಿಕಾರಿ ಬದಲಾವಣೆಗಳಾಗಿ ಕಂಡುಬರುವುದಿಲ್ಲ ಎನ್ನುವುದು ಪ್ರಮುಖ ಟೀಕೆ. ಅದೇ ರೀತಿ ಅವರು ಸೂಚಿಸಿದ ಹತ್ತು ಲಕ್ಷಣಗಳು ಪರಸ್ಪರ ಒಂದಕ್ಕೊಂದು ಸಂಬಂಧವಿಲ್ಲದ ರೀತಿಯಲ್ಲಿ ಇವೆ ಹಾಗೂ ಕೆಲವು ಲಕ್ಷಣಗಳು ಪಟ್ಟಣಗಳ ಹುಟ್ಟಿಗೆ ತಕ್ಷಣದ ಕಾರಣಗಳಾಗಿ ಕಂಡುಬರುವುದಿಲ್ಲ ಎನ್ನುವುದು ಮಂಫೋರ್ಡ್, ರೆಡ್‌ಫೀಲ್ಡ್ ಮುಂತಾದವರ ಅಭಿಪ್ರಾಯ. ನಗರ ಕ್ರಾಂತಿಯ ಹುಟ್ಟಿಗೆ ಹೊಸ ರಾಜಕೀಯ ಮತ್ತು ಧಾರ್ಮಿಕ ಸಂಸ್ಥೆಗಳ ಹುಟ್ಟು ಮೂಲಕಾರಣ ಎನ್ನುವುದು ಆಡಮ್ಸ್‌ರವರ ವಾದ.

ಚೈಲ್ಡ್ ಪ್ರತಿಪಾದಿಸಿದ ಹೆಚ್ಚಿನ ಅಂಶಗಳು ಮಧ್ಯಕಾಲೀನ ಮತ್ತು ಆಧುನಿಕ ಸಂದರ್ಭದ ಭಾರತದ ನಗರ ಕೇಂದ್ರಗಳಿಗೆ ಹೆಚ್ಚಾಗಿ ಅನ್ವಯಿಸುತ್ತವೆಯೇ ಹೊರತು ಪ್ರಾಚೀನ ಭಾರತದ ಅದರಲ್ಲೂ ಆರಂಭದ ಪಟ್ಟಣಗಳಿಗಲ್ಲ. ಉದಾಹರಣೆಗೆ, ನಗರ ದೇವತೆ ಅಥವಾ ದೇವಾಂಶಸಂಭೂತ ಅರಸನ ಕಲ್ಪನೆ, ಸ್ಮಾರಕ-ಕಟ್ಟಡಗಳು, ಸುಸಜ್ಜಿತ ರಾಜಪ್ರಭುತ್ವ ಮಾದರಿಯ ಸರಕಾರ ಇತ್ಯಾದಿ. ಭಾರತದ ಸಂದರ್ಭದಲ್ಲಿ ನೋಡುವುದಾದರೆ ಕ್ರಿ. ಪೂ. ಆರನೆಯ ಶತಮಾನದಿಂದ ರಾಜ್ಯ, ರಾಜಪ್ರಭುತ್ವ ವ್ಯವಸ್ಥೆ ಕಾಣಿಸಿಕೊಳ್ಳಲಾರಂಭಿಸಿತು. ಅದಕ್ಕಿಂತ ಹಿಂದೆ ಆ ರೀತಿಯ ವ್ಯವಸ್ಥೆಯಾಗಲಿ, ನಗರ-ದೇವತೆಯ ಕಲ್ಪನೆಯಾಗಲಿ ಇದ್ದಂತೆ ಕಂಡುಬರುವುದಿಲ್ಲ ಹಾಗೂ ಅದೊಂದು ನಗರ ವ್ಯವಸ್ಥೆಯ ರೂಪುಗೊಳ್ಳುವಿಕೆಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಿರಲಿಲ್ಲ. ಕ್ರಿ. ಪೂ. ೬ನೆಯ ಶತಮಾನದ ನಂತರ ಹಲವಾರು ರಾಜಧಾನಿ ಪಟ್ಟಣಗಳು, ಧಾರ್ಮಿಕ ಕೇಂದ್ರಗಳು ಹುಟ್ಟಿಕೊಂಡವು. ಇದರ ಪರಿಣಾಮವಾಗಿ ಸಣ್ಣ ಹಾಗೂ ಬೃಹತ್ ಸ್ಮಾರಕ ಕಟ್ಟಡಗಳು ನಿರ್ಮಾಣಗೊಂಡವು. ಚೈಲ್ಡ್ ಗುರುತಿಸಿದ ನಗರ ಪ್ರದೇಶಗಳ ಲಕ್ಷಣಗಳಾದ ಜನಸಂಖ್ಯೆಯ ಹೆಚ್ಚಳ, ಅನುತ್ಪಾದಕ ವರ್ಗಗಳ (ಆಹಾರ ಉತ್ಪಾದನೆಯಲ್ಲಿ ತೊಡಗದ) ವಾಸ್ತವ್ಯ, ಬರವಣಿಗೆಯ ಆರಂಭ, ವಿದೇಶಿ ವ್ಯಾಪಾರ, ಕಲಾಶೈಲಿಗಳು, ನಗರವಾಸಿಗಳ ರಕ್ಷಣೆ ಮುಂತಾದವು ಪ್ರಾಚೀನ ಭಾರತದ ನಗರ ಕೇಂದ್ರಗಳ ಸಂದರ್ಭಗಳಲ್ಲಿ ಸ್ವಲ್ಪ ಮಟ್ಟಿಗೆ ಕಂಡುಬರುತ್ತವೆ. ಈ ವಿಚಾರಗಳು ಎ. ಘೋಷ್, ವಿಜಯ್ ಕುಮಾರ ಟಾಕೂರ್, ಆರ್. ಎಸ್. ಶರ್ಮಾ ಮುಂತಾದ ವಿದ್ವಾಂಸರ ಬರವಣಿಗೆಗಳಿಂದ ಸಾಬೀತಾಗಿವೆ.

ಚೈಲ್ಡ್ ಪ್ರತಿಪಾದಿಸಿದ ಹತ್ತು ಅಂಶಗಳು ಪ್ರಪಂಚದ ಎಲ್ಲ ದೇಶಗಳ ನಗರೀಕರಣದ ಸಂದರ್ಭದಲ್ಲೂ ಕಂಡುಬರುವ ಸಾಮಾನ್ಯ ಲಕ್ಷಣಗಳು ಎನ್ನುವ ತೀರ್ಮಾನಕ್ಕೆ ಬರಲು ಸಾಧ್ಯವಾಗುವುದಿಲ್ಲ. ನಗರ ಕೇಂದ್ರಗಳ ಹುಟ್ಟು, ಬೆಳವಣಿಗೆ ಹಾಗೂ ಅವನತಿಯ ಕುರಿತು ನಗರ ಅಧ್ಯಯನಕಾರರಲ್ಲಿ ಒಮ್ಮತದ ತೀರ್ಮಾನಗಳಿಲ್ಲ. ಅದರಲ್ಲೂ ಆರಂಭಿಕ (ಪ್ರಾಚೀನ) ಪೇಟೆ - ಪಟ್ಟಣಗಳ ಉಗಮ, ಬೆಳವಣಿಗೆ ಹಾಗೂ

೪೮ನೇ ಪುಟಕ್ಕೆ



# ಔಷಧಿ ಕ್ಷೇತ್ರದಲ್ಲಿ ಭಾರತ

ಜನಾರೋಗ್ಯ ಸಾಧನೆ ಸರಕಾರದ ಜವಾಬ್ದಾರಿಯಾಗುತ್ತದೆ. ಜನಾರೋಗ್ಯ ಸಾಧಿಸಲು ಔಷಧಿಗಳು ಬಹು ಮುಖ್ಯ ಪಾತ್ರ ವಹಿಸುತ್ತವೆ. ಭಾರತ, ವಿಜ್ಞಾನ ಹಾಗೂ ತಂತ್ರಜ್ಞಾನದಲ್ಲಿ ಮುನ್ನಡೆ ಸಾಧಿಸಿದೆ. ಈ ಮುನ್ನಡೆಯಿಂದ ಔಷಧಿಗಳನ್ನು ತಯಾರಿಸಲು ಸಾಧ್ಯವಾಗುತ್ತದೆ. ಆದರೆ ಅದರಿಂದ ಜನಸಾಮಾನ್ಯರಿಗೆ ಪ್ರಯೋಜನ ವಾಗಲು ರಾಜಕೀಯ ಒಲವು, ವಿಜ್ಞಾನ ಹಾಗೂ ತಂತ್ರಜ್ಞಾನದಷ್ಟೇ ಮುಖ್ಯವಾಗುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿಯೇ ಭಾರತ ಔಷಧಿ ಕ್ಷೇತ್ರದಲ್ಲಿ ಕಾಲಿಟ್ಟಿತಾದರೂ ಇಲ್ಲಿನ ಔಷಧಿ ಕ್ಷೇತ್ರ ಬಹುರಾಷ್ಟ್ರೀಯ ಕಂಪನಿಗಳ ಹಿಡಿತದಲ್ಲೇ ಇದ್ದಿತು. ೧೯೫೨ರಲ್ಲಿ ಅಮೆರಿಕದ ಸೆನೇಟರ್ ಕೆಫವೂರ್ ನೇತೃತ್ವದ ಸಮಿತಿಯ ಸಮೀಕ್ಷೆ ಪ್ರಕಾರ ಭಾರತದಲ್ಲಿ ಔಷಧಿಗಳ ಬೆಲೆ ಇತರೆ ದೇಶಗಳಿಗೆ ಹೋಲಿಸಿದರೆ ಅತಿ ಹೆಚ್ಚು ಎಂದು ಕಂಡುಬಂದಿತು. ಮಲೇರಿಯಾ, ಕ್ಷಯರೋಗ ಮುಂತಾದವುಗಳಿಗೆ ಬೇಕಾದ ಔಷಧಿಗಳು ದೊರಕುತ್ತಿರಲಿಲ್ಲ. ಭಾರತದ ಔಷಧಿ ಉದ್ಯಮವು ಬಹುರಾಷ್ಟ್ರೀಯ ಕಂಪನಿಗಳ ಪೈಪೋಟಿಯನ್ನು ಎದುರಿಸಿ ಬೆಳೆಯಲು ಸಾಧ್ಯವಿರಲಿಲ್ಲ.

ಇಂತಹ ಪರಿಸ್ಥಿತಿಯನ್ನು ಎದುರಿಸಲು ಸಾರ್ವಜನಿಕ ಔಷಧಿ ಉದ್ಯಮವನ್ನು ಸ್ಥಾಪಿಸಲು ಸಂಸತ್ತಿನಲ್ಲಿ ತೀರ್ಮಾನ (೧೯೫೬) ತೆಗೆದುಕೊಳ್ಳಲಾಯಿತು. ಐ.ಡಿ.ಪಿ.ಎಲ್. (ಇಂಡಿಯನ್ ಡ್ರಗ್ಸ್ ಮತ್ತು ಫಾರ್ಮಾಸಿಟಿಕಲ್ಸ್ ಲಿಮಿಟೆಡ್) ಹಾಗೂ ಹೆಚ್.ಎ.ಎಲ್. (ಹಿಂದೂಸ್ತಾನ್ ಆ್ಯಂಟಿಬಯೋಟಿಕ್ಸ್ ಲಿಮಿಟೆಡ್) ಮುಂತಾದ ಕಂಪನಿಗಳು ಸ್ಥಾಪನೆಗೊಂಡವು. ಬಹುರಾಷ್ಟ್ರೀಯ ಕಂಪನಿಗಳು ಈ ಪ್ರಯತ್ನಕ್ಕೆ ಕೈಗೂಡಿಸದಿದ್ದರೂ, ಯುನಿಸೆಫ್ ಹಾಗೂ ಅಂದಿನ ಸೋವಿಯತ್ ಒಕ್ಕೂಟ, ಈ ಪ್ರಯತ್ನಕ್ಕೆ ನೆರವು ನೀಡಿದವು. ಈ ಸಾರ್ವಜನಿಕ ಔಷಧಿ ಉದ್ಯಮಗಳು ಭಾರತಕ್ಕೆ ಅಗತ್ಯವಾದ ಆ್ಯಂಟಿಬಯೋಟಿಕ್ಸ್, ಕ್ಷಯರೋಗದ ಔಷಧಿಗಳು, ಮುಂತಾದವುಗಳನ್ನು ತಯಾರಿಸಿದವು. ಈ ಬೆಳವಣಿಗೆಯ ಪರಿಣಾಮವಾಗಿ ಔಷಧಿ ಬೆಲೆಗಳು ಕಡಿಮೆಯಾಗಿ ಜನಸಾಮಾನ್ಯರಿಗೆ ಚಿಕಿತ್ಸೆ ಲಭ್ಯವಾಯಿತು ಹಾಗೂ ಹಿಂದೆಂದೂ ಸಾಧ್ಯವಾಗದ ಔಷಧಿ ರಫ್ತು ಪ್ರಾರಂಭವಾಯಿತು.

ಸಾರ್ವಜನಿಕ ಕ್ಷೇತ್ರದ ಉದ್ಯಮ ಬೆಳೆದರೂ, ಭಾರತದ ಔಷಧಿ ಉದ್ಯಮ ಬಹುರಾಷ್ಟ್ರೀಯ ಕಂಪನಿಗಳ ಹಿಡಿತದಲ್ಲಿಯೇ ಇದ್ದಿತು. ೧೯೭೦ರ ಹೊತ್ತಿಗೆ ೧೨ ವರ್ಷದ ಸುದೀರ್ಘ ಚರ್ಚೆಯ ನಂತರ ರೂಪುಗೊಂಡ ಭಾರತೀಯ ಸ್ವಾಮ್ಯ (ಪೇಟೆಂಟ್) ಕಾನೂನು ಜಾರಿಗೆ ಬಂದು ಭಾರತೀಯ ಕಂಪನಿಗಳು ವಿಧಾನ ಸ್ವಾಮ್ಯ (ಪ್ರಾಸೆಸ್ ಪೇಟೆಂಟ್)ವನ್ನು ಅನುಸರಿಸಲು ಪರವಾನಗಿ ದೊರಕಿತು. ಇದರ ಪರಿಣಾಮವಾಗಿ ಭಾರತದಲ್ಲಿ ಸುಮಾರು ೧೦೦ ಅಗತ್ಯ ಔಷಧಿಗಳನ್ನು ತಯಾರಿಸಲು ಬೇಕಾದ ತಂತ್ರಜ್ಞಾನ ಲಭ್ಯವಾಯಿತು, ಭಾರತ ಸ್ವಾವಲಂಬನೆಯತ್ತ ಕಾಲಿಡುವಂತಾಯಿತು.

ಇದೇ ವೇಳೆಗೆ ಭಾರತ ಸರಕಾರ ನೇಮಿಸಿದ ಹಾಥೀ ಸಮಿತಿ ವರದಿ ಭಾರತದ ಔಷಧಿ ಕ್ಷೇತ್ರವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿ, ಔಷಧಿ ಕ್ಷೇತ್ರವನ್ನು ಸುಧಾರಿಸಲು ಸಲಹೆ ನೀಡಿತು. ಈ ವರದಿಯಲ್ಲಿ ವಿಶ್ವ ಆರೋಗ್ಯ ಸಂಸ್ಥೆಯು ನಂತರ ಹೊರತಂದ ಅಗತ್ಯ ಔಷಧಿ ಪರಿಕಲ್ಪನೆ ಇದ್ದಿತಲ್ಲದೆ, ಈ ವರದಿ ಬಹುರಾಷ್ಟ್ರೀಯ ಕಂಪನಿಗಳ ಹಿಡಿತವನ್ನು ಸಡಿಲಿಸಲು ಶಿಫಾರಸ್ಸು ಮಾಡಿತ್ತು.

ಭಾರತ ಔಷಧಿ ಕ್ಷೇತ್ರವನ್ನು ಸುಧಾರಿಸಲು ಇನ್ನೊಂದು ಮುಖ್ಯ ಸಾಧನೆಯ ಅಗತ್ಯವಿತ್ತು. ಆ ಸಾಧನೆಯೆಂದರೆ ಜನಪರ ಔಷಧಿ ನೀತಿ. ಹಾಥೀ ವರದಿಯನ್ನು ಅನುಸರಿಸಿ ಬಾಂಗ್ಲಾ ದೇಶ ತನ್ನ ಔಷಧಿ ನೀತಿ (೧೯೮೨)ಯನ್ನು ರೂಪಿಸಿಕೊಂಡಿತು. ಆದರೆ ಭಾರತ ಹಾಥೀ ವರದಿಯನ್ನು ಕಸದ ಬುಟ್ಟಿಗೆ ಹಾಕಿತು. ೭೮, ೮೬, ೯೪ರ ಔಷಧಿ ನೀತಿಯಲ್ಲಿ ಹಾಥೀ ವರದಿಯ ಶಿಫಾರಸ್ಸನ್ನು ಅನುಸರಿಸಲಿಲ್ಲ ಹಾಗೂ ಔಷಧಿ ನೀತಿ ಜನಪರವಾಗದೆ ಉದ್ಯಮಪರವಾಯಿತು.

ಭಾರತ ಸರಕಾರ ಅಂತರರಾಷ್ಟ್ರೀಯ ಗ್ಯಾಟ್ ಒಪ್ಪಂದಕ್ಕೆ ಮಣಿದು, ೧೯೭೦ರ ಪೇಟೆಂಟ್ ಕಾನೂನನ್ನು ಕೈಬಿಟ್ಟು, ಹೊಸ ಪೇಟೆಂಟ್ ನೀತಿಯನ್ನು ಬರಮಾಡಿಕೊಂಡಿತು. ಈ ನೀತಿ ೨೦೦೫ರಲ್ಲಿ ಜಾರಿಗೆ ಬರಲಿದೆ. ಇದು ಭಾರತೀಯ ಪೇಟೆಂಟ್ ನೀತಿಗೆ ತದ್ವಿರುದ್ಧವಾಗಿದ್ದು ಬಹುರಾಷ್ಟ್ರೀಯ ಔಷಧಿ ಕಂಪನಿಗಳಿಗೆ ಸಹಾಯಕವಾಗುತ್ತದೆ. ಇದರ ಪರಿಣಾಮವಾಗಿ ಔಷಧಿ ಬೆಲೆಗಳು ಹೆಚ್ಚುತ್ತವಲ್ಲದೆ, ಭಾರತ ಔಷಧಿ ಕ್ಷೇತ್ರದ ಸ್ವಾಲಂಬನೆಯನ್ನು ಕೈಬಿಟ್ಟಂತಾಗುತ್ತದೆ.

ಇದರ ಪರಿಣಾಮವಾಗಿಯೆ ಕ್ರಮೇಣ ಸಾರ್ವಜನಿಕ ಔಷಧಿ ಉದ್ಯಮವನ್ನು ನಿಷ್ಕ್ರಿಯಗೊಳಿಸಲಾಗುತ್ತಿದೆ. ಸಾರ್ವಜನಿಕ ಉದ್ಯಮ ಲಾಭದಾಯಕವಲ್ಲ ಎಂಬ ಅವೈಜ್ಞಾನಿಕ ನೀತಿಯನ್ನು ಆಧರಿಸಿದ ಈ ನೀತಿ ಬಹುರಾಷ್ಟ್ರೀಯ ಕಂಪನಿಗಳನ್ನು ಭಾರತ ಬರಮಾಡಿಕೊಳ್ಳಲು ಸಹಾಯ ಮಾಡುತ್ತದೆ.

ವಿಶ್ವ ಆರೋಗ್ಯ ಸಂಸ್ಥೆಯ ಅಗತ್ಯ ಔಷಧಿ ಪಟ್ಟಿ ಹಾಗೂ ಇತರೇ ಸಲಹೆಗಳನ್ನು ಭಾರತ ಅನುಸರಿಸಲೇ ಇಲ್ಲ. ಇತ್ತೀಚೆಗೆ ತಾಂತ್ರಿಕವಾಗಿ ಅನುಸರಿಸಿದ ಅಗತ್ಯ ಔಷಧಿ ಪಟ್ಟಿ, ಅನುಷ್ಠಾನಕ್ಕೆ ಬಂದಿಲ್ಲ. ಜನಾರೋಗ್ಯ ಸುಧಾರಿಸಬಹುದಾದ ಈ ಸಲಹೆಗಳನ್ನು ಕೈ ಬಿಡಲು ಭಾರತ ಮುಂದಾಗುತ್ತಿರುವುದು ನಿಜಕ್ಕೂ ನಿಂದನಾರ್ಹ. ಸಾರ್ವಜನಿಕ ಕ್ಷೇತ್ರದ ಉದ್ಯಮ ಮತ್ತು ಭಾರತೀಯ ಪೇಟೆಂಟ್ ಕಾನೂನು ಹಾಗೂ ಹಾಥೀ ಸಮಿತಿ ವರದಿ, ಇವು ಭಾರತದ ಸಾಧನೆಯಾದರೆ ಹಾಥೀ ಸಮಿತಿಯನ್ನು ನಿರಾಕರಿಸುವುದು, ಭಾರತೀಯ ಪೇಟೆಂಟ್ ಕಾನೂನನ್ನು ಬದಲಾಯಿಸುವುದು, ಹಾಗೂ ಸಾರ್ವಜನಿಕ ಕ್ಷೇತ್ರದ ಉದ್ಯಮವನ್ನು ಮುಚ್ಚುವುದು ನಕಾರಾತ್ಮಕ ಬೆಳವಣಿಗೆಯಾಗುತ್ತದೆ.

**ಡಾ|| ಪ್ರಕಾಶ್ ಸಿ. ರಾವ್**
ಕಾರ್ಯದರ್ಶಿ, ಔಷಧಿ ಕ್ರಿಯಾ ವೇದಿಕೆ, ಬೆಂಗಳೂರು



ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯ ಸಾಹಿತ್ಯ ಪ್ರಚಾರ ಆಂದೋಲನದ ಮುಂದುವರಿಕೆಯಾಗಿ ಪುಸ್ತಕ ಪ್ರದರ್ಶನ ಜಯನಗರದ ಜನರಲ್ ಆಸ್ಪತ್ರೆಯಲ್ಲಿ ೧೮.೮.೦೫ ರಂದು ಪ್ರಾರಂಭವಾಯಿತು.

ಆಸ್ಪತ್ರೆಯ ಅಧೀಕ್ಷಕರಾದ ಡಾ|| ಪಿ. ಕೆ. ಸತ್ಯನಾರಾಯಣ ಹಾಗೂ ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷರಾದ ಶ್ರೀಮತಿ ಉಷಾ ಪಿ. ರೈ ಅವರು ಜ್ಯೋತಿ ಬೆಳಗಿಸಿ ಪುಸ್ತಕ ಪ್ರದರ್ಶನ ಉದ್ಘಾಟಿಸಿದರು.

# ಹಾರಾಡುವ ತಟ್ಟೆಗಳು ಮತ್ತು ತೇಲಾಡುವ ದೆವ್ವಗಳು

ನಮ್ಮೂರು ಸಣ್ಣ ಹಳ್ಳಿ. ಒಂದಾನೊಂದು ಕಾಲದಲ್ಲಿ ನಮ್ಮೂರು ದೆವ್ವಗಳ ಕಾಟಕ್ಕೆ ಹೆಸರಾಗಿತ್ತು. ಕೆಲವು ದೆವ್ವಗಳು ಅಲ್ಲೇ ನೆಲಸಿದ್ದವು. ಇನ್ನು ಕೆಲವು ದಾರಿಹೋಕ ದೆವ್ವಗಳು. ಬರಿಯ ಒಂದೆರಡು ರಾತ್ರೆಗಳನ್ನು ಸುಖವಾಗಿ ಕಳೆದು ಮುಂದೆ ಹೋಗುತ್ತಿದ್ದವು. ಈ ದೆವ್ವಗಳು ಊರ ಜನರಿಗೆ ಬಗೆಬಗೆಯ ಕಾಟ ಕೊಡುತ್ತಿದ್ದವು. ದೆವ್ವಗಳ ಕಾಟದಿಂದ ಬಳಲಿದ್ದ ನಮ್ಮೂರ ಜನ ನಾಲ್ಕಕ್ಷರ ಕಲಿತು ಓದು, ಬರಹ ಬಲ್ಲವರಾದರು. ವಿದ್ಯೆಗೂ, ದೆವ್ವಗಳಿಗೂ ಎಣ್ಣೆ ಸೀಗೇಕಾಯಿ ಸಂಬಂಧವಿದೆ. ಆದ್ದರಿಂದ ದೆವ್ವಗಳಿಗೆ ನಮ್ಮೂರನ್ನು ಕಂಡರೆ ನಡುಕ ಪ್ರಾರಂಭವಾಯಿತು. ಈಗ ಅವೆಲ್ಲಾ ಬೇರೆ ಗ್ರಾಮಗಳಿಗೆ ವಲಸೆ ಹೋಗಿವೆ. ಅಲ್ಲಿಯ ಜನರಿಗೆ ತಮ್ಮ ಕಾಟವನ್ನು ಮುಂದುವರೆಸಿವೆ. ಸರಸ್ವತಿಯ ಗಾಳಿ ಬೀಸಿದ್ದಕ್ಕೇ ಬೆದರಿ ಓಡಿಹೋದ ದೆವ್ವಗಳನ್ನು ಹಗುರವಾಗಿ ಕಾಣಬೇಡಿ. ಅವು ಯಾವಾಗ ಯಾವ ರೂಪದಲ್ಲಿ ಮತ್ತೆ ಬಂದು ಕಾಡುತ್ತವೆಂದು ಹೇಳುವುದು ಸುಲಭವಲ್ಲ. ಭಯಾನಕ ರೂಪವುಳ್ಳ ಶಾಕಿಣಿ, ಡಾಕಿಣಿಯರ ಬಗ್ಗೆ ನಿಮಗೆ ತಿಳಿದೇ ಇದೆ. ಅವುಗಳನ್ನು ಕಂಡು ಯಾರೂ ಸಂತಸ ಪಡುವುದಿಲ್ಲ. ಆದರೆ, ಅವು ನಡುರಾತ್ರೆ ಮೋಹಿನಿಯರ ವೇಷ ಹಾಕಿಕೊಂಡು, ಅಪ್ಪಿ ತಪ್ಪಿ ಊರ ಹೊರಬಂದ ಯುವಕರನ್ನು ತಮ್ಮ ಬಲೆಗೆ ಬೀಳಿಸಿಕೊಳ್ಳುವುದು ಅಪರೂಪವಲ್ಲ.

ಈಗ ನಮ್ಮೂರಿನಲ್ಲಿ ದೆವ್ವಗಳ ವಿಷಯ ಹೆಚ್ಚು ಕೇಳಿಬರುವುದಿಲ್ಲ. ಅದೇನಿದ್ದರೂ ಮಕ್ಕಳಿಗೆ ಉಣಿಸಲು ಪ್ರಯತ್ನಿಸಿ ಬಸವಳಿದ ತಾಯಂದಿರ ಅಸ್ತ್ರವಷ್ಟೆ. ಆದರೂ ಅವು ರೂಪಮರೆಸಿ, ಮೋಹಿನಿಯರಂತೆ ನಟಿಸುತ್ತಾ ಕಾಡಬಹುದು ಎಂಬುದನ್ನು ಮರೆಯುವಂತಿಲ್ಲ. ಇತ್ತೀಚಿನ ದಿನಗಳಲ್ಲಿ ಅನೇಕ ದೆವ್ವಗಳು ನಮ್ಮ ಯುವಕರಂತೆ ಪಾಶ್ಚಿಮಾತ್ಯ ಜಗತ್ತಿನಿಂದ ಆಕರ್ಷಿತರಾಗಿ ಅಲ್ಲಿಗೆ ವಲಸೆ ಹೋಗಿ ನೆಲಸಿವೆ ಎಂದು ನಂಬಲು ಬಲವಾದ ಪುರಾವೆಗಳಿವೆ. ಅದನ್ನೇ ಈಗ ನಾನು ನಿಮಗೆ ಹೇಳ ಹೊರಟಿರುವುದು. ಪಾಶ್ಚಿಮಾತ್ಯ ದೇಶಗಳಲ್ಲಿ ದೆವ್ವಗಳು ಕಾಣಿಸಿಕೊಂಡಿರುವುದು ಹಾರುವ ತಟ್ಟೆ ಎಂಬ ಹೊಸ ಮೋಹಿನಿಯ ರೂಪದಲ್ಲಿ. ನಮ್ಮೂರಿನ ಪುರಾತನ ತೇಲಾಡುವ ದೆವ್ವಗಳಿಗೂ, ಅಮೆರಿಕದಂಥ ಸುಶಿಕ್ಷಿತ ದೇಶಗಳ ನವೀನ ಹಾರಾಡುವ ತಟ್ಟೆಗಳಿಗೂ ಇರುವ ಸಾಮ್ಯತೆಯೇ ಇವೆರಡರ ನಿಕಟ ಸಂಬಂಧಕ್ಕೆ ರುಜುವಾತು ನೀಡುತ್ತದೆ.

**ಕೊಳ್ಳಿ ದೆವ್ವ**

ಬಹಳ ಹಿಂದೆ ನಡೆದ ಸಂಗತಿ. ಆಗೆಲ್ಲಾ ಸಾಧಾರಣವಾಗಿ ನಮ್ಮೂರ ಜನರು ಕೈಕಾಲು ತೊಳೆಯುವುದೆಲ್ಲಾ ಊರ ಹೊರಗೆ ಬಯಲಿನಲ್ಲಿ ನಡೆಯುತ್ತಿತ್ತು. ಹಿರಿಯರೊಬ್ಬರು, ಒಂದು ರಾತ್ರೆ ಚೊಂಬು ಹಿಡಿದು ಊರ ಹೊರಗೆ ಹೋದರು. ಅಲ್ಲಿ ರಾಶಿಹಾಕಿದ್ದ ಅಡಿಕೆ ಸಿಪ್ಪೆ ತಿಪ್ಪೆಗುಂಡಿಯ ಹಿಂದೆ ತಮ್ಮ ದಿನನಿತ್ಯದ ಜಾಗಕ್ಕೆ ಬಂದರು. ಇನ್ನೇನು ಕುಳಿತುಕೊಳ್ಳಲು ಹವಣಿಸುತ್ತಿದ್ದಾಗ ಎದುರಿಗೇ ಒಂದು ಕೊಳ್ಳಿ ದೆವ್ವ ಪ್ರತ್ಯಕ್ಷವಾಗಬೇಕೆ! ಕೊಳ್ಳಿ ದೆವ್ವಗಳು ನೀಲಿ ಬೆಳಕಿನಿಂದ ಹೊಳೆಯುತ್ತಿದ್ದು, ಪಾರದರ್ಶಕವಾಗಿರುತ್ತವೆ. ಅವುಗಳು ನಕ್ಷತ್ರಗಳನ್ನೂ ಮರೆಮಾಡುವುದಿಲ್ಲ. ಹೆದರಿಕೊಂಡ ನಮ್ಮ ಹಿರಿಯರು ಒಂದೇ ಉಸುರಿನಲ್ಲಿ ಮನೆಗೆ ಓಡಿಬಂದು, ತಲೆಗೆ ಗೌಸಿಕೊಂಡು ಮಲಗಿದರು. ಮರುದಿನ ಅವರಲ್ಲಿ ಕಾಣಿಸಿಕೊಂಡ ಜ್ವರ ಆರಲು ಹತ್ತು ದಿನಗಳೇ ಹಿಡಿದವು.

ಕಳೆದ ಅರ್ಧ ಶತಮಾನದಲ್ಲಿ ನಮ್ಮೂರ ಕೊಳ್ಳಿ ದೆವ್ವಗಳು ಅಮೆರಿಕಾದ ಅನೇಕ ದೇಶಗಳಲ್ಲಿ ಪದೇಪದೇ ಕಾಣಿಸಿಕೊಂಡಿವೆ. ಇದನ್ನು ಕಂಡು ಬೆದರಿದ ಸಹಸ್ರಾರು ಜನ ತಮ್ಮ ಅನುಭವವನ್ನು ಇತರರೊಡನೆ ಹಂಚಿಕೊಂಡಿದ್ದಾರೆ. ಅವರ ಕತೆ ಕೇಳಿದರೆ, ಅದಕ್ಕೆಲ್ಲಾ ಕಾರಣ ಕೊಳ್ಳಿ ದೆವ್ವವೇ ಎಂದು ಅನ್ನಿಸದೇ ಇರುವುದಿಲ್ಲ. ಇಂತಹವರ ಅನುಭವಗಳನ್ನೆಲ್ಲಾ ಸಂಗ್ರಹಿಸಿ, ಪುಸ್ತಕಗಳನ್ನು ಬರೆದು ಲಕ್ಷಾಧೀಶರಾದ ಚಾಣಾಕ್ಷರಿದ್ದಾರೆ. ಕಿರುಚಿತ್ರಕ್ಕೆ ಇದರ ಬಗ್ಗೆ ಸಾಕ್ಷಿಚಿತ್ರಗಳನ್ನು ನಿರ್ಮಿಸಿ ಹೆಸರುವಾಸಿಗಳಾಗಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿ ಕೊಳ್ಳಿ ದೆವ್ವ ಕಾಣಿಸಿಕೊಳ್ಳುವ ಬಗೆಯನ್ನು ತಿಳಿಸಲು ಒಬ್ಬ ರೈತನ ಅನುಭವವನ್ನೇ ಉದಾಹರಿಸಬಹುದು. ಇದು ಇಂತಹ ದೃಶ್ಯಗಳನ್ನು ಕಂಡಿರುವ ಸಹಸ್ರಾರು ಜನರ ಸಾಮಾನ್ಯ ಅನುಭವವೂ ಹೌದು. ಈ ರೈತನನ್ನು 'ಪೀ' ಎಂದು ಕರೆಯೋಣ. ಅಲ್ಲೆಲ್ಲಾ ರೈತರಿಗೆ ಬಹು ದೊಡ್ಡ ಆಸ್ತಿಯಿದೆ. ನಮ್ಮ ರೈತ 'ಪೀ' ಒಂದು ದಿನ ರಾತ್ರಿಯಾದರೂ ತನ್ನ ಗದ್ದೆಯಲ್ಲೇ ಕೆಲಸಮಾಡುತ್ತಿದ್ದ. ಗದ್ದೆಯಲ್ಲಿ ಗೋಧಿ ಪೈರು ಹುಲುಸಾಗಿ ಬೆಳೆದಿತ್ತು. ಅವನು ಅಡ್ಡಾಡುತ್ತಿದ್ದಂತೇ, ಬೆಳೆದುನಿಂತಿದ್ದ ಪೈರಿನ ನಡುವೆ, ಅರ್ಧ ಮರೆಯಾದ ತಟ್ಟೆಯಾಕಾರದ ಅಪರಿಚಿತ ವಸ್ತುವೊಂದು ಗೋಚರಿಸಿತು. ಹೆದರಿದ 'ಪೀ' ಮರಗಳ ಮರೆಯಲ್ಲೇ ನಿಂತು ನೋಡತೊಡಗಿದ. ತಟ್ಟೆಯ ಆಕಾರ ಬಹಳ ದೊಡ್ಡದೆಂದು ತೋರಿತು. ಅದರ ಸುತ್ತಾ ಅನೇಕ ಚಿಕ್ಕ ಕಿಟಕಿಗಳಿದ್ದು, ಅವುಗಳಿಂದ ನೀಲಿ ಬೆಳಕು ಹೊರ ಚೆಲ್ಲುತ್ತಿತ್ತು. ಒಂದರ್ಧ ಗಂಟೆ ಅಲ್ಲೇ ನಿಂತಿದ್ದ ತಟ್ಟೆ, ಸದ್ದಿಲ್ಲದೇ ಆಕಾಶಕ್ಕೇರಲು ಪ್ರಾರಂಭಿಸಿ ಕ್ಷಣ ಮಾತ್ರದಲ್ಲಿ ಅದೃಶ್ಯವಾಯಿತು. ಮುಂದಿನ ದಿನ 'ಪೀ' ತನಗಾದ ಅಪೂರ್ವ ಅನುಭವವನ್ನು ತನ್ನ ಸ್ನೇಹಿತರಿಗೆ ವಿವರಿಸಿದಾಗ, ಯಾರೂ ಅವನನ್ನು ನಂಬಲಿಲ್ಲ. ಹತಾಶನಾದ ಪೀ, ತನ್ನ ಗೆಳೆಯರನ್ನು ಗದ್ದೆಗೆ ಕರೆದೊಯ್ದು, ತಟ್ಟೆ ನಿಂತಿದ್ದ ಜಾಗ ತೋರಿಸಿದ. ಅಲ್ಲಿ ಸುಮಾರು ೪೦ ಅಡಿ ವರ್ತುಲಾಕಾರದ ಪೈರು ನೆಲ ಕಚ್ಚಿತ್ತು. ಆಗ 'ಪೀ'ಯ ಹೇಳಿಕೆಯನ್ನು ಜನ ಸುಲಭವಾಗಿ ತೆಗೆದುಹಾಕಲಾಗಲಿಲ್ಲ. ಇಂಥದೇ ಅನುಭವ ಸಹಸ್ರಾರು ಜನರಿಂದ ಕೇಳಿಬಂದಾಗ ಜನರಿಗೆ ಈ ಅನುಭವಗಳು ನೈಜ ಎನ್ನಿಸತೊಡಗಿತು. ಈಗ ಅಲ್ಲಿ ಅನೇಕ ಜನರಿಗೆ ಕೊಳ್ಳಿ ದೆವ್ವಗಳಲ್ಲಿ ಬಹಳ ನಂಜಿಕೆಯಂತೆ! ಇದರಿಂದ ನಮಗೆ ತಿಳಿದುಬರುವುದೇನೆಂದರೆ, ನಮ್ಮೂರಿನಲ್ಲಿ ಬರೀ ಕಾಲು ನಡಿಗೆಯಲ್ಲೇ ತೃಪ್ತಿಯಾಗುತ್ತಿದ್ದ ದೆವ್ವಗಳು, ಸಂಪನ್ಮೂಲವುಳ್ಳ ಪಾಶ್ಚಾತ್ಯ ದೇಶಗಳಲ್ಲಿ ನೆಲಸಿದ ನಂತರ ಯಾಂತ್ರೀಕೃತ ವಾಹನಗಳ ಆಮಿಷಕ್ಕೆ ಬಲಿಯಾಗುತ್ತಿವೆ. ಸತ್ತರೂ ಆಸೆ ಬಿಡುವುದಿಲ್ಲ ಎನ್ನುವುದು ಇದಕ್ಕಾಗಿಯೇ!

**ಶಾಕಿಣಿ, ಡಾಕಿಣಿಯರ ಕರಾಮತ್ತು**

ಅರ್ಧ ಶತಮಾನ ಸಂದಿರುವ ಪುರುಷರನ್ನು ಕಂಡರೆ ಶಾಕಿಣಿ, ಡಾಕಿಣಿಯರು ತಿರುಗಿಯೂ ನೋಡುವುದಿಲ್ಲ. ಅವರ ಪ್ರೀತಿಯೆಲ್ಲಾ ಹದಿಹರೆಯದ ಯುವಕರ ಮೇಲೆಯೇ. ಅಪರೂಪಕ್ಕೆ ಸ್ಮಶಾನದ ಬಳಿ ಕಾಣಿಸಿಕೊಳ್ಳುವ ಯುವಕರನ್ನು ತಮ್ಮ ಬಲೆಯಲ್ಲಿ ಹಾಕಿಕೊಳ್ಳಲು ಈ ದೆವ್ವಗಳು ಅನೇಕ ತಂತ್ರಗಳನ್ನು ಬಳಸುತ್ತವೆ. ಇವರ ಬಲೆಯಲ್ಲಿ ಬಿದ್ದ ನಮ್ಮೂರ ಯುವಕರು ಮನೆಗೆ ಮರಳಿದಾಗ ಮಾನಸಿಕವಾಗಿ ಅಸ್ವಸ್ಥರಾಗಿರುತ್ತಿದ್ದರು. ಅವರನ್ನು ತಹಬಂದಿಗೆ ತರಲು, ಅನೇಕ ತಿಂಗಳುಗಳ ಶುಶ್ರೂಷೆ ನಡೆಸಬೇಕಾಗುತ್ತಿತ್ತು. ಕೆಲವೊಮ್ಮೆ ಅದೂ ಸಾಲದೆ ಸ್ವಾಸ್ಥ್ಯ ಕಳೆದುಕೊಂಡ ಯುವಕರಿಗೆ ಅವಸರದಲ್ಲಿ ಮದುವೆ ಮಾಡಿಸುತ್ತಿದ್ದರು. ಶಾಕಿಣಿ, ಡಾಕಿಣಿಯರಿಗೆ ಬಹುಶಃ ಸವತಿಯ ಭಯ ಇದೆ ಎನ್ನಿಸುತ್ತದೆ. ಏಕೆಂದರೆ, ಮದುವೆ ನಂತರ ತಾವು ಹಿಡಿದುಕೊಂಡಿದ್ದ ಯುವಕನನ್ನು ಹೆಚ್ಚಿಗೆ ಹಿಂಸಿಸದೆ ಬಿಟ್ಟುಬಿಡುತ್ತಿದ್ದವು.

ಈಗ, ಅಮೆರಿಕೆಯಲ್ಲಿ ಕಾಣಿಸಿಕೊಂಡಿರುವ ಶಾಕಿಣಿ, ಡಾಕಿಣಿಯರ ಬಗ್ಗೆ ಕೇಳಿ. ಅಲ್ಲಿ ಶಾಕಿಣಿ, ಡಾಕಿಣಿಯರು ಜಯಪತಾಕೆ ಏರಿಸಿರುವ ಅನೇಕ ನಿದರ್ಶನಗಳು ದೊರಕಿವೆ. ಆದರೆ, ಈ ಎಲ್ಲ ಉದಾಹರಣೆಗಳೂ ನಮ್ಮ ಸಿನಿಮಾಗಳಂತೆ, ಒಂದೇ ರಾಗದ ಹಾಡುಗಳು. ಈ ಕತೆಗಳ ಓಟ ಸುಮಾರಾಗಿ ಹೀಗಿರುತ್ತದೆ. ಯುವಕನೊಬ್ಬ ರಾತ್ರಿಯ ಸಮಯದಲ್ಲಿ ಒಬ್ಬಂಟಿಗನಾಗಿರುವಾಗ ಹಾರುವ ತಟ್ಟೆಯೊಂದನ್ನು ನೋಡುತ್ತಾನೆ. ಕೆಲವೊಮ್ಮೆ ಹತ್ತು, ಹನ್ನೆರಡು ತಟ್ಟೆಗಳು ಒಟ್ಟಿಗೇ ಕಾಣಸಬಹುದು. ಯಥಾಪ್ರಕಾರ, ತಟ್ಟೆಗಳಿಗೆ ಸಣ್ಣ ಕಿಟಕಿಗಳಿದ್ದು, ಅವುಗಳಿಂದ ನೀಲಿ ಬೆಳಕು ಹೊಮ್ಮುತ್ತಿರುತ್ತದೆ. ತಟ್ಟೆಯೊಳಗೆ ಅನೇಕರು ನಡೆದಾಡುತ್ತಿರುವುದನ್ನು ಯುವಕ ಗಮನಿಸುತ್ತಾನೆ. ದಿಙ್ಮೂಢನಾಗಿ ನೋಡುತ್ತಾ ನಿಲ್ಲುತ್ತಾನೆ. ಒಂದು ತಟ್ಟೆಯಲ್ಲಿ ತೆರೆದ ಬಾಗಿಲಿನಂತಹ ರಂಧ್ರ ಕಾಣಿಸಿಕೊಳ್ಳುತ್ತದೆ. ತಟ್ಟೆಯ ತೆರೆದ ಬಾಗಿಲಿನಿಂದ ಹಸಿರೋ ಕಂದೋ ಬಣ್ಣದ ಹಲವು ಪ್ರಾಣಿಗಳು ಇಳಿದು ಬರುತ್ತವೆ. ಮನುಷ್ಯರನ್ನೇ ಹೋಲುತ್ತಿದ್ದರೂ, ಖಂಡಿತಾ ಮನುಷ್ಯ ಜಾತಿಗೆ ಸೇರಿರದ ಈ ಪ್ರಾಣಗಳು ಯಾವುದೋ ಲೋಕದಿಂದ ಇಳಿದು ಬಂದವರಂತೆ ತೋರುತ್ತಾರೆ. ಇಳಿದು ಬಂದ ಪ್ರಾಣಗಳು

ಪ್ರೊ|| ಎಂ. ಆರ್. ಎನ್. ಮೂರ್ತಿ

ನಮ್ಮ ಯುವಕನನ್ನು ಬಲಾತ್ಕಾರದಿಂದ ಎಳೆದು ತಟ್ಟೆಯೊಳಗೆ ಕರೆದೊಯ್ಯುತ್ತಾರೆ. ಯುವಕ ಅರಚಿಕೊಳ್ಳುತ್ತಿದ್ದರೂ ಯಾರೂ ಅವನ ನೆರವಿಗೆ ಬರುವುದಿಲ್ಲ. ಎಳೆದೊಯ್ಯುತ್ತಿರುವವರು ಬಲಿಷ್ಠರಾಗಿದ್ದು, ಅವರ ಕಪಿಮುಷ್ಟಿಯಿಂದ, ಎಷ್ಟೇ ಪ್ರಯತ್ನಪಟ್ಟರೂ ಅವನಿಗೆ ಬಿಡಿಸಿಕೊಳ್ಳಲಾಗುವುದಿಲ್ಲ. ತಟ್ಟೆಯೊಳಗೆ ಅವನನ್ನು ಒಂದು ವೈದ್ಯರ ಆಪರೇಶನ್ ಟೇಬಲ್ಲನ್ನು ಹೋಲುವ ಹಾಸಿಗೆಯ ಮೇಲೆ ಮಲಗಿಸುತ್ತಾರೆ. ಮಲಗಿಸುವ ಮೊದಲು, ಅವನ ಬಟ್ಟೆಯನ್ನೆಲ್ಲಾ ತೆಗೆದು ಪೂರ್ಣ ನಗ್ನನನ್ನಾಗಿಸುತ್ತಾರೆ. ನಂತರ ವೈದ್ಯರಂತೆ ಕಾಣುವ ಪ್ರಾಣಿಗಳು ಅವನ ದೇಹವನ್ನು ಕೂಲಂಕಷವಾಗಿ ಪರೀಕ್ಷಿಸುತ್ತಾರೆ. ಕಂಡರಿಯದಂತಹ ಅನೇಕ ಉಪಕರಣಗಳಿಂದ ಅವನ ದೇಹದ ಎಲ್ಲ ಭಾಗಗಳನ್ನೂ ತಿವಿದು, ಅಮುಕಿ, ಹಿಂಡಿ ಪರೀಕ್ಷಿಸುತ್ತಾರೆ. ಅವರು ಪರೀಕ್ಷೆ ಮುಗಿಸಿ ಹೋದ ಸ್ವಲ್ಪ ಸಮಯದ ನಂತರ ಸ್ತ್ರೀ ಎನ್ನಬಹುದಾದ ಒಂದು ಪ್ರಾಣಿ ಅವನಲ್ಲಿಗೆ ಬರುತ್ತದೆ. ಅವನ ಬೆತ್ತಲೆಯ ಮೈಯನ್ನೆಲ್ಲಾ ತಡವುತ್ತದೆ/ತಡವುತ್ತಾಳೆ. ನಂತರ ಅವನೊಡನೆ ಅನೇಕ ಬಾರಿ ಲೈಂಗಿಕ ಕ್ರಿಯೆ ನಡೆಸುತ್ತಾಳೆ. ಅವನನ್ನು ಪರೀಕ್ಷಿಸಿದವರೇ ಪುನಃ ಬಂದು, ಮನಸ್ಸಿಲ್ಲದ ಯುವತಿಯನ್ನು ಬಲಾತ್ಕಾರವಾಗಿ ಎಳೆದೊಯ್ಯುವವರೆಗೂ ಅವಳು ಅವನನ್ನು ಬಿಡುವುದಿಲ್ಲ. ನಂತರ ಅವನನ್ನು ತಟ್ಟೆಯಿಂದ ಹೊರತಳ್ಳುತ್ತಾರೆ. ಯುವಕ ಎಚ್ಚರ ತಪ್ಪಿ ಬಯಲಿನಲ್ಲಿ ಬೀಳುತ್ತಾನೆ. ತಟ್ಟೆ ಆಕಾಶದಲ್ಲಿ ತೇಲಿ ಹೋಗುತ್ತದೆ. ನಾಲ್ಕೈದು ದಿನಗಳ ಬಳಿಕ ಯಾರೋ ದಾರಿಹೋಕರು, ಅರೆ ಪ್ರಜ್ಞಾವಸ್ಥೆಯಲ್ಲಿ, ಅಸ್ತವ್ಯಸ್ತ ವಸ್ತ್ರಧರಿಸಿರುವ ಯುವಕನನ್ನು ಗಮನಿಸುತ್ತಾರೆ. ಕನಿಕರ ಬಂದು, ಅವನನ್ನು ವೈದ್ಯರಲ್ಲಿಗೆ ಒಯ್ಯುತ್ತಾರೆ. ಈ ಎಲ್ಲ ಕಥೆಯನ್ನೂ ಆತ ತನ್ನನ್ನು ಪರೀಕ್ಷಿಸುತ್ತಿರುವ ವೈದ್ಯರಲ್ಲಿ ತಿಳಿಸುತ್ತಾನೆ. ವೈದ್ಯರು ಅವನ ದೇಹ ಪರೀಕ್ಷೆ ಮಾಡಿದಾಗ, ಅವನ ಮೈಯಲ್ಲೆಲ್ಲಾ ಯಾವುದೋ ಮೊಂಡು ಆಯುಧದಿಂದ ಮಾಡಿದ ಗಾಯದ ಗುರುತು ಅವನ ಮಾತಿಗೆ ಸಾಕ್ಷಿಯಾಗಿ ಕಾಣಸುತ್ತದೆ. ಇದೆಲ್ಲಾ ಶಾಕಿಣಿ, ಡಾಕಿಣಿಯರ ಕೆಲಸವೇ ಎಂದು ಒಪ್ಪುತ್ತೀರಲ್ಲಾ?

ಇಲ್ಲೊಂದು ಸ್ವಾರಸ್ಯಕರ ಸಂಗತಿಯಿದೆ. ಶಾಕಿಣಿ, ಡಾಕಿಣಿಯರಿಗೆ ಸಮನಾದ ಗಂಡು ದೆವ್ವಗಳು ಎಲ್ಲೂ ಕಂಡುಬಂದಿಲ್ಲ. ಗಂಡಸರನ್ನು ತಮ್ಮ ಕೈಗೊಂಬೆಗಳನ್ನಾಗಿ ಮಾಡಿಕೊಳ್ಳುವ ಶಾಕಿಣಿ, ಡಾಕಿಣಿಯರ ಕುಟಿಲತೆ, ಬುದ್ಧಿವಂತಿಕೆ ಗಂಡಸರಲ್ಲಿ ಇರುವುದಿಲ್ಲ. ಆದ್ದರಿಂದ, ಹೆಂಗಸರನ್ನು "ಅಬಲೆಯರು" ಎಂದು ಕರೆಯುವುದು ಎಷ್ಟೂ ಸರಿಯಲ್ಲ. ಮುನ್ನಡೆಯಲು ನಿರಾಕರಿಸಿ, ಚಂಡಿ ಹಿಡಿದು ನಿಂತಿರುವ ನಮ್ಮ ದೇಶದ ಚುಕ್ಕಾಣಿಯನ್ನು ಹೆಂಗಸರ ಕೈಯಲ್ಲಿಟ್ಟರೆ, ಅವರು ನಡೆಸುವ ಕರಾಮತ್ತು ನಮ್ಮ ದೇಶವನ್ನು ನಾಗಾಲೋಟದಲ್ಲಿ ಓಡಿಸುತ್ತದೆ ಎಂಬುದರಲ್ಲಿ ಅನುಮಾನವಿಲ್ಲ. ಆದರೆ ಮುಂದೆ ಓಡುತ್ತದೆಯೋ, ಹಿಂದೆ ಓಡುತ್ತದೆಯೋ ಕಾದು ನೋಡಬೇಕು!

**ಇತರ ಒಂಟಿ ದೆವ್ವಗಳು**

ನಮ್ಮೂರ ಬಾಗಿಲಲ್ಲಿ ಒಂದು ದೊಡ್ಡ ಅಶ್ವತ್ಥ ವೃಕ್ಷವಿದೆ. ಅದರ ಸುತ್ತಾ ಕಟ್ಟೆ ಕಟ್ಟಿದ್ದಾರೆ. ಕಟ್ಟೆಯ ಮೇಲೆ ಮರದ ಸುತ್ತಾ ಅನೇಕ ನಾಗ ಪ್ರತಿಷ್ಠೆ ಮಾಡಿದ್ದಾರೆ. ಊರ ಹೆಂಗಳೆಯರು ಪ್ರತಿದಿನ ಬೆಳಿಗ್ಗೆ ವೃಕ್ಷಕ್ಕೆ ಸುತ್ತಿಬಂದು ಅಡ್ಡಬೀಳುತ್ತಾರೆ. ಅದರಲ್ಲೂ ಇನ್ನೂ ಮಕ್ಕಳಾಗದ ಹೆಂಗಸರು ಒಂದಲ್ಲ, ಹತ್ತು ಬಾರಿ ವೃಕ್ಷಕ್ಕೆ ಅಡ್ಡಬೀಳುತ್ತಾರೆ. ಈ ಅಶ್ವತ್ಥ ವೃಕ್ಷದಲ್ಲಿ ಹಿಂದೆ ಒಂದು ಬ್ರಹ್ಮರಾಕ್ಷಸ ವಾಸವಾಗಿತ್ತಂತೆ. ಹೀನ ಪಾಪವೆಸಗಿದ ಬ್ರಾಹ್ಮಣರೇ ಬ್ರಹ್ಮರಾಕ್ಷಸ ಜನ್ಮ ಪಡೆಯುತ್ತಾರೆ. ಈ ಬ್ರಹ್ಮರಾಕ್ಷಸ, ಊರ ದೇವಸ್ಥಾನದಲ್ಲಿ ವೇದಘೋಷ ನಡೆಯುತ್ತಿದ್ದಾಗ ಆಗಮಿಸಿ ತನಗೆ ಗೊತ್ತಿರುವ ಭಾಗಗಳನ್ನು ಕೇಳಿಸಿಕೊಳ್ಳುತ್ತಿತ್ತು, ಯಾರಾದರೂ ಸ್ವರಲೋಪ ಮಾಡಿದರೆ, ಅವರ ಕಪಾಲ ಮೋಕ್ಷ ಮಾಡುತ್ತಿತ್ತು ಎಂದು ಕೇಳಿದ್ದೇನೆ. ಮೋಕ್ಷ ಮಾಡಿಸಿಕೊಂಡವರ ಕಪಾಳ ತಿಂಗಳುಗಟ್ಟಲೆ ಊದಿಕೊಂಡಿದ್ದು ಊರಿಗೆಲ್ಲಾ ಅವರ ಯೋಗ್ಯತೆ ತಿಳಿಯುತ್ತಿತ್ತು. ಈಗ ವೇದಘೋಷ ಕೇಳಿಬರುವುದಿಲ್ಲವಾದ್ದರಿಂದ ಕಪಾಳಮೋಕ್ಷ ಮಾಡುವ ಸಂತಸವಿಲ್ಲದೇ ಬ್ರಹ್ಮರಾಕ್ಷಸ ಊರನ್ನೇ ಬಿಟ್ಟು ಹೋಗಿರಬಹುದು. ಅಂತೂ ಬ್ರಹ್ಮರಾಕ್ಷಸ ಬಹು ಪುರಾತನ ದೆವ್ವ. ಇತರ ದೆವ್ವಗಳಂತೆ ಅದು ದನ ಮೇಯುವ ಜನರಿರುವ ಪಾಶ್ಚಾತ್ಯ ದೇಶಗಳಿಗೆ ವಲಸೆ ಹೋಗಿಲ್ಲದಿರಬಹುದು. ಅದಕ್ಕೆ ಈಗ ಇರಲು ಸರಿಯಾದ ಜಾಗವೇ ಇಲ್ಲದೇ ಸತ್ತೂ ಹೋಗಿರಬಹುದು.

ನಮ್ಮೂರಿನಲ್ಲಿ ಆಗಾಗ್ಗೆ ಕಾಣಿಸಿಕೊಳ್ಳುತ್ತಿದ್ದ ಹಲವಾರು ಒಂಟಿ ದೆವ್ವಗಳಲ್ಲಿ ಸವತಿ ದೆವ್ವಕ್ಕೆ ಅಗ್ರಸ್ಥಾನ. ಆ ಕಾಲದಲ್ಲಿ ಊರಿನಲ್ಲಿ ಪ್ರಾಥಮಿಕ ಚಿಕಿತ್ಸಾ ಕೇಂದ್ರವಿರಲಿಲ್ಲ. ಹತ್ತಿರದ ಪಟ್ಟಣದಲ್ಲಿ ಪ್ರತಿ ರಸ್ತೆಗೆ ಹಲವಾರು ನರ್ಸಿಂಗ್ ಹೋಮುಗಳು ಬೆಳೆದಿರಲಿಲ್ಲ. ಆದ್ದರಿಂದಲೇ ನಾವೆಲ್ಲಾ ಹುಟ್ಟಿದ್ದು, ಸೂರ್ಯ ರಶ್ಮಿಗೆ ಪ್ರವೇಶವಿಲ್ಲದ ಕತ್ತಲೆಯ ಕೋಣೆಯಲ್ಲಿ, ಅದೂ ಯಾವ ದಾದಿಯ ಸಹಾಯವನ್ನೂ ಪಡೆಯದೇ: ನಮ್ಮ ಹಡೆದಾಕೆಯನ್ನು ಬಲಿ ತೆಗೆದುಕೊಳ್ಳದೇ ಹುಟ್ಟಿರುವ ಹೆಮ್ಮೆ ನಮಗಿದೆ. ಆದರೆ ಹುಟ್ಟುವ ಎಲ್ಲ ಮಕ್ಕಳು ಇದೇ ರೀತಿ ಸಭ್ಯತೆಯಿಂದ ನಡೆದುಕೊಳ್ಳುತ್ತಿರಲಿಲ್ಲ. ಹುಟ್ಟುವಾಗಲೇ ತಾಯಿಯನ್ನು ಮುಗಿಸುತ್ತಿದ್ದವು. ತಾಯಿಯನ್ನು ಕಳೆದುಕೊಂಡು ಅನಾಥವಾಗಿ ಜನಿಸಿದ ಮಗುವಿಗೆ ಹೊಸ ಅಮ್ಮನನ್ನು ಒದಗಿಸುವುದು ತಂದೆಯಾದವನ, ಮನೆಯ ಇತರ ಹಿರಿಯ ಹೆಂಗಳೆಯರ ಕರ್ತವ್ಯವೇ ಅಲ್ಲವೇ? ಆದ್ದರಿಂದಲೇ ಅಂತಹ ಸಂದರ್ಭಗಳಲ್ಲಿ, ಹೆಂಡತಿ ಸತ್ತು ವರ್ಷದೊಳಗೇ ಮತ್ತೆ ಓಲಗ ಊದಿಸುತ್ತಿದ್ದರು. ಹೊಸದಾಗಿ ಬಂದ ಹೆಂಡತಿ ಬಲು ಬೇಗ ತಾಯಿಯಾಗುವ ಮನಸ್ಸು ಮಾಡುತ್ತಿದ್ದಳು. ಅಲ್ಲಿಯವರೆಗೂ ಸಹನೆಯಿಂದಲೇ ಎಲ್ಲವನ್ನೂ ಸಹಿಸಿಕೊಂಡಿದ್ದ ಸವತಿ ದೆವ್ವಕ್ಕೆ ತಡೆಯಲಾರದಾಗಿ, ತನ್ನ ತಂಗಿಯನ್ನು ಹಿಡಿದುಕೊಳ್ಳುತ್ತಿದ್ದಳು. ಆಗ ಗರ್ಭ ಧರಿಸಿದ್ದ ಮಹಿಳೆಯ ಮೈಯೆಲ್ಲಾ ನಡುಗಲು ಪ್ರಾರಂಭವಾಗುತ್ತಿತ್ತು. ಅವಳ ಧ್ವನಿ ಹಿರಿಯ ಹೆಂಡತಿಯದನ್ನೇ ಹೋಲುತ್ತಿತ್ತು. ಮನೆಯ ಹಿರಿಯ ಹೆಂಗಳೆಯರಿಗೆ ಹೆದರಿಕೆ ಪ್ರಾರಂಭವಾಗುತ್ತಿತ್ತು. ಬಾಳೆಹಣ್ಣು, ಹಾಲು ಕೊಟ್ಟು, ನಿನಗೆ ಬೇಕಾದುದನ್ನು ಕೇಳು ನಡೆಸಿಕೊಡುತ್ತೇವೆ, ಇವಳನ್ನು ದಯವಿಟ್ಟು ಬಿಟ್ಟು ಹೋಗು ಎಂದು ಸವತಿ ದೆವ್ವವನ್ನು ಬೇಡುತ್ತಿದ್ದರು. ದೆವ್ವ ತನಗೂ ಆಗುತ್ತಿರುವ ಹೆದರಿಕೆಯನ್ನು ಹೇಳಿಕೊಳ್ಳುತ್ತಿತ್ತು. ಸವತಿಗೆ ಮಗುವಾದ ಮೇಲೆ ತನ್ನ ಮಗುವನ್ನು ಕಡೆಗಣಿಸುತ್ತಾಳೆ ಎಂಬ ಚಿಂತೆಯಾಗಿದೆಯಂತೆ ಅದಕ್ಕೆ. ಮನೆಯ ಹಿರಿಯ ಹೆಂಗಳೆಯರು ದೆವ್ವಕ್ಕೆ ಅನೇಕ ವಿಧದಲ್ಲಿ ಸಾಂತ್ವನ ಹೇಳಿ, ಷೋಡಶೋಪಚಾರ ನಡೆಸಿ, ಮಗುವನ್ನು ನಾವು ನೋಡಿಕೊಳ್ಳುತ್ತೇವೆ, ಮಲತಾಯಿಯಿಂದ ರಕ್ಷಿಸುತ್ತೇವೆ ಎಂದು ಪರಿಪರಿಯಾಗಿ ಆಶ್ವಾಸನೆ ಕೊಟ್ಟಮೇಲೆಯೇ ಅದು ತೊಲಗುತ್ತಿತ್ತು. ಇಂತಹ ಇನ್ನೂ ಇತರ ಒಂಟಿ ಅಥವಾ ಚಿಲ್ಲರೆ ದೆವ್ವಗಳು ನಮ್ಮೂರಿನಲ್ಲಿ ಆಗಿಂದಾಗ್ಗೆ ಕಾಣಿಸಿಕೊಂಡಿರುವ ಬಗ್ಗೆ ಪುರಾವೆಯಿದೆ. ಈಗ ಇವೆಲ್ಲ ಅನೇಕ ರೂಪಾಂತರಗಳಿಂದ ಪಾಶ್ಚಾತ್ಯ ದೇಶಗಳಲ್ಲೂ ಕಂಡುಬಂದಿವೆ.

ಸುಮಾರು ಅರವತ್ತು ವರ್ಷಗಳ ಹಿಂದೆ ಒಬ್ಬ ಪೈಲಟ್ ಒಂಟಿಯಾಗಿ ತನ್ನ ವಿಮಾನ ಓಡಿಸುತ್ತಾ ಕೆನಡಾದಿಂದ ಹೊರಟು ಯೂ. ಎಸ್. ಎ. ದೇಶದ ವಾಷಿಂಗ್ಟನ್ ಸಿಟಿಯತ್ತ ಹೋಗುತ್ತಿದ್ದನಂತೆ. ಆಗ ಅವನಿಗೆ ತನ್ನ ವಿಮಾನದ ಮುಂದೆ ಹಾರಾಡುತ್ತಿದ್ದ ತಟ್ಟೆಯಾಕಾರದ ನೌಕೆ ಕಾಣಿಸಿತು. ಅದಕ್ಕೆ ಡಿಕ್ಕಿ ಹೊಡೆಯದಂತೆ ಹಾರಾಟದ ಎತ್ತರವನ್ನು ಹೆಚ್ಚು, ಕಡಿಮೆ ಮಾಡಿಕೊಳ್ಳತೊಡಗಿದ. ತಟ್ಟೆಯೂ ಅವನನ್ನು ತಡಮಾಡದೇ ಅನುಸರಿಸಬೇಕೇ? ಆಗ ಅವನಿಗೆ ತಟ್ಟೆಯಲ್ಲಿ ಜನರಿದ್ದು, ತನ್ನನ್ನೇ ಗಮನವಿಟ್ಟು ಪರೀಕ್ಷಿಸುತ್ತಿದ್ದಾರೆ ಎಂದು ಅನಿಸಿತು. ಒಂದರ್ಧ ತಾಸಿನ ನಂತರ ಸದ್ದಿಲ್ಲದೇ, ಶರವೇಗದಲ್ಲಿ ತಟ್ಟೆ ಅದೃಶ್ಯವಾಯಿತು! ಇದಕ್ಕೂ ರೋಚಕ ಕತೆ ಇಂಗ್ಲೆಂಡಿನಲ್ಲಿ ವಾಸವಾಗಿದ್ದ ಮಿಶ್ರ ಬಣ್ಣದ ದಂಪತಿಗಳ ಅನುಭವ. ಈ ದಂಪತಿಗಳು, ತಮ್ಮ ಮಗಳ ಮನೆಗೆ ಹೋಗಲೆಂದು ಸ್ವಂತ ಕಾರಿನಲ್ಲಿ ಹೊರಟಿದ್ದರು. ಪ್ರಯಾಣ ಸುಮಾರು ೫ ಗಂಟೆ ಹಿಡಿಯುತ್ತಿತ್ತು. ಅರ್ಧ ದಾರಿ ಕ್ರಮಿಸಿದ್ದಾಗ ತಮ್ಮ ಕಾರಿನ ಮೇಲೆ ಸನಿಹದಲ್ಲಿಯೇ ಒಂದು ಹಾರುವ ತಟ್ಟೆಯಿರುವಂತೆ ಭಾಸವಾಯಿತು. ಅತ್ಯಂತ ಹೆದರಿಕೆಯಾಗಿದ್ದರಿಂದ ಅವರಿಗೆ ಕಾರು ಚಲಿಸುವುದು ಕಷ್ಟ ಎನಿಸಿತು. ಮುಂದೆ ಏನಾಯಿತೆಂದು ಇಬ್ಬರಿಗೂ ನೆನಪಿಲ್ಲ. ಮಗಳ ಮನೆ ತಲುಪಿದಾಗ ೫ ಗಂಟೆಯ ಬದಲಿಗೆ ೭ ಗಂಟೆ ತೆಗೆದುಕೊಂಡಿದ್ದರು. ಎರಡು ಗಂಟೆ ಎಲ್ಲಿ ಕಳೆದುಹೋಯಿತು ಎಂದು ಎಷ್ಟು ತಲೆ ಬಿಸಿ ಮಾಡಿಕೊಂಡರೂ ಹೊಳೆಯಲಿಲ್ಲ. ಸ್ವಲ್ಪ ದಿನಗಳ ನಂತರ ಅವರ ದಾಂಪತ್ಯ ವಿಪರೀತಕ್ಕಿಟ್ಟುಕೊಂಡಿತು. ಆಗ ಮಾನಸಿಕ ತಜ್ಞರಲ್ಲಿಗೆ ಹೋಗಬೇಕಾಯಿತು. ಅವರು ಇಬ್ಬರಿಗೂ ಮೋಹಕ ನಿದ್ರೆ ಬರಿಸಿ, ಅವರ ಮನಸ್ಸಿನಲ್ಲಿರುವ ಗುಟ್ಟುಗಳನ್ನು ಹೊರತೆಗೆಯುವುದರಲ್ಲಿ ಯಶಸ್ವಿಯಾದರು. ಈ ಗುಟ್ಟುಗಳಲ್ಲಿ ಬಹಳ ಹೋಲಿಕೆಗಳಿದ್ದವು. ಹಾರುವ ತಟ್ಟೆ ಅವರ ಕಾರನ್ನು ನಿಲ್ಲಿಸಿತಂತೆ. ಆಗ ಅದರಿಂದ ಇಳಿದುಬಂದ ಅನ್ಯ ಲೋಕದ ಜೀವಿಗಳು, ಅವರನ್ನು ತಮ್ಮ ವಾಹನದೊಳಕ್ಕೆ ಎಳೆದೊಯ್ದರು. ಅಲ್ಲಿ ಯಥಾಪ್ರಕಾರ ಅವರನ್ನು ವಿವಸ್ತ್ರಗೊಳಿಸಿ, ಅವರ ಅಂಗ ರಚನೆಯನ್ನು ಆಸಕ್ತಿಯಿಂದ ಪರೀಕ್ಷಿಸಿದರು. ತಟ್ಟೆಯ ಮಾಲಿಕ ಮಹಿಳೆಯೊಂದಿಗೆ ತತ್ತ್ವಶಾಸ್ತ್ರದ ಗಹನ ವಿಚಾರಗಳನ್ನೂ ವಿನಿಮಯ ಮಾಡಿಕೊಂಡನಂತೆ. ಈ ಕತೆಯಿಂದ ತಿಳಿದುಬರುವ ನೀತಿ ಏನೆಂದರೆ ನಮ್ಮ ದೇಶದಲ್ಲಿ ಹರೆಯದವರಿಗೆ ಮಾತ್ರ ಕಾಡುವ ಶಾಕಿಣಿ, ಡಾಕಿಣಿಯರು ವಯಸ್ಸಾದ ದಂಪತಿಗಳಿಗೂ ಹೊರದೇಶಗಳಲ್ಲಿ ವಕ್ರಿಸುತ್ತವೆ ಎನ್ನುವುದು!

**ವಿಜ್ಞಾನ ಲೇಪ**

ಇಂದಿನ ಕಾಲದಲ್ಲಿ ಯಾವ ವಿಷಯವೇ ಆಗಿರಲಿ, ವಿಜ್ಞಾನದ ಲೇಪ ಇಲ್ಲದಿದ್ದರೆ ಬೆಲೆಯಿರುವುದಿಲ್ಲ. ಆದ್ದರಿಂದಲೇ, ಹಾರಾಡುವ ತಟ್ಟೆಗಳಿಗೆ ವೈಜ್ಞಾನಿಕ ತಳಹದಿಯನ್ನು ಹುಡುಕುವ ಅನೇಕ ಪ್ರಯತ್ನಗಳು ನಡೆದಿವೆ. ವೈಜ್ಞಾನಿಕವಾಗಿ ಹಿಂದುಳಿದಿರುವ ನಮ್ಮ ದೇಶೀ ತೇಲಾಡುವ

ದೆವ್ವಗಳ ಬಗ್ಗೆ ಅಷ್ಟು ವೈಜ್ಞಾನಿಕ ಮಾಹಿತಿ ದೊರಕುವುದಿಲ್ಲ.

ಸಾಧಾರಣವಾಗಿ ಮುದಿ ದೆವ್ವಗಳು ಕಾಣಿಸುವುದು ಅಪರೂಪ. ಇರುವುದೆಲ್ಲಾ ಹರೆಯದ ದೆವ್ವಗಳು. ಇದಕ್ಕೆ ಕಾರಣ ಇಲ್ಲದಿಲ್ಲ. ನೀವು ಯಯಾತಿಯ ಬಗ್ಗೆ ಕೇಳಿಯೇ ಇದ್ದೀರಿ. ಯಯಾತಿ ಮುದುಕನಾದರೂ, ಯೌವನ ಹಂಬಲಗಳು ಇನ್ನೂ ಇಂಗಿರಲಿಲ್ಲ. ತನ್ನ ಮಗನೊಬ್ಬನಿಂದ ಯೌವನ ಎರವಲು ಪಡೆದು, ಅನೇಕ ವರ್ಷ ಪುನಃ ಸುಖ ಕಾಣುತ್ತಾನೆ. ಇಂತಹ ಸೌಭಾಗ್ಯ ಎಲ್ಲರಿಗೂ ಎಲ್ಲಿ ದೊರಕುತ್ತದೆ? ವರ್ಷದ ಹಿಂದೆ ಮದುವೆಯಾಗಿ, ಮೊದಲ ಹೆರಿಗೆಯಲ್ಲಿ ಗಂಡು ಪಡೆಯುವ ಕನಸು ಕಾಣುತ್ತಾ, ಸುಖದ ಕಲ್ಪನೆಯಲ್ಲೇ ಮುಳುಗಿರುವ ಮಹಿಳೆಯನ್ನು ಜವರಾಯ ಬಂದು ಕರೆದರೆ ಬರುವುದಿಲ್ಲ ಎನ್ನಲಾದೀತೇ? ಆಗ ಅವರಿಗೆ ಯಯಾತಿಯ ಭಾಗ್ಯ ಇಲ್ಲವಾಗಿ, ಮರಣದ ನಂತರವೂ ಸಂಸಾರ ಬಿಟ್ಟು ಹೋಗುವ ಮನಸ್ಸು ಬರುವುದಿಲ್ಲ. ಅಂತಹವರು ದೆವ್ವವಾಗಿ ಅಲ್ಲೇ ಸುತ್ತಮುತ್ತ ಓಡಾಡಿಕೊಂಡಿರುತ್ತಾರೆ. ಮನಸ್ಸು ಬಂದಾಗ ಯಮನ ಮೇಲಿನ ಕೋಪವನ್ನು ಜನರ ಮೇಲೆ ತಿರುಗಿಸುತ್ತಾರೆ. ಆದರೆ ದೆವ್ವ ಮುದಿಯಾಗುವುದರ ಒಳಗೇ, ಬಂಗಾರ ಎಂದುಕೊಂಡಿದ್ದ ಗಂಡ ಕಾಗೆ ಬಂಗಾರ ಎಂಬುದು ಚೆನ್ನಾಗಿ ಅರ್ಥವಾಗಿ, ಅವನ ಪರಿಸರದಲ್ಲಿ ದೇಹವೂ ಇಲ್ಲದೇ ಅಲೆಯುವುದಕ್ಕಿಂತ, ಯಮಪುರಿಯಲ್ಲಿ ಎಣ್ಣೆಯ ಬಾಂಡಲಿಯಲ್ಲಿ ಬೇಯುವುದೇ ವಾಸಿ ಎಂದು ಹೊರಟುಹೋಗುತ್ತಾರೆ. ಇಂತಹ ವೈಜ್ಞಾನಿಕ ಸಂಗತಿಗಳು ದೆವ್ವಗಳ ಯೌವನದ ರಹಸ್ಯಕ್ಕೆ ಸಾರ್ಥಕ ವಿವರಣೆ ಒದಗಿಸುತ್ತವೆ. ದೆವ್ವಗಳ ಬಗ್ಗೆ ಯೋಚಿಸುತ್ತಾ ಹೋದರೆ ಅನೇಕ ಆಶ್ಚರ್ಯಕರ ಸಂಗತಿಗಳು ಗೋಚರಿಸುತ್ತವೆ. ತಿರುಗಿ ನೋಡಬೇಕೆನಿಸಿದಾಗ ದೆವ್ವಗಳು ತಲೆ ತಿರುಗಿಸುತ್ತವೆಯೇ? ದೇಹವೇ ಪಾರದರ್ಶಕವಾಗಿರುವುದರಿಂದ, ಅಂತಹ ಅಗತ್ಯ ಇರಲಾರದು. ಕಣ್ಣನ್ನೇ ಹೊರಳಿಸಿ ನೋಡಿದರೆ ಸಾಕಾಗಬಹುದು! ಹೀಗೇ ಕೇಳಲು ಕಿವಿ ತಿರುಗಿಸಬೇಕಾಗುವುದಿಲ್ಲ. ಮೈ ಹಗುರವಾಗಿರುವುದರಿಂದ, ಕಾಲು ಮೇಲೆ ಮಾಡಿ, ಕೈಗಳ ಮೇಲೆ ನಡೆಯುವುದು ಮುಂತಾದ ಸರ್ಕಸ್ಸುಗಳನ್ನು ದೆವ್ವಗಳು ಸುಲಭವಾಗಿ ಮಾಡಬಹುದು. ವಯಸ್ಸಾದಾಗ ಸುಕ್ಕುಬೀಳಲು ದೆವ್ವಗಳಿಗೆ ಚರ್ಮವೇ ಇರುವುದಿಲ್ಲ? ಆದ್ದರಿಂದ ರಾತ್ರೆ ಒಂಟಿಯಾಗಿದ್ದಾಗ, ಮನೆಗೆ ದೆವ್ವ ಭೆಟ್ಟಿಯಾದರೆ, ಅದರ ವಯಸ್ಸನ್ನು ಊಹಿಸುವುದು ಹೇಗೇ? ಇದಕ್ಕೆ ನನಗಿನ್ನೂ ಉತ್ತರ ಸಿಕ್ಕಿಲ್ಲ. ಯಾರಾದರೂ ಐನ್‌ಸ್ಟೈನರನ್ನು ಕೇಳಬೇಕು.

ದೆವ್ವಗಳ ಬಗ್ಗೆ ಹೆಚ್ಚಿನ ವೈಜ್ಞಾನಿಕ ಮಾಹಿತಿ ಇಲ್ಲವಾದರೂ, ಮುಂದುವರೆದ ದೇಶಗಳಿಗೆ ಭೇಟಿ ಕೊಡುವ ಹಾರುವ ತಟ್ಟೆಗಳ ಬಗ್ಗೆ ಮಾತ್ರ ದಪ್ಪನೆಯ ವೈಜ್ಞಾನಿಕ ಹೊತ್ತಿಗೆಗಳು ಹೇರಳವಾಗಿ ದೊರೆಯುತ್ತವೆ. ನಮ್ಮ ಸೂರ್ಯ ಸೇರಿರುವ ನಕ್ಷತ್ರಪುಂಜ ಬಹಳ ದೊಡ್ಡದು. ಸೆಕೆಂಡಿಗೆ ೩ ಲಕ್ಷ ಕಿಲೋಮೀಟರ್ ಓಡುವ ಬೆಳಕಿಗೆ ನಕ್ಷತ್ರಪುಂಜದ ಒಂದು ತುದಿಯಿಂದ ಹೊರಟು ಇನ್ನೊಂದು ತುದಿ ತಲುಪಲು ಲಕ್ಷ ವರ್ಷಗಳೇ ಹಿಡಿಯುತ್ತದಂತೆ. ಈ ನಕ್ಷತ್ರಲೋಕದಲ್ಲಿ, ನಮ್ಮ ಸೂರ್ಯನಂತಹ ಸಹಸ್ರ ಕೋಟಿ ನಕ್ಷತ್ರಗಳಿವೆಯೆಂದು ಅಂದಾಜು. ಅನೇಕ ನಕ್ಷತ್ರಗಳ ಸುತ್ತಾ ನಮ್ಮ ಭೂಮಿಯಂತಹ ಗ್ರಹಗಳು ಇದ್ದೇ ಇರುತ್ತವೆ. ಈ ಗ್ರಹಗಳಲ್ಲೂ ಡಾರ್ವಿನ್ನನ ನಿಯಮಗಳಿಗೆ ಬದ್ಧವಾಗಿ ಜೀವವಿಕಾಸವಾಗಿದೆ. ಭೂಮಿಯಲ್ಲಿ ಜೀವ ವಿಕಾಸದ ಪ್ರಾರಂಭಕ್ಕೆ ಲಕ್ಷಾಂತರ ವರ್ಷಗಳ ಮೊದಲೇ ಅನೇಕ ನಕ್ಷತ್ರಗಳಲ್ಲಿ ಜೀವವಿಕಾಸ ಪ್ರಾರಂಭವಾಗಿರಬಹುದು. ಅಂತಹ ಅನೇಕ ನಕ್ಷತ್ರಗಳ ಪ್ರಜೆಗಳು, ವಿಜ್ಞಾನದಲ್ಲಿ ನಮ್ಮನ್ನು ನಾಚಿಸುವಷ್ಟು ಮುನ್ನಡೆ ಸಾಧಿಸಿರುತ್ತಾರೆ. ಅಂತಹ ನಕ್ಷತ್ರಗಳಿಂದ ಲೋಕಪರ್ಯಟನೆ ಮಾಡಲೆಂದು ಹೊರಟ ಸುಸಜ್ಜಿತ ನೌಕೆಗಳು ನಮ್ಮ ಭೂಮಿಗೂ ನಿಯತವಾಗಿ ಭೆಟ್ಟಿ ಕೊಡುತ್ತಿರಬಹುದು. ಹಾರಾಡುವ ತಟ್ಟೆಗಳು ಅವರ ವಾಹನಗಳಂತೆ. ಇದೇ ಸತ್ಯವಾದರೆ, ಹಾರಾಡುವ ತಟ್ಟೆಗಳ ಮಂದಿ ನಮ್ಮನ್ನು ಸಂದರ್ಶಿಸುತ್ತಿರುವ ಆದರದ ಅತಿಥಿಗಳು. ''ಅತಿಥಿ ದೇವೋ ಭವ'' ಎಂದು ನಂಬುವ ನಾವು, ಇವರಿಗೆ ಮಣೆ ಹಾಕಿ ಉಪಚರಿಸಬೇಕು. ಕೆಲವರು ಪ್ರತ್ಯಕ್ಷ ಕಂಡಿದ್ದಾಗಿ ಪ್ರಮಾಣ ಮಾಡಿ ಹೇಳುವ ಇನ್ನೊಂದು ಸಂಗತಿಯಿದೆ. ದಶಕಗಳ ಹಿಂದೆ, ಇಂತಹ ವಾಹನವೊಂದು ಅಪಘಾತಕ್ಕೀಡಾಗಿ, ಅಮೆರಿಕಾದ ಅರಿಜೋನ ಮರುಭೂಮಿಯಲ್ಲಿ ಬಿದ್ದಿತಂತೆ. ಅಮೆರಿಕ ಮಿಲಿಟರಿಯವರು ಈ ವಾಹನದ ಅಳಿದುಳಿದ ಭಾಗಗಳನ್ನು ರಕ್ಷಿಸಿ, ಅಪಘಾತದಲ್ಲಿ ಮರಣಿಸಿದ ಜೀವಿಗಳ ದೇಹಗಳನ್ನು ಪ್ರಯೋಗಾಲಯದಲ್ಲಿ ಅತ್ಯಂತ ಗೋಪ್ಯವಾಗಿರಿಸಿ, ಅದರ ಮೇಲೆ ಪ್ರಯೋಗಗಳನ್ನು ನಡೆಸುತ್ತಿದ್ದಾರಂತೆ. ಅವರ ವಾಹನಗಳಿಂದ ದೊರೆತ ಮಾಹಿತಿಯಿಂದಲೇ ಅಮೆರಿಕನ್ನರು ತಮ್ಮ ಆಕಾಶ ನೌಕೆಗಳನ್ನು ನಿರ್ಮಿಸಲು ಕಲಿತರಂತೆ! ಆದರೆ ಇನ್ನೊಂದು ಸಾಧ್ಯತೆಯೂ ಇದೆ. ಮನುಷ್ಯರು ಭೂಮಿಯನ್ನು ಹಿಂಡಿ, ಹಿಪ್ಪೆ ಮಾಡುತ್ತಿದ್ದಾರಷ್ಟೆ? ಇದೇ ರೀತಿ, ವೈಜ್ಞಾನಿಕವಾಗಿ ಮುಂದುವರೆದ ಇತರ ಅನೇಕ ಗ್ರಹಗಳನ್ನು ಅಲ್ಲಿಯ ನಿವಾಸಿಗಳು ಪೂರ್ಣ ಅರೆದು ಕುಡಿದು ವಾಸಯೋಗ್ಯವಲ್ಲದಂತೆ ಹಾಳುಗೆಡವಿರಬಹುದು. ಆಗ ಸಹಜವಾಗಿ ಅವರು, ತಮ್ಮ ವಾಸಕ್ಕೆ ಸೂಕ್ತವಾದ ಬೇರೆ ಗ್ರಹವನ್ನು ಅರಸುತ್ತಾ ಹೊರಡುತ್ತಾರೆ. ಇಂತಹ ಗುಂಪೇ ಈಗ ಇಲ್ಲಿ ಕಾಣಿಸುತ್ತಿರುವ ಹಾರುವ ತಟ್ಟೆಗಳಾದರೆ, ಮನುಷ್ಯರ ಅದೃಷ್ಟ ಕೆಟ್ಟಿದೆ ಎಂದೇ ಹೇಳಬೇಕು. ಸದ್ಯದಲ್ಲಿಯೇ, ಈ ತಟ್ಟೆಗಳಲ್ಲಿ ಬಂದವರು ನಮ್ಮನ್ನೆಲ್ಲಾ ಕಡಿದುಹಾಕಿ, ತಮ್ಮವರನ್ನೇ ಭೂಮಿಯ ಮೇಲೆ ಹೇರುತ್ತಾರೆ. ಇದೆಲ್ಲಾ ಹೇಗೆ ತಿಳಿದುಬಂದಿದೆ ಎಂದು ಕೇಳುತ್ತೀರಾ? ಹಾರುವ ತಟ್ಟೆಗಳಲ್ಲಿ ಬಂದವರು ಆರಿಸಿದ ಜನರನ್ನು ತಮ್ಮ ವಾಹನಗಳಿಗೆ ಬಲಾತ್ಕಾರವಾಗಿ ಒಯ್ಯಲಿಲ್ಲವೇ? ಅಂತಹ ಸಂದರ್ಭಗಳಲ್ಲಿ, ಇದನ್ನೆಲ್ಲಾ ಅವರೇ ತಿಳಿಸಿದ್ದಾರೆ. ಆದ್ದರಿಂದ ತೇಲಾಡುವ ದೆವ್ವಗಳನ್ನೂ, ಹಾರಾಡುವ ತಟ್ಟೆಗಳನ್ನೂ ಪ್ರತ್ಯಕ್ಷ ಸತ್ಯ ಎಂದೇ ಪರಿಗಣಿಸಬೇಕು!

ಪ್ರೊ|| ಎಂ. ಆರ್. ಎನ್. ಮೂರ್ತಿ
ಮಾಲಿಕ್ಯುಲರ್ ಬಯೋಫಿಸಿಕ್ಸ್ ಘಟಕ, ಭಾರತೀಯ ವಿಜ್ಞಾನ ಸಂಸ್ಥೆ
ಬೆಂಗಳೂರು - ೫೬೦ ೦೧೨

## ಕೌಳಿ ಹಣ್ಣು



ಮಲೆನಾಡ ಕೌಳಿ ಹಣ್ಣೆಂದರೆ
ಬಟ್ಟಲು ಮುಖದವಳ ಕರಿಕಣ್ಣಿನಂತೆ!
ರುಚಿಯೇನು ಹಣ್ಣಿನದು ಬಲ್ಲವನೆ ಬಲ್ಲ
ಸುಖ ಸಗ್ಗದಾ ಸವಿ ಹಣ್ಣಿನಂತೆ!

ಬೆಟ್ಟದಾ ಮೇಲೆ ಅಲ್ಲಲ್ಲಿ ಮಟ್ಟಿಗಳು
ಬಟು ಬಟುವು ಹಸಿರೆಲೆಯು
ಏಳೆಂಟು ಅಡಿಗಳೆತ್ತರದ ತನಿಕೆಗಳು
ಇಟ್ಟಲ್ಲಿ ಕೈ, ಮುಳ್ಳಿನಾ ಬಲೆಯು

ಮೇ ತಿಂಗಳಲ್ಲಿ ಅಲೆದಾಗ ಬೆಟ್ಟ
ಹಸಿರು ಹೊನ್ನಲ್ಲಿ ನೂರಾರು ಕಣ್ಣು!
ಹುಳಿಯುಂಟು, ಸಿಹಿಯುಂಟು
ಬಣ್ಣದಲಿ ಗುಟ್ಟು ಬಿಡದ ಹಣ್ಣು!

ಅಗೆದಾಗ ಹುಚ್ಚಟ್ಟೆ ಹುಳಿಯು
ಹಲ್ಲೆಲ್ಲ ಕೋಚೆ ಏನು ತಿನ್ನಲೂ ಬರದು
ಬಣ್ಣಕ್ಕೆ ಮರುಳಾಗಿ ಏನೇನ ತಂದರೂ
ಈ ಗತಿಯು ಆಗದೇ ಇರದು!

ಒಡನಾಟದಲ್ಲಿ ಸುಳಿವಿಲ್ಲವೇ
ಅರ್ಥವಾದರೂ ಎಲ್ಲಾ ಅರ್ಥವಾಗದಂತೆ
ಹಣ್ಣಾದ ಕೌಳಿ ಹುಳಿಯೇತಕೋ
ಬಣ್ಣಕ್ಕೆ ಅರ್ಥವೇ ಇಲ್ಲವೆಂಬಂತೆ!

ಬಂದಗದ್ದೆ ರಾಧಾಕೃಷ್ಣ
ಕೆಳದಿ ಅಂಚೆ, ಶಿವಮೊಗ್ಗ - ೫೭೭ ೪೦೧

# ಈಶಾನ್ಯ ರಾಜ್ಯಗಳಿಗೆ ಭೇಟಿ ಕೆಲವು ಅನುಭವಗಳು

**ಡಾ|| ಸಿ. ಆರ್. ಚಂದ್ರಶೇಖರ್**

ಜಿಲ್ಲಾ ಮಾನಸಿಕ ಆರೋಗ್ಯ ಕಾರ್ಯಕ್ರಮವನ್ನು ಭಾರತದ ಇಪ್ಪತ್ತೈದು ರಾಜ್ಯಗಳು ಹೇಗೆ ಅನುಷ್ಠಾನಕ್ಕೆ ತರುತ್ತಿವೆ, ಮಾನಸಿಕ ಸೇವಾ ಸೌಲಭ್ಯಗಳು ಜನರನ್ನು ಮುಟ್ಟುತ್ತಿವೆಯೇ, ಕಾರ್ಯಕ್ರಮಕ್ಕೆ ನೀಡಲಾಗಿರುವ ಹಣದ ಸದ್ವಿನಿಯೋಗವಾಗುತ್ತಿದೆಯೇ, ಪ್ರತಿಯೊಂದು ರಾಜ್ಯಕ್ಕೆ ಹೋಗಿ, ಕಣ್ಣಾರೆ ಕಂಡು ವರದಿ ನೀಡಿ, ಕಾರ್ಯಕ್ರಮದ ಸುಧಾರಣೆಗೆ ಸಲಹೆ ನೀಡಿ, ಹತ್ತನೇ ಪಂಚವಾರ್ಷಿಕ ಯೋಜನೆಯಲ್ಲಿ ಒಟ್ಟು ಒಂದು ನೂರು ಜಿಲ್ಲೆಗಳಿಗೆ ಈ ಕಾರ್ಯಕ್ರಮವನ್ನು ವಿಸ್ತರಿಸುವ ಯೋಚನೆ ಇದೆ ಎಂದು ಕೇಂದ್ರ ಸರ್ಕಾರ, ಬೆಂಗಳೂರಿನ ನಿಮ್ಹಾನ್ಸ್ ಸಂಸ್ಥೆಯನ್ನು ಕೇಳಿತು. ಅಸ್ಸಾಂ, ಅರುಣಾಚಲ ಪ್ರದೇಶ, ಮಣಿಪುರ, ಮಿಜೋರಾಮ್‌ಗೆ ಹೋಗುವ ಪಾಳಿ ನನಗೆ ಮತ್ತು ನರ್ಸಿಂಗ್ ವಿಭಾಗದ ಮುಖ್ಯಸ್ಥೆ ಡಾ|| ರೆಡ್ಡಮ್ಮನವರಿಗೆ ಬಂತು. ಭಾರತದ ಬಹುತೇಕ ರಾಜ್ಯಗಳಿಗೆ ಭೇಟಿ ನೀಡಿದ್ದ ನನಗೆ, ಈಶಾನ್ಯ ರಾಜ್ಯಗಳಿಗೆ ಹೋಗುವ ಅವಕಾಶ ಹೇಗೋ ಇದುವರೆಗೆ ಸಿಕ್ಕಿರಲಿಲ್ಲ. ಪೂರ್ವದಲ್ಲಿ ಕಲ್ಕತ್ತೆಗೆ ಹೋಗಿದ್ದೆನಷ್ಟೆ. ಪಶ್ಚಿಮ ಬಂಗಾಳದ ಬಂಕುಡಾ ಜಿಲ್ಲೆಗೆ, ಅಲ್ಲಿರುವ ಅಪೂರ್ವ ಟೆರಕೋಟ ದೇವಾಲಯಗಳಿರುವ ಬಿಷ್ಣುಪುರಕ್ಕೆ ಹೋಗಿದ್ದೆ. ಅಲ್ಲಿಂದ ಮುಂದಕ್ಕೆ, ಈಶಾನ್ಯಕ್ಕೆ ಹೋಗಿರಲಿಲ್ಲ. ಅಸ್ಸಾಂ ಆಗಲೇ ಎಂದಿನಂತೆ ಪ್ರವಾಹದ ಸುಳಿಯಲ್ಲಿ ಸಿಕ್ಕಿ ತತ್ತರಿಸುತ್ತಿತ್ತು. ಮಣಿಪುರದಲ್ಲಿ ಉಗ್ರಗಾಮಿಗಳ ಬೆದರಿಕೆ ಇದ್ದೇ ಇತ್ತು. ಈ ಆತಂಕಗಳ ನಡುವೆಯೂ ನಮ್ಮ ಈ ಭೇಟಿ ನಡೆಯಲೇಬೇಕಿತ್ತು. ಹಲವು ಸಲ, ಕೆಲವಾರು ಗಂಟೆಗಳ ಕಾಲ ಫೋನ್ ಮುಂದೆ ಕುಳಿತು, ಈ ರಾಜ್ಯಗಳ ಆರೋಗ್ಯ ಇಲಾಖೆಗಳನ್ನು, ಸಂಬಂಧಪಟ್ಟ ಅಧಿಕಾರಿಗಳನ್ನು ಸಂಪರ್ಕಿಸಲು ನಾವು ಮಾಡಿದ ಪ್ರಯತ್ನಗಳೆಲ್ಲ ವಿಫಲವಾದುವು. ಕಡೆಗೆ ಅಸ್ಸಾಂನಲ್ಲಿರುವ ತೇಜಪುರ ಮಾನಸಿಕ ಆಸ್ಪತ್ರೆಯ ಮುಖ್ಯಸ್ಥ ಡಾ|| ದೇವೂರಿ ಅವರನ್ನು ಸಂಪರ್ಕಿಸಲು ಸಫಲರಾದೆವು. ನಮ್ಮ ಭೇಟಿಯ ವಿವರಗಳನ್ನು ಅವರಿಗೆ ಕೊಟ್ಟು, ಈ ನಾಲ್ಕು ರಾಜ್ಯಗಳ ಅಧಿಕಾರಿಗಳಿಗೆ ಸಂದೇಶವನ್ನು ತಲುಪಿಸಲು ಪ್ರಾರ್ಥಿಸಿದೆವು. ''ಆಗಲಿ ನೀವು ಚಿಂತಿಸಬೇಡಿ. ಸಂದೇಶವನ್ನು ತಲುಪಿಸುವ ವ್ಯವಸ್ಥೆ ಮಾಡುತ್ತೇವೆ'' ಎಂದಾಗ, ನಮಗೆ ಸ್ವಲ್ಪ ಉಸಿರಾಡುವಂತಾಯಿತು. ಎಲ್ಲ ರಾಜ್ಯಗಳಿಗೂ ಸ್ಪೀಡ್ ಪೋಸ್ಟ್‌ನಲ್ಲಿ ಪತ್ರಗಳನ್ನು ರವಾನಿಸಿ, ನಮ್ಮ ಬರುವಿಕೆಯನ್ನು ಅಲ್ಲಿನವರಿಗೆ ಮುಟ್ಟಿಸಿದೆವು. ಅವರಿಗೆ ಡಾ|| ದೇವೂರಿಯವರಿಂದ ಫೋನ್ ಕರೆಯೋ, ಅಥವಾ ನಮ್ಮ ಪತ್ರವೋ ಮುಟ್ಟಲಿ ಎಂದು ಮನಸ್ಸಿನಲ್ಲೇ ಪ್ರಾರ್ಥಿಸಿದೆವು. ಜೂನ್ ಮೊದಲವಾರದಲ್ಲಿಯೇ ವಿಮಾನದಲ್ಲಿ ಟಿಕೇಟು ಖರೀದಿಸಲು ಪ್ರಯತ್ನಿಸಿದಾಗ, ಮಿಜೋರಾಮ್‌ನ ರಾಜಧಾನಿ ಐಜ್‌ವಾಲ್‌ನಿಂದ ಕಲ್ಕತ್ತೆಗೆ ನಮ್ಮದು ವೇಟಿಂಗ್ ಲಿಸ್ಟ್‌ನ ಟಿಕೆಟ್‌ಗಳಾದುವು. 'ಚಿಂತಿಸಬೇಡಿ. ೨೪ನೇ ತಾರೀಖಿನ ಹೊತ್ತಿಗೆ ಟಿಕೆಟ್‌ಗಳು ಓಕೆ ಆಗುತ್ತವೆ' ಎಂದು ಟ್ರಾವೆಲಿಂಗ್ ಏಜೆಂಟ್ ಹೇಳಿದರೂ, ನಮ್ಮ ಆತಂಕ ಕಡಿಮೆಯಾಗಲಿಲ್ಲ.

ಜೂನ್ ೧೬ನೇ ತಾರೀಖು ಬೆಳಿಗ್ಗೆ ೬ ಗಂಟೆಗೆ ಬೆಂಗಳೂರಿನಿಂದ ಕಲ್ಕತ್ತಾಗೆ ವಿಮಾನದಲ್ಲಿ ಹೊರಟೆವು. ಕಲ್ಕತ್ತೆಯಲ್ಲಿ ಇಳಿದು, ವಿಮಾನ ಬದಲಿಸಿ ಗುವಾಹಟಿ (ಗೌಹಾತಿ)ಯನ್ನು ತಲುಪಿದಾಗ ಹನ್ನೊಂದು ಗಂಟೆ. ಗುವಾಹಟಿ ವೈದ್ಯಕೀಯ ಕಾಲೇಜಿನ ಮನೋವೈದ್ಯ ಪ್ರಾಧ್ಯಾಪಕ ಡಾ|| ಪಿ. ದಾಸ್ ಅವರ ಶಿಷ್ಯ ವಿಮಾನ ನಿಲ್ದಾಣದಲ್ಲಿ ನಮ್ಮನ್ನು ಎದುರುಗೊಂಡು, ಹೊಟೆಲ್ ಬೆಲೆವ್ಯೂಗೆ ಕರೆದೊಯ್ದ. ವಿಮಾನ ನಿಲ್ದಾಣಕ್ಕೂ ಸಿಟಿಗೂ ಇರುವ ದೂರ ೨೬ ಕಿ.ಮೀ. ಭಾರತದ ಏಕಮಾತ್ರ 'ಪುಲ್ಲಿಂಗ ನದಿ' ಬ್ರಹ್ಮಪುತ್ರಾದ ದಂಡೆಯಲ್ಲೇ ಇರುವ ಈ ಹೊಟೆಲ್, ಅದರ ಪರಿಸರ ಯಾರಿಗಾದರೂ ಇಷ್ಟವಾಗುವಂಥದೇ. ಸಮುದ್ರದಷ್ಟು ವಿಶಾಲವಾಗಿ ಕಾಣುವ ನದಿ, ನಡುಗಡ್ಡೆಗಳಲ್ಲಿ ತುಂಬಿ ತುಳುಕುವ ವನರಾಜಿ, ಬೀಸುವ ತಂಗಾಳಿ ಚೇತೋಹಾರಿಯಾಗಿದ್ದುವು. ಹೊಟೆಲ್ ಪಕ್ಕದಲ್ಲೇ ರಾಜಭವನ, ಅದರ ಕಾವಲುಭಟರು. ನಾವು ಸುರಕ್ಷಿತ ಜಾಗದಲ್ಲಿದ್ದೇವೆ ಎಂದು ರೆಡ್ಡಮ್ಮ ಹೇಳಿದಾಗ ಹೌದೆಂದೆ!

ಪ್ರಪಂಚದಲ್ಲಿ ಅತ್ಯಧಿಕ ಮಳೆ ಬೀಳುವ ಪ್ರದೇಶಗಳಲ್ಲಿ ಅಸ್ಸಾಂ ಒಂದು. ಸುಮಾರು ೨,೯೦೦ ಕಿ.ಮೀ. ಉದ್ದದ ಪಾತ್ರವಿರುವ ಬೃಹತ್ ನದಿ ಬ್ರಹ್ಮಪುತ್ರ ಅಸ್ಸಾಂಗೆ ವರವೂ ಹೌದು ಶಾಪವೂ ಹೌದು. ಪ್ರತಿವರ್ಷ ಅಧಿಕ ಮಳೆಯಿಂದ ನೆರೆ ಬಂದು ಆಗುವ ಜನಹಾನಿ, ಧನಹಾನಿಯಿಂದ ಅಸ್ಸಾಂ ತತ್ತರಿಸುತ್ತದೆ. ಪ್ರಾಚೀನ ಭಾರತದಲ್ಲಿ ಕಾಮರೂಪವೆಂದು ಕರೆಯಲ್ಪಡುತ್ತಿದ್ದ ಅಸ್ಸಾಂನ ರಾಜಧಾನಿ ದೀಸ್‌ಪುರ - ಗುವಾಹಟಿ. ಇದನ್ನು ನರಕಾಸುರ ಕಟ್ಟಿದನೆಂದು ಪ್ರತೀತಿ. ಗುವಾಹಟಿಯ ಆಗಿನ ಹೆಸರು ಪ್ರಾಗ್‌ಯೋತಿಷ್‌ಪುರ. ನರಕಾಸುರನ ಮಗ ಭಗದತ್ತ ತನ್ನ ಪ್ರಬಲ ದಂಡಿನೊಂದಿಗೆ, ಕುರುಕ್ಷೇತ್ರ ಯುದ್ಧದಲ್ಲಿ ದುರ್ಯೋಧನನ ಪರ ಹೋರಾಡಿದವನು. ಹದಿಮೂರನೇ ಶತಮಾನದಲ್ಲಿ ಅಹೋಮರು ಈ ಭೂಭಾಗವನ್ನು ಗೆದ್ದು ಅದಕ್ಕೆ 'ಅಸೋಮ' ಎಂದು ಹೆಸರಿಟ್ಟರು. ಅಲ್ಲಿ ತಮ್ಮ ಪ್ರತಿನಿಧಿಯನ್ನಿಟ್ಟರು. ಅವರ ಕೊನೆಯ ಪ್ರತಿನಿಧಿ ಬದನ ಚಂದ್ರ ತಾನೇ ಸ್ವತಂತ್ರನಾಗಲು ಪ್ರಯತ್ನಿಸಿ ಬರ್ಮೀಯರ ನೆರವು ಪಡೆದ. ಬರ್ಮೀಯರು ಅವನಿಗೆ ನೆರವಾಗುವ ನೆಪದಲ್ಲಿ ಅಸ್ಸಾಮನ್ನು ಆಕ್ರಮಿಸಿಬಿಟ್ಟರು. ಅವರೊಂದಿಗೆ ಬ್ರಿಟಿಷರು ಯುದ್ಧ ಮಾಡಿದರು. ೧೮೨೬ರ ಒಪ್ಪಂದದ ಪ್ರಕಾರ ಬರ್ಮೀಯರು ಅಲ್ಲಿಂದ ಕಾಲ್ತೆಗೆದರು. ಬ್ರಿಟಿಷರು ೧೮೭೪ರಲ್ಲಿ ಷಿಲಾಂಗ್‌ಅನ್ನು ಅಸ್ಸಾಂನ ರಾಜಧಾನಿಯನ್ನಾಗಿ ಮಾಡಿದರು. ಭಾರತ ಸ್ವಾತಂತ್ರ್ಯವನ್ನು ಪಡೆದಾಗ, ಅಸ್ಸಾಮ್‌ನ ಕೆಲವು ಭಾಗಗಳು ಭೂತಾನಕ್ಕೂ, ಬಾಂಗ್ಲಾದೇಶಕ್ಕೂ ಸೇರಿಹೋದುವು. ಆನಂತರ, ಅರುಣಾಚಲಪ್ರದೇಶ, ನಾಗಾಲ್ಯಾಂಡ್, ಮೇಘಾಲಯ, ಮಿಜೋರಾಮ್ ರಾಜ್ಯಗಳು ಅಸ್ತಿತ್ವಕ್ಕೆ ಬಂದು ಅಸ್ಸಾಂ ಸಾಕಷ್ಟು ಚಿಕ್ಕದಾಯಿತು. ಮೂರನೇ ಒಂದು ಭಾಗಕ್ಕೆ ಇಳಿಯಿತು. ಅಸ್ಸಾಂನ ಹೆಗ್ಗಳಿಕೆ ಹಲವಾರು. ೭೫೦ ಟೀ ಪ್ಲಾಂಟೇಶನ್‌ಗಳಿದ್ದು ಭಾರತದ ಒಟ್ಟು ಉತ್ಪನ್ನದ ಶೇಕಡಾ ೫೫ರಷ್ಟು ಟೀ ಇಲ್ಲಿ ಬೆಳೆಯಲ್ಪಡುತ್ತದೆ. ದೇಶದ ಪ್ರಪ್ರಥಮ ಎಣ್ಣೆ ಬಾವಿಯನ್ನು ೧೮೮೯ರಲ್ಲಿ ದಿಗ್‌ಬಾಯ್‌ನಲ್ಲಿ ತೋಡಲಾಯಿತು. ಒಂಟಿ ಕೊಂಬಿನ ಖಡ್ಗಮೃಗಗಳಿರುವ ಕಾಜಿರಂಗ ವನ್ಯಜೀವಿಧಾಮ ಜಗತ್ ಪ್ರಸಿದ್ಧ. ತೇಗ, ಸಾಲ್, ಸಾಗುವಾನಿ ಇತ್ಯಾದಿ ಮರಗಳು ಅಸ್ಸಾಂನ ಆದಾಯಕ್ಕೆ ತಮ್ಮ ಕಾಣಿಕೆ ಸಲ್ಲಿಸುತ್ತವೆ.



ಗುವಾಹಟಿಯ ಕಾಮಾಕ್ಯ ದೇವಾಲಯ

**ಕಾಮಾಕ್ಯ ದೇವಾಲಯ**

ದಕ್ಷ ಯಜ್ಞದಲ್ಲಿ, ಯಜ್ಞಕುಂಡಕ್ಕೆ ಬಿದ್ದು ಆತ್ಮಹತ್ಯೆ ಮಾಡಿಕೊಂಡ ದಾಕ್ಷಾಯಣಿಯ ಪಾರ್ಥಿವ ಶರೀರವನ್ನು ಹೆಗಲಮೇಲೆ ಹೊತ್ತು, ಅಲೆದಾಡಿದನಂತೆ ಶಿವ. ದುಃಖ ಕೋಪದಿಂದ ಆತ ಮತಿಭ್ರಮಣೆಗೆ ಒಳಗಾಗಿದ್ದ. ಅದನ್ನು ಗಮನಿಸಿದ ವಿಷ್ಣು ತನ್ನ ಸುದರ್ಶನ ಚಕ್ರವನ್ನು ಬಿಟ್ಟು, ದಾಕ್ಷಾಯಣಿಯ ದೇಹವನ್ನು ಐವತ್ತೊಂದು ಭಾಗಗಳಾಗಿ ಕತ್ತರಿಸಿದ. ಒಂದೊಂದು ಭಾಗವೂ ಬಿದ್ದ ಸ್ಥಳ ಶಕ್ತಿಸ್ಥಳವಾಗಿ

ಪೂಜೆಗೊಳ್ಳತೊಡಗಿದುವು. ಗುವಾಹಟಿಯಲ್ಲಿ ದಾಕ್ಷಾಯಣಿಯ ಗರ್ಭಕೋಶ ಇತ್ಯಾದಿ ಸ್ತ್ರೀ ಭಾಗಗಳು ಬಿದ್ದುವಂತೆ. ಅಲ್ಲಿ ಕಾಮಾಕ್ಯ ದೇವಾಲಯ ಸ್ಥಾಪನೆಗೊಂಡಿತು. ಈಗಿರುವ ಕಟ್ಟಡ ಒಂದು ಸಾವಿರ ವರ್ಷಗಳಿಗೂ ಹಳೆಯದಾದದ್ದು ಎಂದು ಜನ ಹೇಳುತ್ತಾರೆ. ಕಾಮಾಕ್ಯ ದೇವತೆ ಭಕ್ತರ ಎಲ್ಲ ಬೇಡಿಕೆಗಳನ್ನು ಈಡೇರಿಸುತ್ತಾಳೆ ಎಂದು ನಂಬಿ, ಜನ ದೇವಿಯ ಪೂಜೆ ದರ್ಶನಕ್ಕೆ ಮುಗಿಬೀಳುತ್ತಾರೆ. ಪ್ರತಿ ತಿಂಗಳು ಐದು ದಿನಗಳ ಕಾಲ (ದೇವಿಯ ಋತುಸ್ರಾವದ ಕಾಲ) ದೇವಾಲಯವನ್ನು ಮುಚ್ಚಿ ವಿಶೇಷ ಪೂಜೆಗಳನ್ನು ನಡೆಸಲಾಗುತ್ತದೆ. ಕಾಮಾಕ್ಯ ಶಾಕ್ತೇಯರ ಪೂಜಾಸ್ಥಳವೂ ಹೌದು. ಹಿಂದೆ ನರಬಲಿಯೂ ನಡೆಯುತ್ತಿತ್ತಂತೆ. ಈಗ ಯಥೇಚ್ಛವಾಗಿ ಪ್ರಾಣಿಬಲಿ ನಡೆಯುತ್ತದೆ. ತಲೆಯ ಮೇಲೆ ಮನುಷ್ಯನ ತಲೆ ಬುರುಡೆ ಇಟ್ಟುಕೊಂಡ ಸನ್ಯಾಸಿಯ ಚಿತ್ರ ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟವಾಯಿತು. ಸಂಜೆಯ ಹೊತ್ತಿನಲ್ಲಿ ನಾವು ದೇವಾಲಯಕ್ಕೆ ಹೋದೆವು. ನೆಲಮಟ್ಟಕ್ಕಿಂತ ಕೆಳಗಿರುವ, ನೀರು ತುಂಬಿದ ಆವರಣದಲ್ಲಿ ಮಣ್ಣಿನ ದಿಬ್ಬವಿದೆ. ಅದನ್ನೇ ದೇವಿ ಎಂದು ಪೂಜಿಸಲಾಗುತ್ತದೆ.

ಮಾರನೆಯ ದಿನ ಗುವಾಹಟಿಯಿಂದ ೧೨೦ ಕಿ.ಮೀ. ದೂರದಲ್ಲಿರುವ ಗೋಲ್ ಪಾರಾ ಜಿಲ್ಲಾ ಕೇಂದ್ರದ ಸಿವಿಲ್ ಆಸ್ಪತ್ರೆಗೆ ಹೋಗಿ, ಅಲ್ಲಿ ಮನೋವೈದ್ಯ ವಿಭಾಗಕ್ಕೆ ಭೇಟಿ ನೀಡಿ, ಸೇವಾ ಸೌಲಭ್ಯಗಳನ್ನು ವೀಕ್ಷಿಸಿದೆವು. ಭಾರತದ ಎಲ್ಲೆಡೆ ಇರುವಂತೆ ಇಲ್ಲಿಯೂ ಕೂಡ, ಮನೋರೋಗಿಗಳ ಬಗ್ಗೆ ಸಾಕಷ್ಟು ಸಾಮಾಜಿಕ ಕಳಂಕವಿದೆ, ಜೊತೆಗೆ ಅಜ್ಞಾನವೂ ಇದೆ. ಮಾನಸಿಕ ರೋಗಗಳು ಪೂರ್ವ ಜನ್ಮದ ಪಾಪಕರ್ಮ ಫಲ ಅಥವಾ ದೆವ್ವ, ಭೂತ, ಮಾಟ ಮಂತ್ರಗಳಿಂದ ಬರುವಂಥದ್ದು, ಮನೋರೋಗಕ್ಕೆ ಔಷಧಿ ಇಲ್ಲ. ಇತ್ಯಾದಿ ಜನಪ್ರಿಯ ನಂಬಿಕೆಗಳಿದ್ದು, ಮನೋವೈದ್ಯರನ್ನು ಕಾಣಲು ಹಿಂಜರಿಯುತ್ತಾರೆ. ಕಳೆದ ೩ ವರ್ಷಗಳಲ್ಲಿ ಮನೋವೈದ್ಯ ಚಿಕಿತ್ಸಾ ಕೇಂದ್ರ ಕ್ರಮೇಣ ಜನಪ್ರಿಯವಾಗುತ್ತಿದೆ ಎಂಬುದನ್ನು ಕಂಡೆವು.



ಮನಮೋಹಕ ಅರುಣಾಚಲ ಪ್ರದೇಶ

**ರಸ್ತೆಯಲ್ಲಿ ದನಕರುಗಳು ಮೇಕೆಗಳು**

ಮೊದಲ ದಿನ ಗುವಾಹಟಿಯ ರಸ್ತೆಯಲ್ಲಿ ಮೂರು ದನಗಳ ಹೆಣ ಕಂಡೆ. ಏನಿದು, ಏಕೆ ಸತ್ತಿವೆ ಎಂದು ಡ್ರೈವರನ್ನು ಕೇಳಿದಾಗ ಅಯ್ಯೋ, ಬಿಡಿ ಸಾರ್ ಇದು ಇಲ್ಲಿ ಮಾಮೂಲು. ಈ ದನಗಳು ರಸ್ತೆಯ ಮಧ್ಯೆಯೇ ಮಲಗಿರುತ್ತವೆ. ಸ್ಪೀಡಾಗಿ ಬರುವ ಲಾರಿ, ಟೆಂಪೋಗಳಿಗೆ ಸಿಕ್ಕಿ ಸಾಯುತ್ತಲೇ ಇರುತ್ತವೆ, ಎಂದಾಗ ನನಗೆ ಹೊಟ್ಟೆಯಲ್ಲಿ ಸಂಕಟವಾಯಿತು. ಗುವಾಹಟಿಯಿಂದ ಗೋಲ್ ಪಾರಾಗೆ ಹೋಗುವಾಗ, ದಾರಿಯುದ್ದಕ್ಕೂ ದನಕರುಗಳು, ಮೇಕೆಗಳ ದರ್ಶನವಾಗುತ್ತಲೇ ಇತ್ತು. ರಸ್ತೆಯ ಬದಿಯ ಹುಲ್ಲನ್ನು ಮೇಯುತ್ತಾ, ಮೆಲುಕು ಹಾಕುತ್ತಾ, ತಮ್ಮಿಷ್ಟ ಬಂದಂತೆ ರಸ್ತೆಯಗಲಕ್ಕೂ ಓಡಾಡುತ್ತಾ, ರಸ್ತೆ ಮಧ್ಯೆಯೇ ಕುಳಿತು ತೂಕಡಿಸುತ್ತಾ ಇದ್ದುದನ್ನು ಕಂಡೆ. ಗಂಟೆಗೆ ೬೦ ಅಥವಾ ೭೦ ಕಿ.ಮೀ. ವೇಗದಲ್ಲಿ ನಮ್ಮ ಮಾರುತಿ ವ್ಯಾನ್ ಚಲಿಸುತ್ತಿತ್ತು. ಚಾಕಚಕ್ಯತೆಯಿಂದ, ಈ ಪ್ರಾಣಿಗಳಿಗೆ ತಾಕದಂತೆ, ನಮ್ಮ ವಾಹನದ ಚಾಲಕ ಎಚ್ಚರವಹಿಸುತ್ತಿದ್ದ. ಈ ಪ್ರಾಣಿಗಳು ರಸ್ತೆಯಲ್ಲಿ ಅಡ್ಡಾಡುವುದನ್ನು ಕಂಡು, ನನ್ನ ನಾಡಿ ಮಿಡಿತ ಏರುತ್ತಲೇ ಇತ್ತು!

**ತೇಜಪುರ ಮಾನಸಿಕ ಆಸ್ಪತ್ರೆ**

ಜೂನ್ ೧೮ರಂದು, ಮತ್ತೊಂದು ಜಿಲ್ಲಾ ಕೇಂದ್ರ ನಾಗಾಂವ್‌ಗೆ ಭೇಟಿ ನೀಡಿದೆವು. ಕಳೆದ ಆರು ವರ್ಷಗಳಿಂದ ಅಲ್ಲಿ ಮಾನಸಿಕ ಆರೋಗ್ಯ ಕಾರ್ಯಕ್ರಮ ನಡೆಯುತ್ತಿದೆ. ಅಲ್ಲಿಯ ಕೆಲಸ ಮುಗಿಸಿ, ಊಟ ಮಾಡಿ, ತೇಜಪುರಕ್ಕೆ ಹೊರಟೆವು. ತೇಜಪುರದ ಮಾನಸಿಕ ಆಸ್ಪತ್ರೆ ಈ ಭಾಗದಲ್ಲಿ ಇತಿಹಾಸ ಪ್ರಸಿದ್ಧವಾದದ್ದು. ೧೮೭೦ರ ಸುಮಾರಿನಲ್ಲಿ ಬ್ರಿಟಿಷರಿಂದ ಸ್ಥಾಪಿಸಲ್ಪಟ್ಟ ಈ ಅಸೈಲಮ್ ಆಸ್ಪತ್ರೆ ಇಡೀ ಈಶಾನ್ಯ ಭಾಗದ ಮನೋರೋಗಿಗಳನ್ನು ತನ್ನ ಒಡಲಲ್ಲಿ ತುಂಬಿಕೊಂಡಿತು. ಏಳೂ ರಾಜ್ಯಗಳು, ಮನೆಯವರು ಒಲ್ಲದ, ನೋಡಿಕೊಳ್ಳಲಾಗದ ತೀವ್ರ ಮನೋರೋಗಿಗಳನ್ನು ಇಲ್ಲಿಗೆ ತಂದಿಟ್ಟವು. ನಾಲ್ಕು ನೂರು ರೋಗಿಗಳಿಗೆ ಕಟ್ಟಲಾದ ಆಸ್ಪತ್ರೆಯಲ್ಲಿ ಒಂದು ಸಾವಿರಕ್ಕೂ ಮೀರಿ ರೋಗಿಗಳು ತುಂಬಿ ತುಳುಕಾಡತೊಡಗಿದರು. ಹೊಸತಾಗಿ ಬರುವ ರೋಗಿಗಳಿಗೆ ಜಾಗವಿಲ್ಲದಾಗಿ, ಅವರನ್ನು ವಿವಿಧ ರಾಜ್ಯಗಳ ಜೈಲುಗಳಲ್ಲಿ ಇರಿಸುವ ಅನಧಿಕೃತ ಪದ್ಧತಿ ಶುರುವಾಯಿತು. ಇವರನ್ನು 'ಅಪರಾಧಿಗಳಲ್ಲದ ಹುಚ್ಚರು' ಎಂದು ಕರೆಯಲಾಯಿತು. ಯಾವ ಅಪರಾಧವನ್ನೂ ಮಾಡದ ಈ ರೋಗಿಗಳು ಜೈಲಿನಲ್ಲಿ ಕೊಳೆಯುವಂತಾಯಿತು. ಇವರ ಸಂಖ್ಯೆ ಐದು ಸಾವಿರಕ್ಕೂ ಮೀರಿತು. ಅನೇಕ ರಾಜ್ಯಗಳಲ್ಲಿ ತರಪೇತಿ ಪಡೆದ ಒಬ್ಬ ಮನೋವೈದ್ಯನೂ ಇರಲಿಲ್ಲ. ರಾಜ್ಯಕೇಂದ್ರ ಸ್ಥಳದಲ್ಲಿಯೇ ಆಗಲೀ, ಜಿಲ್ಲಾ ಕೇಂದ್ರದಲ್ಲಿಯೇ ಆಗಲೀ ಮಾನಸಿಕ ರೋಗಿಗಳಿಗೆ ಚಿಕಿತ್ಸಾ ಸೌಲಭ್ಯಗಳಿರಲಿಲ್ಲ. ಇಂತಹ ಶೋಚನೀಯ ಪರಿಸ್ಥಿತಿಯಲ್ಲಿ ಮಿಂಚೊಂದು ಹೊಳೆಯಿತು. ಮನೋರೋಗಿಯಾಗಿ, ಜೈಲಿನಲ್ಲಿದ್ದ ಶೀಲ ಭಾರ್ಸೆ ಎಂಬ ಮಹಿಳೆ ತನ್ನ ಈ ದುಸ್ಥಿತಿಯನ್ನು ಕುರಿತು ಸುಪ್ರೀಂಕೋರ್ಟಿಗೆ ಪತ್ರ ಬರೆದಳು. ಅದನ್ನು ಸಾರ್ವಜನಿಕ ಹಿತಾಸಕ್ತಿಯ ವಿಷಯವನ್ನಾಗಿ ಮಾಡಿ, ಪ್ರಕರಣವನ್ನು ಕೈಗೆತ್ತಿಕೊಂಡ ನ್ಯಾಯಾಲಯವು, ವಿಚಾರಣೆ ನಡೆಸಿ ಐತಿಹಾಸಿಕ ತೀರ್ಪೊಂದನ್ನು ನೀಡಿತು. ನ್ಯಾಯಾಧೀಶ ಶ್ರೀ. ರಂಗನಾಥ ಮಿಶ್ರ ಅವರು, ನಿರೂಪ ಹೊರಡಿಸಿ, ಯಾವುದೇ ಜೈಲಿನಲ್ಲಿ ಈ ರೀತಿ ಮನೋರೋಗಿಗಳನ್ನಿಡುವುದು ಕಾನೂನು ಬಾಹಿರ, ಅವರಿಗೆ ಹೊರಗಡೆ ಸಮುದಾಯದಲ್ಲಿ ಚಿಕಿತ್ಸೆಗೆ ವ್ಯವಸ್ಥೆ ಮಾಡಬೇಕೆಂದರು. ಅಧಿಕ ರೋಗಿಗಳ ಒತ್ತಡ, ಮೂಲ ಸೌಲಭ್ಯಗಳ ಅತೀವ ಕೊರತೆಯಿಂದ ನರಳುತ್ತಿದ್ದ ತೇಜಪುರ ಆಸ್ಪತ್ರೆಯನ್ನು ಸುಧಾರಿಸಲು ಇದು ದಾರಿ ಮಾಡಿಕೊಟ್ಟಿತು. ಈಗ ಅದನ್ನು 'ರೀಜನಲ್ ಇನ್‌ಸ್ಟಿಟ್ಯೂಟ್ ಆಫ್ ಮೆಂಟಲ್ ಹೆಲ್ತ್' (ಪ್ರಾಂತ ಮಟ್ಟದ ಮಾನಸಿಕ ಆರೋಗ್ಯ ಸಂಸ್ಥೆ) ಎಂದು ಪುನರ್ ನಾಮಕರಣ ಮಾಡಿ, ಆಧುನಿಕ ಸೌಲಭ್ಯಗಳು, ಶಿಕ್ಷಣ ಮತ್ತು ತರಪೇತಿಯ ಚಟುವಟಿಕೆಗಳು ಹಾಗೂ ಸಂಶೋಧನಾ ಚಟುವಟಿಕೆಗಳು ನಡೆಯುವಂತೆ ವ್ಯವಸ್ಥೆ ಮಾಡಲಾಗುತ್ತಿದೆ. ಹೊಸ ಕಟ್ಟಡಗಳು ಮೇಲೇಳುತ್ತಿವೆ. ಈಗ ಇರುವ ರೋಗಿಗಳ ಸಂಖ್ಯೆ ೪೦೦ ಮಾತ್ರ. ೮೦ ಎಕರೆಗಳಷ್ಟು ವಿಶಾಲ ಪ್ರದೇಶದಲ್ಲಿರುವ ಈ ಆಸ್ಪತ್ರೆಯ ಆವರಣದಲ್ಲಿ ೭೦-೮೦ ಜಿಂಕೆಗಳು ಓಡಾಡುತ್ತಾ, ಪರಿಸರಕ್ಕೆ ತಮ್ಮ ಚೆಲುವನ್ನು ಕಾಣಿಕೆಯಾಗಿ ನೀಡಿರುವುದು ಒಂದು ವಿಶೇಷ. ಈ ಆಸ್ಪತ್ರೆಯ ಸರ್ವಾಂಗೀಣ ಸುಧಾರಣೆಗೆ ಡಾ॥ ದೇವೂರಿ ಮನಃಪೂರ್ವಕವಾಗಿ ಪ್ರಯತ್ನ ಮಾಡುತ್ತಿದ್ದಾರೆ.

ತೇಜಪುರದ ಅರುಣಾಚಲ ಪ್ರದೇಶ ಅತಿಥಿಗೃಹದಲ್ಲಿ ತಂಗಿದ್ದೆವು. ಬೆವರಿಳಿಸುವ ಅಸಾಧ್ಯ ಸೆಖೆ. ಮಾರನೆಯ ದಿನ ಬೆಳಿಗ್ಗೆ ಐದು ಗಂಟೆಗೇ ಅರುಣಾಚಲ ಪ್ರದೇಶದ ರಾಜಧಾನಿ ಇಟಾನಗರದತ್ತ ಪ್ರಯಾಣ ಬೆಳೆಸಿದೆವು. ಸುಮಾರು ಐದು ಗಂಟೆಗಳ ಪ್ರಯಾಣ. ಅರ್ಧ ದೂರದಷ್ಟು ರಸ್ತೆ ಚೆನ್ನಾಗಿದ್ದರೆ, ಇನ್ನರ್ಧ ದೂರದ ರಸ್ತೆಯ ಪ್ರಯಾಣ ಬೆನ್ನು ಮೂಳೆಯನ್ನು ಮುರಿಯುವಂತದ್ದು. ಇಟಾನಗರದ ಒಂದು ಭಾಗವಾದ ನಹರ್ ಲಗೂನ್‌ಅನ್ನು ತಲುಪಿ, ರಾಜ್ಯ ಅತಿಥಿಗೃಹವನ್ನು ಪ್ರವೇಶಿಸಿದೆವು. ಅಲ್ಲಿನ ಪರಿಸರದ ಚೆಲುವು ಪ್ರಯಾಣದ ಆಯಾಸವನ್ನೆಲ್ಲ ಪರಿಹರಿಸಿತು.

**ರುಕ್ಮಿಣಿಯ ರಾಜ್ಯ !**

ಬ್ರಿಟಿಷರಿಂದ ನೇಫಾ (ನಾರ್ತ್ ಈಸ್ಟ್ ಫ್ರಾಂಟಿಯರ್ ಏಜೆನ್ಸಿ) ಜಿಲ್ಲೆ ಎಂದು ಕರೆಸಿಕೊಂಡಿದ್ದ ಈ ಭೂಭಾಗದಲ್ಲಿರುವ ಜನರಲ್ಲಿ ಶೇ. ೭೯ರಷ್ಟು ಪರ್ವತವಾಸಿ ಬುಡಕಟ್ಟಿನವರು. ಇಪ್ಪತ್ತು ವಿಭಿನ್ನ ಗುಂಪಿಗೆ ಸೇರಿದವರು. ಜನಸಾಂದ್ರತೆ ಒಂದು ಚದರ ಕಿ.ಮೀ.ಗೆ ಕೇವಲ ಹತ್ತು!

ಇಂದಿನ ಅರುಣಾಚಲ ಪ್ರದೇಶ ಮಹಾಭಾರತದ ಕಾಲದಲ್ಲಿ ರುಕ್ಮಿಣಿಯ ರಾಜ್ಯ! ರುಕ್ಮಿಣಿಯ ತಂದೆ ಭೀಷ್ಮಕ ಈ ಪ್ರಾಂತವನ್ನು ಆಳುತ್ತಿದ್ದ ದೊರೆ. ದೂರದ ಗುಜರಾತಿನಿಂದ ಶ್ರೀಕೃಷ್ಣನನ್ನು ತನ್ನ ಸೌಂದರ್ಯ, ಪ್ರೀತಿಯಿಂದ ಆಕರ್ಷಿಸಿದ ರುಕ್ಮಿಣಿ, ಪ್ರೀತಿಯ ವಿಜಯದ ಸಂಕೇತವಾಗಿ ಇಂದಿಗೂ 'ಮಾಲಿನಿ ತಾನ್' ದೇವಾಲಯದಲ್ಲಿ ಮೂರ್ತಿ ರೂಪದಲ್ಲಿ ನೆಲೆಗೊಂಡು ಪೂಜಿಸಲ್ಪಡುತ್ತಿದ್ದಾಳೆ. ರುಕ್ಮಿಣಿಯನ್ನು ಶಿಶು ಪಾಲನಿಗೆ ಕೊಟ್ಟು ಮದುವೆ

ಮಾಡಬೇಕೆಂಬುದು ಆಕೆಯ ಅಣ್ಣ ರುಕ್ಮನ ಆಸೆ. ಅದಕ್ಕೆ ಸಿದ್ಧತೆಯನ್ನೂ ಮಾಡುತ್ತಾನೆ. ಸುದ್ದಿ ತಿಳಿದ ಕೃಷ್ಣ ಧಾವಿಸಿ ಬಂದು ರುಕ್ಮಿಣಿಯನ್ನು ಅಪಹರಿಸುತ್ತಾನೆ. ರುಕ್ಮ ಮತ್ತು ಅವನ ಸಂಗಡಿಗರನ್ನು ಹೋರಾಡಿ ಹಿಮ್ಮೆಟ್ಟಿಸುತ್ತಾನೆ. ಸಾಕ್ಷಾತ್ ಪರಶಿವ-ಪಾರ್ವತಿಯರು ಕೃಷ್ಣ-ರುಕ್ಮಿಣಿಯರ ವಿವಾಹವನ್ನು ನೆರವೇರಿಸುತ್ತಾರೆ. ರುಕ್ಮಿಣಿಗೆ ಮಾಲೆ ನೀಡಿದ ಪಾರ್ವತಿಯನ್ನು, ಮಾಲಿನಿ ಹೆಸರಿನಲ್ಲಿ ಜನ ಈಗಲೂ ಪೂಜಿಸುತ್ತಾರೆ. ಹನ್ನೊಂದು ಹನ್ನೆರಡನೇ ಶತಮಾನದಲ್ಲಿ ಕಟ್ಟಿದ ಶಿವ-ಪಾರ್ವತಿ-ರುಕ್ಮಿಣಿ ದೇವಸ್ಥಾನಗಳ ಅವಶೇಷಗಳು ೧೯೬೮ರ ಸುಮಾರಿಗೆ ಕಂಡುಹಿಡಿಯಲ್ಪಟ್ಟವು. ಪುರಾತತ್ವ ಇಲಾಖೆಯು ಉತ್ಖನನವನ್ನು ಕೈಗೊಂಡು, ಕಲ್ಲಿನಲ್ಲಿ ನಿರ್ಮಿಸಿದ ದೇವಾಲಯದ ಅನೇಕ ಅವಶೇಷಗಳನ್ನು ಹೊರ ತೆಗೆದಿದೆ. ಈ ಮಾಲಿನಿ ತಾನ್ ಇತಿಹಾಸದ ಮೇಲೆ ಹೊಸಬೆಳಕನ್ನು ಚೆಲ್ಲಿದೆ. ದೂರದ ಒರಿಸ್ಸಾ ಇತ್ಯಾದಿ ಕಡೆಗಳಿಂದ ಶಿಲ್ಪಿಗಳನ್ನು ಕರೆಸಿ, ಈ ಸುಂದರ ದೇವಾಲಯವನ್ನು ಪಾಲರು ಕಟ್ಟಿರಬೇಕೆಂದು ಊಹಿಸಲಾಗಿದೆ. ಶಕ್ತಿ ಸ್ವರೂಪಿಣಿ ಮಾಲಿನಿ, ರುಕ್ಮಿಣಿಯ ವಿಗ್ರಹಗಳನ್ನು ಪೂಜಿಸಲು ಜನ ಹಿಂಡುಹಿಂಡಾಗಿ ಬರುತ್ತಾರೆ. ಇತಿಹಾಸ-ಶಿಲ್ಪಕಲಾ ಪ್ರಿಯರನ್ನೂ ಮಾಲಿನಿ ತಾನ್ ಕೈಬೀಸಿ ಕರೆಯುತ್ತದೆ. ಮಾಲಿನಿ ತಾನ್ ಶಾಕ್ತೇಯರ ಪೂಜಾಸ್ಥಾನವಾಗಿತ್ತೆಂಬುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳಿವೆ.

೧೯೭೨ರಲ್ಲಿ ಕೇಂದ್ರಾಡಳಿತ ಪ್ರದೇಶವಾಗಿ, ೧೯೮೭ರಲ್ಲಿ ಪೂರ್ಣ ರಾಜ್ಯ ಸ್ಥಾನಮಾನವನ್ನು ಪಡೆದ ಅರುಣಾಚಲ ಪ್ರದೇಶದ ಪ್ರಧಾನ ಕಸುಬು ಒಕ್ಕಲುತನ. ಈ ಜನರ ವ್ಯವಸಾಯ ವಿಧಾನವನ್ನು ಝೂಮ್ಮಿಂಗ್ ಎಂದು ಕರೆಯುತ್ತಾರೆ. ಕಾಡನ್ನು ಸವರಿ, ಅಲ್ಲಿ ಒಂದು ಅಥವಾ ಎರಡು ಬೆಳೆಯನ್ನು ತೆಗೆದು, ಆಮೇಲೆ ಆ ಜಾಗವನ್ನು ಬಿಟ್ಟು, ಮತ್ತೊಂದು ಜಾಗದ ಕಾಡನ್ನು ಕಡಿದು ಬೆಳೆ ಬೆಳೆಯುತ್ತಾರೆ. ಗೊಬ್ಬರ, ರಾಸಾಯನಿಕ ಗೊಬ್ಬರದ ಹೆಸರನ್ನು ಇವರು ಕೇಳಿಲ್ಲ, ಉಪಯೋಗಿಸಿಲ್ಲ. ಅಕ್ಕಿ ಗೋಧಿ, ಜೋಳ, ಸಾಸಿವೆ ಮುಖ್ಯ ಬೆಳೆ.


ಇಟಾನಗರದ ಮಹಾಯಾನ ಬುದ್ಧ ಮಂದಿರ

ಇತಿಹಾಸ ಪ್ರಸಿದ್ಧ ಹಾಗೂ ಬುದ್ಧ ಧರ್ಮೀಯರ ಆರಾಧನಾ ಸ್ಥಳ ಬೌದ್ಧ ವಿಹಾರ ಟವಾಂಗ್‌ನಲ್ಲಿದೆ. ಇಟಾನಗರದಲ್ಲೂ ಮಹಾಯಾನ ಬೌದ್ಧ ಮಂದಿರವಿದ್ದು, ಅದನ್ನು ನೋಡುವ ಅವಕಾಶ ನನಗೆ ಸಿಕ್ಕಿತು. ಪಕ್ಕದಲ್ಲೇ ಇರುವ ರಾಜ್ಯ ವಸ್ತು ಸಂಗ್ರಹಾಲಯವನ್ನು ನೋಡಿದೆ.

**ಗಂಗಾ ಸರೋವರ**

ಇಟಾನಗರದಿಂದ ೧೨ ಕಿ.ಮೀ. ದೂರದಲ್ಲಿ, ಪುಟ್ಟ ಆದರೆ ಬಹು ಸುಂದರವಾದ ಸರೋವರವಿದೆ. ದಟ್ಟ ಗಿಡ-ಮರಗಳ ನಡುವೆ ಇರುವ ಸರೋವರದಲ್ಲಿ ದೋಣಿ ವಿಹಾರ ಸೌಲಭ್ಯವಿದೆ.

ಮಣಿಪುರದ ರಾಜಧಾನಿ ಇಂಫಾಲಕ್ಕೆ ಹೋಗಲು, ನಾವು ಇಟಾನಗರದಿಂದ ಗೌಹಾತಿಗೆ ಬಸ್‌ನಲ್ಲೂ, ಗೌಹಾತಿಯಿಂದ ಇಂಫಾಲಕ್ಕೆ ವಿಮಾನದಲ್ಲೂ ಹೋಗುವುದೆಂದು ನಿರ್ಧಾರವಾಗಿತ್ತು. ಸಂಜೆ ಆರು ಗಂಟೆಗೆ ಇಟಾನಗರವನ್ನು ಬಿಟ್ಟ ಬಸ್ಸು ಇಡೀ ರಾತ್ರಿ ಚಲಿಸಿ, ಬೆಳಗಿನ ೬-೧೫ಕ್ಕೆ ಗೌಹಾತಿಯನ್ನು ತಲುಪಿತು. ರಾತ್ರಿ ಇಡೀ ಮಳೆ ಸುರಿಯುತ್ತಿತ್ತು. ಬೆಳಗಿನ ೧೦ ಗಂಟೆಗೆ ಇಂಫಾಲಕ್ಕೆ ಹೊರಡಬೇಕಿದ್ದ ವಿಮಾನವನ್ನು ರದ್ದುಮಾಡಿದ ವಿಷಯ ವಿಮಾನ ನಿಲ್ದಾಣಕ್ಕೆ ಹೋದಾಗ ತಿಳಿಯಿತು. ಮಾರನೆಯ ದಿನದ ಫ್ಲೈಟ್‌ಗೆ ನಾವು ಹೋಗಬಹುದೆಂದು ಹೇಳಿದರು. ನಾವು ಅಂದೇ ಇಂಫಾಲಕ್ಕೆ ಹೋಗಲೇಬೇಕಾಗಿದೆ ಎಂದು ತಿಳಿಸಿದಾಗ, ವಿಶೇಷ ಅನುಮತಿ ಪಡೆದು, ಜೆಟ್ ಸಂಸ್ಥೆಯ ವಿಮಾನದಲ್ಲಿ ಹೋಗಲು ಅನುವುಮಾಡಿಕೊಟ್ಟರು. ಮಧ್ಯಾಹ್ನ ಒಂದು ಗಂಟೆಯವರೆಗೆ ವಿಮಾನ ನಿಲ್ದಾಣದಲ್ಲಿ ಕೂರುವಂತಾಯಿತು. ಇಂಫಾಲ ತಲುಪಿದಾಗ ಒಂದೂಮುಕ್ಕಾಲು ಗಂಟೆ. ಈ ಬದಲಾವಣೆಯ ಗೊಂದಲದಿಂದಾಗಿ, ನಮ್ಮನ್ನು ಎದುರುಗೊಳ್ಳಲು ವಿಮಾನ ನಿಲ್ದಾಣಕ್ಕೆ ಯಾರೂ ಬಂದಿರಲಿಲ್ಲ. ಏನು ಮಾಡುವುದು, ಎಲ್ಲಿ ಹೋಗುವುದು ಒಂದೂ ಗೊತ್ತಿಲ್ಲ. ಮಣಿಪುರ ರಾಜ್ಯದ ಮಾನಸಿಕ ಆರೋಗ್ಯ ಕಾರ್ಯಕ್ರಮದ ನಿರ್ವಹಣಾಧಿಕಾರಿ ಡಾ|| ಅಶೋಕ ಶರ್ಮರನ್ನು ಫೋನ್‌ನಲ್ಲಿ ಸಂಪರ್ಕಿಸಲು ಮಾಡಿದ ಪ್ರಯತ್ನ ಸಫಲವಾಗಲಿಲ್ಲ. ವಿಮಾನ ನಿಲ್ದಾಣದಿಂದ ಹೊರಬಂದು, ಯಾವುದಾದರೂ ಆಸ್ಪತ್ರೆ-ವೈದ್ಯರ ವಾಹನವಿದೆಯೇ ಎಂದು ಕಣ್ಣು ಹಾಯಿಸಿದೆ. ರೆಡ್‌ಕ್ರಾಸ್ ಗುರುತಿದ್ದ ಒಂದು ಜೀಪ್ ಕಣ್ಣಿಗೆ ಬಿತ್ತು. ಹತ್ತಿರ ಹೋಗಿ ಡಾ|| ಅಶೋಕ ಶರ್ಮಾ ಬಗ್ಗೆ ವಿಚಾರಿಸಿದೆ. ಅವರು ಜವಾಹರ್‌ಲಾಲ್ ನೆಹರೂ ಆಸ್ಪತ್ರೆಯಲ್ಲಿರುತ್ತಾರೆಂದು ತಿಳಿದು, ಆ ಆಸ್ಪತ್ರೆಗೆ ಹೋದೆವು. ಸಂಪರ್ಕ ಪಡೆದೆವು.

**ಜಲಾವೃತ ಇಂಫಾಲ**

ಎಂದಿನಂತೆ, ವಿಪರೀತ ಮಳೆ ಸುರಿಯುತ್ತಿದ್ದ ಇಂಫಾಲದಲ್ಲಿ, ಎಲ್ಲಿ ನೋಡಿದರೆ ಅಲ್ಲಿ ನೀರು. ಬೆಂಗಳೂರಿನಂತೆ ಚರಂಡಿ ವ್ಯವಸ್ಥೆ. ಹೂಳುತುಂಬಿ, ಮಳೆಯ ನೀರು ರಸ್ತೆಗಳಲ್ಲಿ, ಮನೆಗಳ ಹಿಂದೆ ಮುಂದೆ, ಖಾಲಿ ಜಾಗಗಳಲ್ಲಿ ತುಂಬಿಕೊಂಡಿತ್ತು. ತಗ್ಗಿನ ಸ್ಥಳಗಳಲ್ಲಿ ಮನೆಯೊಳಗೂ ನೀರು ! ಮಲೇರಿಯಾ ಜ್ವರ ಹಾವಳಿಯೂ ಜೋರು !

ಮಾನಸಿಕ ಆರೋಗ್ಯ ಕಾರ್ಯಕ್ರಮದ ಅನುಷ್ಠಾನದ ವಿವರಗಳನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದೆವು. ಎರಡು ಬುದ್ಧಿಮಾಂದ್ಯ ಮಕ್ಕಳ ಶಾಲೆಗೂ ಭೇಟಿಕೊಟ್ಟೆವು. ಇಂಫಾಲದ ರೀಜನಲ್ ಮೆಡಿಕಲ್ ಕಾಲೇಜನ್ನೂ ಕಂಡೆವು. ಈ ಸಂಸ್ಥೆ, ಈ ಪ್ರದೇಶದ ಎಲ್ಲ ರಾಜ್ಯಗಳ ತಜ್ಞ ವೈದ್ಯರ ತರಪೇತಿಗೆ ಮುಡಿಪಾಗಿದೆ.

**ಗೋವಿಂದಜೀ ದೇವಸ್ಥಾನ, ಮಹಿಳಾ ಮಾರ್ಕೆಟ್...**

ಮಣಿಪುರ ಎಂದಾಕ್ಷಣ ನಮಗೆಲ್ಲ ನೆನಪಾಗುವುದು ಮಣಿಪುರಿ ನೃತ್ಯ, ಶ್ರೀಕೃಷ್ಣ ರಾಸಲೀಲೆ ! ಜವಹರ್‌ಲಾಲ್ ನೆಹರೂ ಮಣಿಪುರ ರಾಜ್ಯದ ಹಾಗೂ ಅಲ್ಲಿನ ಜನರ ಸೌಂದರ್ಯಕ್ಕೆ ಮಾರುಹೋಗಿ ಅದನ್ನು ಭಾರತದ ಆಭರಣ ಎಂದು ಕರೆದಿದ್ದರು ! ಮೈಸೂರಿನಂತೆ, ಬ್ರಿಟಿಷರ ಕಾಲದಲ್ಲೂ ಮಣಿಪುರದ ಅರಸುವಿನ ಆಳ್ವಿಕೆ ಇತ್ತು. ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಮಣಿಪುರ ಮಹಾರಾಜರ ನೇತೃತ್ವದಲ್ಲಿ ಪ್ರಜಾಪ್ರಭುತ್ವ ಸರ್ಕಾರ ಇಲ್ಲಿ ಸ್ಥಾಪನೆಯಾಗಿತ್ತಾದರೂ, ೧೯೪೯ರಲ್ಲಿ 'ಸಿ' ದರ್ಜೆಯ ರಾಜ್ಯವಾಗಿ, ಭಾರತ ಒಕ್ಕೂಟಕ್ಕೆ ಸೇರ್ಪಡೆಯಾಯಿತು. ೧೯೫೬ರಲ್ಲಿ ಕೇಂದ್ರಾಡಳಿತ ಪ್ರದೇಶವಾಗಿ, ೧೯೭೨ರಲ್ಲಿ ಪೂರ್ಣ ಪ್ರಮಾಣದ ರಾಜ್ಯವಾಗಿ ಪರಿವರ್ತನೆಗೊಂಡರೂ, ಮಣಿಪುರದಲ್ಲಿ ಪ್ರಕ್ಷುಬ್ಧತೆ ಮುಂದುವರೆಯಿತು. ಆರು ವರ್ಷಗಳ ಕಾಲ, ಕುಕಿಗಳು ಮತ್ತು ನಾಗಾಗಳ ನಡುವೆ ನಡೆದ ಅಂತರ್ಯುದ್ಧದಲ್ಲಿ ಸಾಕಷ್ಟು ಪ್ರಾಣಹಾನಿ ಸಂಭವಿಸಿತು. ಇಂದಿಗೂ ಭೂಗತ ಗುಂಪುಗಳಿಂದ ಅಧಿಕಾರಿಗಳ, ಶ್ರೀಮಂತರ, ಹೊರಗಿನಿಂದ ಬಂದವರ ಅಪಹರಣ, ಹಣಕ್ಕಾಗಿ ಬ್ಲಾಕ್‌ಮೇಲ್ ನಡೆಯುತ್ತಲೇ ಇರುತ್ತದೆ. ಸಂಜೆ ಆರುಗಂಟೆಯ ನಂತರ, ಫ್ರೀಯಾಗಿ ಹೊರ ಬರದಿರಲು, ಹೊರಗಿನವರಿಗೆ ಸೂಚಿಸಲಾಗುತ್ತದೆ.

ಅತ್ಯಧಿಕ ಇಳುವರಿಯ ಭತ್ತದ ಬೆಳೆ ಮಣಿಪುರದ ಹೆಗ್ಗಳಿಕೆ. ವರ್ಷ ಒಂದಕ್ಕೆ ಈ ಪುಟ್ಟ ರಾಜ್ಯ ೫ ಲಕ್ಷ ಟನ್‌ಗಳಿಗೂ ಅಧಿಕ ಅಕ್ಕಿಯನ್ನು ಉತ್ಪಾದಿಸುತ್ತದೆ. ಕೃಷಿ ಜಿಟ್ಟರೆ, ಕೈಮಗ್ಗವು ದೊಡ್ಡರೀತಿಯಲ್ಲಿ ಬೆಳೆದಿದೆ. ೩ ಲಕ್ಷ ಜನರಿಗೆ ಉದ್ಯೋಗವನ್ನು ಕಲ್ಪಿಸಿದೆ. ಇಂಫಾಲದ ಪ್ರಮುಖ ಆಕರ್ಷಣೆ ಗೋವಿಂದಜೀ ದೇವಾಲಯ ಹಾಗೂ ಮಹಿಳಾ ಮಾರ್ಕೆಟ್ ! ಒಂದು ಅರಮನೆಯಂತೆ ಕಾಣುವ ಗೋವಿಂದಜೀ ದೇವಾಲಯದಲ್ಲಿ ಮೂರು ಸಾವಿರ ಜನ ಕೂಡಬಹುದಾದಷ್ಟು ಭಾವಣಿ ಇರುವ ಅಂಗಳವಿದೆ. ನಾವು ಹೋದಾಗ, ಸಂಜೆಯ ಮಹಾಪೂಜೆ ನಡೆಯುತ್ತಿತ್ತು. ಗೋವಿಂದ-ಕೃಷ್ಣ ಮಣಿಪುರಿಗಳ ಆರಾಧ್ಯ ದೈವ. ಸಂಗೀತ, ನೃತ್ಯಗಳಿಂದ ಅವನನ್ನು ಆರಾಧಿಸುತ್ತಾರೆ. ಗೋವಿಂದಜೀ ದೇವಸ್ಥಾನದ ಆಸುಪಾಸಿನಲ್ಲಿ ಆಂಜನೇಯ ಹಾಗೂ ಕಾಳಿ ದೇವಾಲಯಗಳಿವೆ.

ಮಹಿಳಾ ವ್ಯಾಪಾರಿಗಳೇ ಇರುವ ಬೃಹತ್ ಮಾರ್ಕೆಟ್ ಇಂಫಾಲದ ಆಕರ್ಷಣೆ. ಹಣ್ಣು, ತರಕಾರಿ, ಆಹಾರ ವಸ್ತುಗಳನ್ನು ಗುಡ್ಡೆ ಹಾಕಿಕೊಂಡು, ಗಿರಾಕಿಗಳೊಂದಿಗೆ ಚೌಕಾಸಿ ಮಾಡುತ್ತಾ, ತಮ್ಮ ಕುಟುಂಬಗಳಿಗೆ ಆಧಾರವಾಗಿರುವ, ದುಡಿಮೆಯೇ ಮೈವೆತ್ತಂತೆ ಇರುವ ಈ ಮಹಿಳೆಯರು ಅಭಿನಂದನೆಗೆ ಅರ್ಹರು.



ಮಣಿಪುರಿ ಬೊಂಬೆಗಳು

೨೦೦೧ರ ಏಷಿಯನ್ ಗೇಮ್ಸ್ ನಡೆದ ಕ್ರೀಡಾಂಗಣಗಳು, ಕ್ರೀಡಾಗ್ರಾಮಕ್ಕೂ ಭೇಟಿ ನೀಡಿದೆವು. ಗಿರಿಶೃಂಗಗಳ ಹಿನ್ನೆಲೆಯಲ್ಲಿ ಇವು ನೋಡುಗರ ಮನಸ್ಸನ್ನು ಸೆಳೆಯುತ್ತವೆ. ಫುಟ್ ಬಾಲ್, ಸೈಕ್ಲಿಂಗ್, ಸ್ಥಳೀಯ ಯುದ್ಧ ಕಲೆಗಳಲ್ಲಿ ಮಣಿಪುರಿ ಸ್ಪರ್ಧಾಳುಗಳು ಮಿಂಚುತ್ತಾರೆ.

**ಜಿಂಕ್ ಶೀಟುಗಳೇ ಸೂರು, ಬಿದಿರೇ ಗೋಡೆ, ಬೇಲಿ !**

ಅಸ್ಸಾಂ, ಅರುಣಾಚಲ ಪ್ರದೇಶ, ಮಣಿಪುರ, ಮಿಜೋರಾಂ ಎಲ್ಲ ರಾಜ್ಯಗಳಲ್ಲಿ ಮನೆಗಳ, ಆಫೀಸ್‌ಗಳ, ಯಾವುದೇ ಕಟ್ಟಡದ ಸೂರು 'ಜಿಂಕ್ ಶೀಟ್ !' ತಾರಸಿ, ಛಾವಣಿ ಅಪರೂಪ. ಹಾಗೇ ಕಾಡಿನಲ್ಲಿ ಯಥೇಚ್ಛವಾಗಿ ಸಿಗುವ ಬಿದಿರೇ ಮನೆಗಳ ಗೋಡೆ, ಕಿರು ಛಾವಣಿ ಹಾಗೂ ಬೇಲಿ! ಕೆಳ ಮಧ್ಯಮ, ಮಧ್ಯಮ ಹಾಗೂ ಬಡವರ ಮನೆ ಎಂದರೆ ಅಡುಗೆ ಮನೆ, ಒಂದು ಕೊಠಡಿ, ಒಂದು ಹಜಾರ ಅಷ್ಟೇ. ವಿಸ್ತಾರ ಸ್ವಲ್ಪ ಚಿಕ್ಕದು, ದೊಡ್ಡದು ಎನ್ನುವುದನ್ನು ಬಿಟ್ಟರೆ ವ್ಯತ್ಯಾಸವಿಲ್ಲ! ಸರಳ ಜೀವನ. ಬಿದಿರಿನ ಸ್ಟೂಲು ಅಥವಾ ಮಂಚವೇ ಪೀಠೋಪಕರಣ. ಅನ್ನ, ತರಕಾರಿ, ಮೀನು ಮಾಂಸಗಳೇ ಭಕ್ಷ್ಯ ಭೋಜ್ಯಗಳು.

**ಮಿಜೋರಾಮ್**

ಹಸಿರನ್ನು ಮೈತುಂಬಾ ಹೊದ್ದುಕೊಂಡ ಬೆಟ್ಟ-ಗುಡ್ಡಗಳ ಸಾಲು ಸಾಲು, ಕಣಿವೆ ಕಂದರಗಳು, ಜಲಪಾತಗಳು ತುಂಬಿದ ಸುಂದರ ರಾಜ್ಯ ಮಿಜೋರಾಂ. ಕರ್ನಾಟಕದ ಜನ ಪ್ರೀತಿಸುವ ಪೊಲೀಸ್ ಅಧಿಕಾರಿ ಸಾಂಗ್ಲಿಯಾನಾ ಅವರು ಹುಟ್ಟಿದ ನಾಡು. ಶೇ. ೯೫ಕ್ಕಿಂತ ಹೆಚ್ಚಿನ ಜನ ಅಕ್ಷರಸ್ಥರು. ೯೮ರಷ್ಟು ಜನ ಕ್ರೈಸ್ತರಿರುವ ರಾಜ್ಯ. ಜನಸಂದಣಿ ಪ್ರತಿ ಚದರ ಕಿ.ಮೀ.ಗೆ ಕೇವಲ ೩೩ ! ಇವರೆಲ್ಲ ಮಂಗೋಲಿಯನ್ ಬುಡಕಟ್ಟಿಗೆ ಸೇರಿದವರು. ೧೮೯೧ರಲ್ಲಿ ಬ್ರಿಟಿಷರು ಈ ಭೂಭಾಗವನ್ನು ಆಕ್ರಮಿಸಿಕೊಂಡು ಅದಕ್ಕೆ ಲುಶಾಯಿ ಜಿಲ್ಲೆ ಎಂದು ಹೆಸರಿತ್ತರು. ನಮಗೆ ಸ್ವಾತಂತ್ರ್ಯ ಬಂದಾಗ, ಇದು ವಿಶಾಲ ಅಸ್ಸಾಂ ರಾಜ್ಯದ ಒಂದು ಜಿಲ್ಲೆಯಾಯಿತು. ೧೯೫೪ರಲ್ಲಿ ಮಿಜೋ ಜಿಲ್ಲೆ ಎಂದು ನಾಮಕರಣವಾಯಿತು. ಸ್ವಾಯತ್ತತೆಗಾಗಿ ಹೋರಾಟ ಮಾಡುತ್ತಿದ್ದ ಮಿಜೋಗಳಿಗೂ, ಭಾರತ ಸರ್ಕಾರಕ್ಕೂ ಕೊನೆಗೆ ಒಪ್ಪಂದವಾಗಿ (೧೯೮೬), ೨೦.೨.೧೯೮೭ರಲ್ಲಿ ಮಿಜೋ ರಾಜ್ಯ ಅಸ್ತಿತ್ವಕ್ಕೆ ಬಂದಿತು. ಮಿಜೋ ಭಾಷೆಗೆ ಲಿಪಿ ಇಲ್ಲ. ರೋಮನ್ ಅಕ್ಷರಗಳನ್ನೇ ಸ್ವಲ್ಪ ಬದಲಾವಣೆ ಮಾಡಿಕೊಂಡು, ಬಳಸಲಾಗುತ್ತಿದೆ. ಸರ್ಕಾರಿ ಶಾಲೆಗಳಲ್ಲಿ ಐದನೇ ತರಗತಿವರೆಗೆ ಮಿಜೋ ಭಾಷೆಯಲ್ಲಿ ಪಾಠ ಮಾಡಿದರೆ ಖಾಸಗಿ ಶಾಲೆಗಳಲ್ಲಿ ಇಂಗ್ಲಿಷಿನಲ್ಲೇ ಪಾಠ ನಡೆಯುತ್ತದೆ. ಈಗ ಮಿಜೋ ರಾಜ್ಯದಲ್ಲಿ ಎಂಟು ಜಿಲ್ಲೆಗಳಿವೆ. ರಾಜಧಾನಿ ಐಜ್‌ವಾಲ್ ಜಿಲ್ಲೆಯನ್ನೇ ಐದು ಜಿಲ್ಲೆಗಳಾಗಿ ವಿಂಗಡಿಸಿದ್ದಾರೆ. ಸಂಚಾರ ಬಹಳ ಕಷ್ಟ. ಐವತ್ತು, ನೂರು ಕಿ. ಮೀ. ಕ್ರಮಿಸಲು ಹಲವಾರು ಗಂಟೆಗಳು ಬೇಕಾಗುತ್ತವೆ. ಉದಾಹರಣೆಗೆ ಐಜ್‌ವಾಲ್ ವಿಮಾನ ನಿಲ್ದಾಣವಿರುವುದು, ಐಜ್‌ವಾಲ್‌ನಿಂದ ೩೫ ಕಿಲೋಮೀಟರ್ ದೂರದಲ್ಲಿರುವ ಲೆಂಗ್‌ಪುಯಿ ಎಂಬ ಹಳ್ಳಿಯಲ್ಲಿ. ಪ್ರಯಾಣಕ್ಕೆ ತಗಲುವ ಅವಧಿ ಒಂದೂವರೆ ಗಂಟೆಗೂ ಹೆಚ್ಚು!

**ರಾಜ್ಯ ಪ್ರವೇಶಿಸಲು ವಿಶೇಷ ಅನುಮತಿ !**

ಅರುಣಾಚಲ ಪ್ರದೇಶ, ಮಿಜೋರಾಮನ್ನು ಇತರ ರಾಜ್ಯಗಳವರು ಪ್ರವೇಶಿಸ ಬೇಕಾದರೆ, ಮೊದಲೇ ಈ ಸರ್ಕಾರಗಳಿಂದ ಅನುಮತಿ ಪಡೆದುಕೊಳ್ಳಬೇಕು. ಏರ್ ಪೋರ್ಟಿನಲ್ಲಿ ೧೫೦ ರೂಪಾಯಿ ಕೊಟ್ಟು ಮೂರು, ಐದು ದಿನಗಳಿರಲು ಪರವಾನಗಿ ಪಡೆಯಬೇಕು. ಇತರ ರಾಜ್ಯದವರು ಇಲ್ಲಿ ಭೂಮಿ, ಆಸ್ತಿಪಾಸ್ತಿ ಕೊಂಡುಕೊಳ್ಳುವಂತಿಲ್ಲ. 'ನಮ್ಮ ರಾಜ್ಯ ನಮ್ಮ ಭೂಮಿ ನಮ್ಮದು. ಬೇರೆಯವರಿಗಲ್ಲ' ಎಂಬುದು ಇಲ್ಲಿನ ಮಣ್ಣಿನ ಮಕ್ಕಳ ದೃಢ ನಿರ್ಧಾರ. ಭಾರತೀಯರಾದರೂ ನಾವು ಇಲ್ಲಿನವರ ದೃಷ್ಟಿಯಲ್ಲಿ ಪರಕೀಯರು !

**ಸಸ್ಯಾಹಾರಿಗಳಿಗೆ ಇಲ್ಲಿ ಮುಜುಗರ ತಪ್ಪಿದ್ದಲ್ಲ**

ಈ ನಾಲ್ಕು ರಾಜ್ಯಗಳಲ್ಲಿನ ಜನರು ಮಾಂಸಾಹಾರಿಗಳು. ಶುದ್ಧ ಸಸ್ಯಾಹಾರಿಗಳು ಇಲ್ಲವೇ ಇಲ್ಲ ಎಂದರೂ ನಡೆದೀತು. ಬ್ರಾಹ್ಮಣರೂ ಮೀನು ತಿನ್ನುತ್ತಾರೆ. ಮೀನು ಅವರಿಗೆ ಮಾಂಸಾಹಾರವೆಂದು ಅನಿಸುವುದೇ ಇಲ್ಲ. ಹೀಗಾಗಿ ನನ್ನಂತಹ ಶುದ್ಧ ಸಸ್ಯಾಹಾರಿಗಳು ಹೋಟೆಲ್, ಭೋಜನಾಲಯಗಳಲ್ಲಿ ವಿಶೇಷ ಎಚ್ಚರಿಕೆಯಿಂದ, ಸಸ್ಯಾಹಾರವನ್ನು ಕೇಳಿ ಪಡೆಯಬೇಕು. ಪಲ್ಯದಲ್ಲೋ, ಸಾರಿನಲ್ಲೋ ಮಾಂಸದ ತುಣುಕಿದ್ದರೆ ಸಹಿಸಿಕೊಳ್ಳಬೇಕು !

ಹೀಗೆ ಈ ನಾಲ್ಕೂ ರಾಜ್ಯಗಳ ಪ್ರವಾಸ, ನನಗೆ ಕೆಲವಾರು ವಿಶಿಷ್ಟ ಅನುಭವಗಳನ್ನು ಕೊಟ್ಟಿತು. ಈ ರಾಜ್ಯಗಳ ಪ್ರಕೃತಿ-ಜನ ನನ್ನ ಮನಸ್ಸಿನಲ್ಲಿ ಹಸಿರಾಗಿಯೇ ಉಳಿಯುತ್ತಾರೆ.

**ಡಾ|| ಸಿ. ಆರ್. ಚಂದ್ರಶೇಖರ್**
ನಂ. ೩೮, ೨ನೇ ಕ್ರಾಸ್, ಸಿಂಡಿಕೇಟ್ ಬ್ಯಾಂಕ್ ಕಾಲೋನಿ
ಅರೆಕೆರೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - ೫೬೦ ೦೭೬

**೪೦ನೇ ಪುಟದಿಂದ**

ಅವನತಿ ಚರ್ಚಾಸ್ಪದ ವಿಷಯವಾಗಿಯೇ ಉಳಿದಿದೆ. ಭೌಗೋಳಿಕ ಸನ್ನಿವೇಶ, ಕೃಷಿ ಕ್ಷೇತ್ರದಲ್ಲಿನ ಹೆಚ್ಚುವರಿ ಉತ್ಪಾದನೆ, ನಗರವಾಸಿಗಳ ಪರಸ್ಪರ ಸಾಮಾಜಿಕ ಹಾಗೂ ಆರ್ಥಿಕ ಸಂಬಂಧಗಳು, ವ್ಯವಸ್ಥಿತ ರಾಜಕೀಯ ರಚನೆ ಮುಂತಾದವು ನಗರೀಕರಣ ಪ್ರಕ್ರಿಯೆಯಲ್ಲಿ ನಿರ್ಧಾರಕ ಅಂಶಗಳು. ಪ್ರಾಚೀನ ನಗರ ಕೇಂದ್ರಗಳಿಗೂ ಇವು ಅನ್ವಯಿಸುತ್ತವೆ. ನಗರ ಕೇಂದ್ರಗಳು ಎಂದಾಗ ಎಲ್ಲವೂ ಒಂದೇ ಸ್ವರೂಪದವು ಎಂದಲ್ಲ. ಅವುಗಳಲ್ಲಿ ರಾಜಕೀಯ ಕೇಂದ್ರಗಳು, ವ್ಯಾಪಾರ ಕೇಂದ್ರಗಳು, ಧಾರ್ಮಿಕ ಕೇಂದ್ರಗಳು, ಶೈಕ್ಷಣಿಕ ಕೇಂದ್ರಗಳು, ಪ್ರವಾಸಿ ಕೇಂದ್ರಗಳು ಎನ್ನುವ ವಿವಿಧ ಬಗೆಗಳಿವೆ. ಈ ಎಲ್ಲ ನಗರ ಕೇಂದ್ರಗಳು ಒಂದೇ ರೀತಿಯ ಲಕ್ಷಣಗಳನ್ನು ಹೊಂದಿರಲು ಸಾಧ್ಯವಿಲ್ಲ. ರಾಜಕೀಯ ಕೇಂದ್ರಗಳು ಹೆಚ್ಚಾಗಿ ಪ್ರಭುತ್ವದ ಚಟುವಟಿಕೆಗಳಿಗೆ ಸೀಮಿತವಾಗಿದ್ದರೆ, ವ್ಯಾಪಾರಿ ಕೇಂದ್ರಗಳು ವ್ಯಾಪಾರ - ವಾಣಿಜ್ಯ ನಡೆಯುವ ವ್ಯಾಪಾರಸ್ಥರ ಹಾಗೂ ವರ್ತಕ ಸಂಘಗಳ ಚಟುವಟಿಕೆಗಳ ಕೇಂದ್ರಗಳಾಗಿದ್ದವು. ಆದರೆ ಚೈಲ್ಡ್ ಅಭಿಪ್ರಾಯಪಟ್ಟಂತೆ ಕೃಷಿ ಕ್ಷೇತ್ರದಲ್ಲಿನ ಹೆಚ್ಚುವರಿ ಉತ್ಪಾದನೆ ಎಲ್ಲ ಸ್ವರೂಪದ ನಗರ ಕೇಂದ್ರಗಳಿಗೂ ಜೀವನಾಡಿಯಾಗಿತ್ತು. ಇನ್ನುಳಿದ ಅಂಶಗಳು ಆಯಾ ನಗರ ಕೇಂದ್ರದ ಕಾರ್ಯ ಸ್ವರೂಪಕ್ಕೆ ಅನುಗುಣವಾಗಿ ಕಾಣಿಸಿಕೊಂಡವು.

ಚೈಲ್ಡ್ ಪ್ರತಿಪಾದಿಸಿದ ನಗರ ಕ್ರಾಂತಿ ಪರಿಕಲ್ಪನೆಯನ್ನು ಪ್ರಪಂಚದ ಯಾವುದೋ ಒಂದು ದೇಶದ ನಗರೀಕರಣಕ್ಕೆ ಅಥವಾ ಯಾವುದೋ ಒಂದು ಸ್ವರೂಪದ ನಗರ ಕೇಂದ್ರಕ್ಕಷ್ಟೇ ಹೋಲಿಸಿ ತೀರ್ಮಾನಗಳನ್ನು ತೆಗೆದುಕೊಳ್ಳುವುದು ಸರಿಯಾದ ವಿಧಾನವಾಗಿ ಕಂಡುಬರುವುದಿಲ್ಲ. ಚೈಲ್ಡ್ ಸೂಚಿಸಿರುವುದು ಪುರಾತತ್ವದ ಹಿನ್ನೆಲೆಯಿಂದ ಪ್ರಾಚೀನ ಅದರಲ್ಲೂ ಆರಂಭಿಕ ಪಟ್ಟಣಗಳ ಕೆಲವೊಂದು ಪ್ರಮುಖ ಲಕ್ಷಣಗಳನ್ನಷ್ಟೇ. ಚೈಲ್ಡ್ ಅವರ ಹತ್ತು ಅಂಶಗಳು ನಗರೀಕರಣ ಪ್ರಕ್ರಿಯೆಯನ್ನು ಎಷ್ಟರಮಟ್ಟಿಗೆ ಸೂಚಿಸುತ್ತವೆ ಎನ್ನುವುದಕ್ಕಿಂತ ನಗರ ಅಧ್ಯಯನ ಕ್ಷೇತ್ರದಲ್ಲಿ ಎಷ್ಟರಮಟ್ಟಿಗೆ ಪ್ರಭಾವವನ್ನು ಬೀರಿವೆ ಎನ್ನುವುದು ಹೆಚ್ಚು ಪ್ರಸ್ತುತವೆನಿಸುತ್ತದೆ. ನಗರಗಳು ಪ್ರಾಚೀನ ಕಾಲದಿಂದಲೇ ಅಸ್ತಿತ್ವದಲ್ಲಿವೆಯಾದರೂ ಅವುಗಳ ಬಗ್ಗೆ ಅಧ್ಯಯನ ನಡೆಸುವುದು ಇತ್ತೀಚೆಗೆ ಬೆಳೆದು ಬಂದಿರುವ ಶೈಕ್ಷಣಿಕ ಶಿಸ್ತು. ನಗರ ಅಧ್ಯಯನ ಕ್ರಮವನ್ನು ರೂಪಿಸುವಲ್ಲಿ ಹಾಗೂ ಅದಕ್ಕೊಂದು ಸೈದ್ಧಾಂತಿಕ ಚೌಕಟ್ಟನ್ನು ನೀಡುವಲ್ಲಿ ಚೈಲ್ಡ್ ಅವರ ನಗರ ಕ್ರಾಂತಿ ಪರಿಕಲ್ಪನೆ ಮಹತ್ತರ ಪಾತ್ರವನ್ನು ವಹಿಸಿದ್ದಂತೂ ನಿಜ.

**ಮೋಹನ್‌ಕೃಷ್ಣರೈ, ಕೆ.**
ಉಪನ್ಯಾಸಕ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಜನಸಾಮಾನ್ಯರು ಆಂದೋಲನಗಳಲ್ಲಿ ಭಾಗವಹಿಸಲು ಗೇಯ ಪದಗಳು ಸ್ಫೂರ್ತಿ ನೀಡಬಲ್ಲವು. ಅವು ಕೇಳುಗರಿಗೆ ಮೋಡಿ ಮಾಡಿ ಅವರನ್ನು ಕ್ರಿಯಾಶೀಲರನ್ನಾಗಿಸಬಲ್ಲವು.

ಸ್ವಾತಂತ್ರ್ಯ ಪೂರ್ವದ ದಿನಗಳಲ್ಲಿ ಮತ್ತು ಸ್ವಾತಂತ್ರ್ಯ ಪಡೆದ ಬಳಿಕ ಸಾರ್ವಜನಿಕ ಸಭೆಗಳಲ್ಲಿ ಸಭೆ ಪ್ರಾರಂಭವಾಗುವ ಮೊದಲು ಜನರ ಗಮನ ಸೆಳೆಯಲಿಕ್ಕಾಗಿ ಗೇಯಪದಗಳನ್ನು ಹಾಡುತ್ತಿದ್ದೆವು.

ಕಮ್ಯುನಿಸ್ಟ್ ಪಕ್ಷದ ಅನೇಕ ಸಭೆಗಳಲ್ಲಿ ಗೇಯಪದಗಳನ್ನು ಹಾಡುವ ಹೊಣೆಗಾರಿಕೆಯನ್ನು ನಾನೇ ನಿರ್ವಹಿಸುತ್ತಿದ್ದೆ. ಆಗ ಈಗಿನಂತೆ ಧ್ವನಿವರ್ಧಕಗಳು ಇರಲಿಲ್ಲ. ಹಾಗಾಗಿ ಧ್ವನಿಯೇರಿಸಿ ಹಾಡಬೇಕಾಗುತ್ತಿತ್ತು.

ಸ್ವಾತಂತ್ರ್ಯಪೂರ್ವದಲ್ಲಿ ಕಾರ್ಮಿಕ ಸಂಘಟನೆಗಳ ಪ್ರಾರಂಭದ ದಿನಗಳಲ್ಲಿ ನಾವು ಹಾಡುತ್ತಿದ್ದ ಗೇಯಪದಗಳು ಇಂದಿಗೂ ರೋಮಾಂಚನ ಹುಟ್ಟಿಸುತ್ತವೆ :

*ಬನ್ನಿ ಬನ್ನಿ ಬನ್ನಿರೆಲ್ಲ ಸಂಘವನ್ನು ಸೇರುವ ।*
*ನಮ್ಮ ನಮ್ಮ ಹಕ್ಕಿಗಾಗಿ ಒಂದುಗೂಡಿ ಸಾಗುವ ॥*

ಕಾಸರಗೋಡಿನ ಕೈಯ್ಯೂರು ಗ್ರಾಮದ ಹುತಾತ್ಮರನ್ನು ಗಲ್ಲಿಗೇರಿಸಿದ ಸಮಯದಲ್ಲಿ ರೋಷದಿಂದ ನಮ್ಮ ರಕ್ತ ಕುದಿಯುತ್ತಿತ್ತು. ''ಕಯ್ಯೂರ ಧೀರ ಸೋದರರಂತಿಮ'' ಎಂಬ ಹಾಡಿನ ಮೂಲಕ ನಾವು ಸಭೆಗಳಲ್ಲಿ ಅವರಿಗೆ ನಮನ ಸಲ್ಲಿಸುತ್ತಿದ್ದೆವು.

# ಜನಪರ ಆಂದೋಲನಗಳಲ್ಲಿ ಗೇಯ ಪದಗಳು

ಬಂಗಾಲದ ಭೀಕರ ಬರಗಾಲಕ್ಕೆ ಸಾವಿರಾರು ಜನರು ಬಲಿಯಾದರು. ಬಂಗಾಲದ ಜನತೆಗೆ ನೆರವು ನೀಡಲಿಕ್ಕಾಗಿ ಈ ಹಾಡಿನ ಮೂಲಕ ಜನರಿಗೆ ಕರೆ ನೀಡುತ್ತಿದ್ದೆವು :

*ಬಂಗಾಲ ಬಂಗಾಲ ಬಂದಿದೆ ಬರಗಾಲ*
*ತಂದಿದೆ ಬರಗಾಲ ಕಂಗಾಲ ॥*

ಕುಮಾರ ವೆಂಕಣ್ಣ ಬರೆದ ಈ ಹಾಡು ಎಂಥ ಕಲ್ಲು ಹೃದಯದವರನ್ನೂ ಕರಗಿಸುವಂತಿತ್ತು.

ಕಾರ್ಮಿಕರಿಗೆ ಬೋನಸ್ ನೀಡಬೇಕೆಂದು ಕಮ್ಯುನಿಸ್ಟ್ ಪಕ್ಷವು ನಡೆಸಿದ ಹೋರಾಟದಲ್ಲಿ,

*ಓಡುದ ಬೀಡಿದ ಮಗ್ಗದ ದನಿಕುಳೆ*
*ಮರ್ಯಾದೆಡೆಂಕ್ಳೆನ ಬೋನಸ್ ಕೊರುಲೆ ॥*

ಎಂಬ ತುಳು ಭಾಷೆಯ ಹಾಡು ನಮ್ಮ ಸಾಮೂಹಿಕ ಆಗ್ರಹದ ಧ್ವನಿಯಾಗಿತ್ತು.

*ನನ ಲಡಾಯಿ ನನ ಲಡಾಯಿ ನನ ಲಡಾಯಿ ಎಂಕ್ಳೆನ*
*ಇಲ್ಲು ಕುಂಟು ವಸತಿಗಾದು ನನ ಲಡಾಯಿ ಎಂಕ್ಳೆನ ॥*

ಎಂಬ ತುಳು ಭಾಷೆಯ ಇನ್ನೊಂದು ಹಾಡು ತೀವ್ರ ಹೋರಾಟಕ್ಕೆ ಕಾರ್ಮಿಕರನ್ನು ಸಜ್ಜುಗೊಳಿಸುತ್ತಿತ್ತು.

ಮೈಸೂರಿನಲ್ಲಿ ಜವಾಬ್ದಾರಿ ಸರಕಾರಕ್ಕಾಗಿ ಹೋರಾಟ ನಡೆದಾಗ, ಅಲ್ಲಿನ ಹೋರಾಟಗಾರರ ಬೆಂಬಲಕ್ಕಾಗಿ ಮಂಗಳೂರಿನಿಂದ ಜಾಥಾ ಹೊರಟಾಗ ''ಮೈಸೂರ್ ಚಲೊ ಚಲೋ ಮೆರೆಯಲಿ ಘೋಷ'' ಎಂಬ ಎಸ್. ಎನ್. ಹೊಳ್ಳರ ಗೇಯಪದದ ಘೋಷ ಮೊಳಗುತ್ತಿತ್ತು.

ಬಂದರ (ಪೋರ್ಟ್)ದ ಕೆಲಸಗಾರರು ಸಂಘಟಿತರಾಗಿ ಹೋರಾಟಕ್ಕೆ ಇಳಿದಾಗ, ಅವರ ಮುಷ್ಕರಕ್ಕೆ ಬೆಂಬಲವಾಗಿ ಜರುಗಿದ ಸಾರ್ವಜನಿಕ ಸಭೆಗಳಲ್ಲಿ ಕಾಂದಿಲ್ಕಾರ್ ವೆಂಕಟರಾವ್ ಬರೆದ,

*ದಂ ದಂ ದಂ ದಂ ದಂ ದಂ ದಂ ದಂ*
*ದಮ್ಮು ಕಟ್ಟಿತ್ತ ತಮ್ಮ ದಮ್ಮು ಕಟ್ಟಿತ್ತ ॥*

ಎಂಬ ಗೇಯ ಗೀತೆಯ ರಾಗಬದ್ಧ ಸೊಲ್ಲು ಮೈನವಿರೇಳಿಸುತ್ತಿತ್ತು.

ಕಮ್ಯುನಿಸ್ಟ್ ಪಕ್ಷದಿಂದ ರೈತರ ಸಂಘಟನೆ ಆರಂಭವಾದಾಗ, ಹಳ್ಳಿ ಹಳ್ಳಿಗಳಲ್ಲಿ ರೈತ ಹೋರಾಟದ ಕಹಳೆ ಮೊಳಗಿಸಿದ ಎಸ್. ಎನ್. ಹೊಳ್ಳರ ಜನಪ್ರಿಯ ಗೇಯ ಪದ ಇಂದಿಗೂ ಪ್ರಸ್ತುತ :

*ಹಂಡೆ ಹಂಡೆ ಮೈಬೆವರನು ಸುರಿಸಿ*
*ಖಂಡುಗ ಖಂಡುಗ ಧಾನ್ಯವ ಬೆಳೆಸಿ*
*ಹೊಲದ ಮಣ್ಣಿನೊಲು ಮೈಯಗೂಡಿಸುವ*
*ಒಲವಿಂ ಜನತೆಯ ತಣಿಯುಣ ಬಡಿಸುವ*
*ಬೋರೇಗೌಡಗೆ ಎಂಟೌಂಸು ನಾರು ಬೇರು ಎಲೆ ಪುಡಿಗೆಣಸು ॥*
*ಲಾವಣಿ ತೆತ್ತು ಲೆವಿಯನ್ನಿತ್ತು*
*ಕಾವು ಕೊಟ್ಟು ಇಟ್ಟಟ್ಟದಿ ಬಿತ್ತು*
*ಕಣಜವ ಕಿತ್ತಿನ್ನಿಲ್ಲೆಂದತ್ತು*
*ಒಣಗುವ ಬಾಯಿಗೆ ಇಲ್ಲವೆ ತುತ್ತು*
*ಬೋರೇಗೌಡಗೆ ಕಂಟ್ರೋಲು ಯಾರು ಕೇಳ್ವರುಂಟೀ ಗೋಳು ॥*
*ದುಡಿಯಲರಿತವನು ತಿನ್ನಲರಿಯನಾ*
*ಬಡವನೆ ರೈತನು ನಾಡಿನ ಹಿರಿಯ*
*ದುಡಿವನೆ ಒಡೆಯನೆನ್ನುತ ಸಾರಿ*
*ಒಡನೆಯೇ ರೈತನು ಸಂಘವ ಸೇರಿ*
*ಬೋರೇಗೌಡನೆ ಹೊಲದೊಡೆಯ ಬೇರಿನ್ನಾವನು ನೆಲದೊಡೆಯ ॥*

ಮೊದಲನೆಯ ಮಹಾಚುನಾವಣೆಯ ಸಂದರ್ಭದಲ್ಲಿ ಕಮ್ಯುನಿಸ್ಟ್ ಪಕ್ಷದ ಪ್ರಚಾರದ ಗೇಯಪದವೊಂದು ಬಹಳ ಕಾಲ ಜನಸಾಮಾನ್ಯರ ನಾಲಿಗೆಯಲ್ಲಿ ಕುಣಿದಾಡುತ್ತಿತ್ತು.

*ನಮ್ಮ ಬಾಗಿಲಿಗೆ ಬರುವವರು ಓಟುಗಳ ಕೇಳುವವರು ನೀವಲ್ಲವೇ ।*
*ನಿಮ್ಮ ಪಾಪಗಳ ಮುಚ್ಚಳಿಕೆ ಬಿಳಿ ಖಾದಿಯನು ತೊಟ್ಟು*
*ಬಾಗಿಲಿಗೆ ಬರುವವರು ನೀವಲ್ಲವೇ ॥*

ಕರ್ಪೂರ ವೆಂಕಟ್ರಾಯರು ರಚಿಸಿದ ಗೇಯಪದ ಇದು. ಅವರ ಅನೇಕ ಹಾಡುಗಳನ್ನು ನಾವು ನಮ್ಮ ಸಭೆಗಳಲ್ಲಿ ಪರಿಣಾಮಕಾರಿಯಾಗಿ ಬಳಸುತ್ತಿದ್ದೆವು.

೧೯೪೨ರ ಚಳವಳಿಯ ಸಂದರ್ಭದಲ್ಲಿ ಬೆಳಗಿನ ಪ್ರಭಾತ್ ಫೇರಿಯಲ್ಲಿ ನಮ್ಮಲ್ಲಿ ದೇಶಪ್ರೇಮದ ಕಿಚ್ಚು ಹೊತ್ತಿಸುತ್ತಿದ್ದ ಗೇಯ ಗೀತೆ :

*ಭಾರತಾಂಬೆ ನಮ್ಮ ಮಾತೆ ಜೀವಕಿಂತ ಮೇಲು*
*ಜೀವಕಿಂತ ಮೇಲು ನಮ್ಮ ಪ್ರಾಣಕಿಂತ ಮೇಲು ॥*

ದಿ॥ ರಾಮರಾಜ ಕಿಣಿಯವರ ಇಂಪಾದ ಸ್ವರದಲ್ಲಿ ಮೂಡಿಬರುತ್ತಿದ್ದ ಆ ಹಾಡು ನೆನೆದರೆ ಈಗಲೂ ಮೈ ಜುಮ್ಮೆನಿಸುತ್ತದೆ.

ಇವಲ್ಲದೆ ಹರೀಂದ್ರನಾಥ ಚಟ್ಟೋಪಾಧ್ಯಾಯ ಮತ್ತು ಮಕ್ದೂಂ ಮೊಹಿಯುದ್ದಿನ್‌ರ ಹಿಂದಿ ಮತ್ತು ಉರ್ದು ಹಾಡುಗಳನ್ನೂ ನಾವು ಸಭೆಗಳಲ್ಲಿ ಹಾಡುತ್ತಿದ್ದೆವು.

ಗೇಯ ಪದಗಳನ್ನು ಹಾಡಿ ಸಭೆ ಸಮಾರಂಭಗಳನ್ನು ಆರಂಭಿಸುವ ವಾಡಿಕೆ ಈಗ ಕಡಿಮೆಯಾಗಿದೆ. ಆಯಾ ಸನ್ನಿವೇಶಕ್ಕೆ ಹೊಂದುವ ಗೇಯಪದಗಳು ರಚನೆಯಾದರೆ ಸಭೆ ಸಮಾರಂಭಗಳಲ್ಲಿ ಅವುಗಳ ಬಳಕೆಯನ್ನು ಪುನರುಜ್ಜೀವನಗೊಳಿಸಬಹುದು. ಜನರನ್ನು ಹುರಿದುಂಬಿಸಲು, ಪ್ರತಿಭಟನೆಗೆ ಅಣಿಗೊಳಿಸಲು ಗೇಯ ಪದಗಳು ಸಮರ್ಥ ಸಾಧನಗಳು.

ಜನಸಾಮಾನ್ಯರ ಮನಮುಟ್ಟುವ ಹಾಗೂ ಮನಗೆಲ್ಲುವ ಗೇಯ ಗೀತೆಗಳನ್ನು ರಚಿಸುವ ಸಮರ್ಥ ಕವಿಗಳು ಬೆಳೆದು ಬರಲಿ ಎಂದು ಹಾರೈಸೋಣ. ಅವುಗಳನ್ನು ಜನಮನ ಸ್ಪಂದಿಸುವಂತೆ ಹಾಡಿ, ಜನಸಮುದಾಯದಲ್ಲಿ ಸ್ಫೂರ್ತಿಯ ಚಿಲುಮೆ ಚಿಮ್ಮಿಸುವ ಹಾಡುಗಾರರೂ ಹೆಚ್ಚಲಿ ಎಂದು ಹಾರೈಸೋಣ.

ಎ. ಶಿವಶಂಕರ ರಾವ್
ಕೃಷ್ಣ ಫಾರ್ಮ್, ಅಡ್ದೂರು, ವಯಾ ಗುರುಪುರ, ಮಂಗಳೂರು - ೫೭೪ ೧೪೫

# ಪಂಚಾಚಾರ್ಯ ಪ್ರಣೀತ ಲಿಂಗಾಯತ ಧರ್ಮ

ಜುಲೈ ಸಂಚಿಕೆಯಲ್ಲಿ ಈ ವಿಷಯವನ್ನು ಕುರಿತಂತೆ ಒಂದು ಲೇಖನ ಪ್ರಕಟವಾಗಿತ್ತು. ಬೇರೊಂದು ಅಭಿಪ್ರಾಯವನ್ನು ನೀಡಿರುವವರು ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು.

ಡಾ|| ಎಂ. ಶಿವಕುಮಾರ ಸ್ವಾಮಿ

ಇಂದಿನ ವೈಜ್ಞಾನಿಕ ಯುಗದಲ್ಲಿ ಲಕ್ಷ ದೀಪೋತ್ಸವ, ಕುಂಭಾಭಿಷೇಕ, ಸಹಸ್ರ ಬಿಲ್ವಾರ್ಚನೆ, ಯಜ್ಞ ಯಾಗಾದಿಗಳು ಮುಂತಾದವನ್ನು ಅಂಧ ಆಚರಣೆಗಳೆಂದು ವಿಶ್ವಾರಾಧ್ಯರು ಕರೆದಿದ್ದಾರೆ. ಭಕ್ತರು ಒಂದೆಡೆ ಸೇರಬೇಕು, ಅನುಭವಗಳನ್ನು ವಿನಿಮಯ ಮಾಡಿಕೊಳ್ಳಬೇಕು ಎಂಬ ಸಂಘಟನಾತ್ಮಕ ಅಂಶ ಇದರಲ್ಲಿ ಅಡಗಿದೆ. ಜಾತ್ರೆ, ರಥೋತ್ಸವ, ತೀರ್ಥಯಾತ್ರೆ, ತೀರ್ಥಸ್ನಾನ ಮುಂತಾದವುಗಳು ಜಾತಿ - ಮತ - ಪಂಥ ಭೇದವಿಲ್ಲದೆ ಆಚರಿಸಲ್ಪಡುವ ವಿಧಿಗಳು. ಇವು ವೀರಶೈವರಿಗೂ (ಲಿಂಗಾಯತರಿಗೂ) ಇವೆ. ವೀರಶೈವರಿಗೆ ಇಷ್ಟಲಿಂಗ ಪೂಜೆಯು ಮುಖ್ಯ, ನಿತ್ಯ ಕರ್ತವ್ಯ, ಆದ್ಯ ಕರ್ತವ್ಯ. ಇಷ್ಟಲಿಂಗ ಪೂಜೆ ಮಾಡಿಕೊಳ್ಳದೆ ಬೇರೆ ವಿಧಿಗಳಲ್ಲಿ ತೊಡಗಬಾರದು. ಅವುಗಳಲ್ಲಿ ತೊಡಗಲೇಬಾರದು ಎಂಬ ನಿಯಮವು ಯಾವ ಶಾಸ್ತ್ರದಲ್ಲಿಯೂ ಇಲ್ಲ, ವಚನಗಳಲ್ಲಿಯೂ ಇಲ್ಲ. ಸಿದ್ಧರಾಮಣ್ಣ, ಅಕ್ಕಮಹಾದೇವಿ ಮುಂತಾದವರು ಶ್ರೀಶೈಲ ಕ್ಷೇತ್ರಕ್ಕೆ ಯಾತ್ರೆ ಹೋದದ್ದೇಕೆ ? ಇಷ್ಟಲಿಂಗದಲ್ಲಿಯೇ ಚನ್ನಮಲ್ಲಿಕಾರ್ಜುನ ಅಥವಾ ಕಪಿಲಸಿದ್ಧ ಮಲ್ಲಿಕಾರ್ಜುನನಿದ್ದ ಮೇಲೆ ಅವನನ್ನು ಅರಸುತ್ತಾ ಶ್ರೀಶೈಲಕ್ಕೆ ಹೋದದ್ದೇಕೆ ? ಬಸವಣ್ಣನವರು ಕೂಡಲಸಂಗಮ ಕ್ಷೇತ್ರಕ್ಕೆ ಯಾತ್ರೆ ಹೋದದ್ದೇಕೆ ? ಬಸವಣ್ಣನವರು ಕೂಡಲಸಂಗಮ ಕ್ಷೇತ್ರಕ್ಕೆ ಹೋಗಿ ಲಿಂಗೈಕ್ಯರಾಗಬೇಕಿತ್ತೇಕೆ ? ನೀಲಮ್ಮನವರು ಕೇಳಿದಂತೆ 'ಇಲ್ಲೇನು ಇಷ್ಟಲಿಂಗದಲ್ಲಿ ಸಂಗಮನಾಥನಿರಲಿಲ್ಲವೇ ?'

ಬಸವಾದಿ ಶರಣರು ಕಟ್ಟಿದ ಮಹಾಮನೆಯಲ್ಲಿ ಏನೆಲ್ಲಾ ಇದ್ದರೆ, ಅದಕ್ಕೆ ಪಂಚಾಚಾರ್ಯರನ್ನು ಹೊಣೆಯಾಗಿಸುವುದು ಎಷ್ಟರಮಟ್ಟಿಗೆ ಸಮಂಜಸ ? ಆ ತೊಗಲು ಬಾವಲಿಗಳು, ಕಣ್ಣಪ್ಪಡಿಗಳು ಯಾರು ? ಪಂಚಾಚಾರ್ಯರು ಅಥವಾ ಅವರ ಪರಂಪರೆಯವರಿಗೆ ತಮ್ಮದೇ ಆದ ಸ್ಥಾನ-ಮಾನಗಳಿದ್ದಾಗ ಇನ್ನೊಬ್ಬರ ಮನೆಯೊಳಗೆ ಸೇರಿಕೊಳ್ಳುವ ಪರಿಸ್ಥಿತಿಯೇ ಇರಲಿಲ್ಲ. ಆ ಮನೆಯನ್ನು ಸ್ವಚ್ಛಮಾಡಬೇಕು ಎಂಬ ವಿಷಯದಲ್ಲಿ ಎರಡು ಮಾತಿಲ್ಲ. ಸ್ವಚ್ಛ ಮಾಡಲು ತೊಡಗಿದಾಗ ಯಾರ್‍ಯಾರು ಅದಕ್ಕೆ ಹೊಣೆ ಎಂಬುದು ಗೊತ್ತಾದರೂ ಗೊತ್ತಾಗಬಹುದು.

''ವೀರಶೈವ ಧರ್ಮ ಸಂಸ್ಥಾಪಕರು ರೇಣುಕಾಚಾರ್ಯರು ಎಂದು ಹೇಳುವ ಇವರ ಮೊದಲ ಮಾತೇ ದಾಖಲೆರಹಿತವಾದ, ಕುತ್ಸಿತತನದ ವಿಷಯವಾಗಿದೆ'' ಎಂಬ ಮಾತು ಲೇಖಕರ ಕಣ್ಣಿದ್ದೂ ಕುರುಡುತನಕ್ಕೆ ದ್ಯೋತಕವಾಗಿದೆ. ರೇಣುಕಾಚಾರ್ಯರು ಮಾತ್ರ ವೀರಶೈವ ಧರ್ಮಸಂಸ್ಥಾಪಕರು ಎಂದು ಹೇಳುವುದು ಸರಿಯಲ್ಲ. ರೇಣುಕಾದಿ ಪಂಚಾಚಾರ್ಯರು ವೀರಶೈವ ಮತಸ್ಥಾಪಕರು. ಇದು ಆಧಾರರಹಿತ ವಿಷಯವೂ ಅಲ್ಲ, ಕುತ್ಸಿತ ವಿಷಯವೂ ಅಲ್ಲ. ಇದಕ್ಕೆ ಆಧಾರ ಶೈವಾಗಮಗಳಲ್ಲಿ ದೊರೆಯುತ್ತದೆ. ಸ್ವಾಯಂಭುವಾಗಮದ ನವಮ ಪಟಲದಲ್ಲಿ(೮-೧೨) ಹೀಗೆ ಹೇಳಿದೆ :

ದ್ರಾಕ್ಷಾರಾಮ ಕ್ಷೇತ್ರದಲ್ಲಿ ಶ್ರೀರಾಮನಾಥ (ಭೀಮನಾಥ) ಲಿಂಗದಿಂದ ಏಕೋರಾಮಾರಾಧ್ಯರ ಜನನ ಮತ್ತು ಅವರ ವಾಸಸ್ಥಾನ ಹಿಮಾಲಯದಲ್ಲಿ (ಕೇದಾರ ಕ್ಷೇತ್ರದಲ್ಲಿ). ಸುಧಾಕುಂಡ ಎಂಬ ಹೆಸರಿನ ಶ್ರೀಶೈಲದ ಒಂದು ಸ್ಥಾನದಲ್ಲಿ ಶ್ರೀ ಮಲ್ಲಿಕಾರ್ಜುನ ಲಿಂಗದಿಂದ ಪಂಡಿತಾರಾಧ್ಯರ ಜನನ ಮತ್ತು ಅವರ ವಾಸ ಶ್ರೀಶೈಲದಲ್ಲಿ. ಹಾಗೆಯೇ ಮನೋಹರವಾದ ಕೊಲ್ಲಿಪಾಕಿ (ಈಗಿನ ಕೊನಲು ಪಾಕ) ಸೋಮೇಶಲಿಂಗದಿಂದ ರೇವಣಸಿದ್ಧರ ಜನನ ಮತ್ತು ಅವರ ವಾಸಸ್ಥಾನ ಕದಳೀಪುರ (ಬಾಳೆಹೊನ್ನೂರು, ಬಾಳೇ ಹಳ್ಳಿ). ಅದರಂತೆ ವಟಕ್ಷೇತ್ರ ಸಿದ್ಧೇಶ್ವರ ಲಿಂಗದಿಂದ ಮರುಳಸಿದ್ಧರ ಜನನ ಮತ್ತು ಅವರ ವಾಸಸ್ಥಾನ ಉಜ್ಜಿನಿ. ಕಾಶಿಯಲ್ಲಿ ವಿಶ್ವೇಶ್ವರ ಲಿಂಗದಿಂದ ವಿಶ್ವಾರಾಧ್ಯರ ಜನನ ಮತ್ತು ಕಾಶೀಕ್ಷೇತ್ರ ಅವರ ವಾಸಸ್ಥಾನ. ಹೀಗೆ ಕಲಿಯುಗದ ಪಂಚಾಚಾರ್ಯರ ಉತ್ಪತ್ತಿ ಸ್ಥಾನ ಮತ್ತು ಅವರು ಮಠಗಳನ್ನು ಸ್ಥಾಪಿಸಿದ ಸ್ಥಾನಗಳನ್ನು ಸ್ವಾಯಂಭುವಾಗಮದಲ್ಲಿ ಹೇಳಲಾಗಿದೆ. ಇದೇ ವಿಷಯವು ಸುಪ್ರಭೇದಾಗಮ ಪ್ರಥಮ ಪ್ರಕರಣದಲ್ಲಿ (೧-೫೪) ಬಂದಿದೆ. ಪಾಶು ಪತಾಗಮ ಎಂಬ ಉಪಾಗಮದಲ್ಲಿ ಪಂಚಾಚಾರ್ಯರೇ ವೀರಶೈವ ಮತಸ್ಥಾಪಕರು ಎಂಬುದನ್ನು ಸ್ಪಷ್ಟವಾಗಿ ಹೇಳಲಾಗಿದೆ (೨.೬೬).

ಶೈವಾಗಮಗಳು ಕಾಲಕಾಲಕ್ಕೆ ಆದ ಘಟನೆ ಮತ್ತು ಪರಂಪರೆಗಳನ್ನು ದಾಖಲಿಸುತ್ತವೆ. ಅವತಾರ ಪುರುಷರಾದ ಅವರ ಬಗ್ಗೆ ಪರಂಪರೆಯಲ್ಲಿ ಲಿಂಗದಿಂದುದಯಿಸಿ ಲಿಂಗದಲ್ಲಿ ಅಡಗಿದರೆಂದೇ ವರದಿಯಿರುವುದು. ಅದನ್ನೇ ಉಲ್ಲೇಖಿಸಿ ಅಕ್ಕಮಹಾದೇವಿ ತಮ್ಮ ಒಂದು ವಚನದಲ್ಲಿ ಹೀಗೆ ಹೇಳಿದ್ದಾರೆ :

ಲಿಂಗದಿಂದುದಯಿಸಿ ಅಂಗವಿಡಿದಿಪ್ಪ ಪುರಾತನರ  
ಇಂಗಿತವನೇನೆಂದು ಬೆಸೆಗೊಂಬಿರಯ್ಯ ?  
ಅವರ ನಡೆಯೇ ಆಗಮ, ಅವರ ನುಡಿಯೇ ವೇದ,  
ಅವರನು ಲೋಕದ ಮಾನವರೆಂದೆನ್ನಬಹುದೇ ?  
ಅದೆಂತೆಂದೊಡೆ –  
ವೃಕ್ಷಾದ್ಭವಂತಿ ಬೀಜಾನಿ ತದ್ವೃಕ್ಷೇ ಲೀಯತೇ ಪುನಃ ।  
ರುದ್ರಲೋಕಂ ಪರಿತ್ಯಜ್ಯ ಶಿವಲೋಕೇ ಭವಿಷ್ಯತಿ ॥  
ಎಂಬುದಾಗಿ ಅಂಕೋಲೆಯ ಬೀಜದಿಂದಾಯ್ತು ವೃಕ್ಷವು.  
ಆ ವೃಕ್ಷವು ಮರಳಿ ಬೀಜದೊಳಡಗಿತ್ತು. ಆ ಪ್ರಕಾರದಿಂ  
ಲಿಂಗದೊಳಗಿದ್ದ ಪುರಾತನರು ಆ ಲಿಂಗದೊಳಗೆ  
ಬೆರಸಿದರು ನೋಡಿರಯ್ಯ  
ಇಂತಪ್ಪ ಪುರಾತನರಿಗೆ ನಾನು ಶರಣೆಂದು  
ಹುಟ್ಟುಗೆಟ್ಟೆನಯ್ಯಾ ಚೆನ್ನಮಲ್ಲಿಕಾರ್ಜುನಾ ।

ಈ ಹಿನ್ನೆಲೆಯಲ್ಲಿ ರೇಣುಕಾಚಾರ್ಯರ ತಂದೆ-ತಾಯಿಗಳು ಯಾರು ಎಂಬಿತ್ಯಾದಿ ಪ್ರಶ್ನೆಗಳು ಅಪ್ರಸ್ತುತ. ಅವರ ಕಾಲದಲ್ಲಿ ಆದ ಧಾರ್ಮಿಕ, ಸಾಮಾಜಿಕ ಹಾಗೂ ಸಂಘಟನಾತ್ಮಕ ಕೆಲಸಗಳ ಬಗ್ಗೆ ನಮಗೆ ದೊರೆಯುವ ಸಾಹಿತ್ಯಕ ಪರಂಪರೆಯೇ ಆಧಾರ. ಪಂಚಾಚಾರ್ಯರಲ್ಲಿ ಮೂವರು ಆಚಾರ್ಯರು – ಏಕೋರಾಮರು, ರೇವಣಸಿದ್ಧರು ಮತ್ತು ಪಂಡಿತಾರ್ಯರು ಅವತರಿಸಿದ್ದು ಆಂಧ್ರ ಪ್ರದೇಶದಲ್ಲಿ. ಪಂಡಿತಾರ್ಯರು ಮಾತ್ರ ಆಂಧ್ರದ ಶ್ರೀಶೈಲದಲ್ಲಿ ಪೀಠವನ್ನು ಸ್ಥಾಪಿಸಿದರು. ಏಕೋರಾಮರು ಹಿಮವತ್ ಕೇದಾರದಲ್ಲಿ ಮತ್ತು ರೇವಣಸಿದ್ಧರು ಕರ್ನಾಟಕದ ಬಾಳೆಹೊನ್ನೂರಿನಲ್ಲಿ ತಮ್ಮ ಪೀಠಗಳನ್ನು ಸ್ಥಾಪಿಸಿದರು. ಮರುಳಸಿದ್ಧರ ಅವತಾರವಾದದ್ದು ಮಧ್ಯಪ್ರದೇಶದ ಉಜ್ಜಯಿನಿಯ ಬಳಿ. ಅವರ ಪರಂಪರೆಯಲ್ಲಿ ಬಂದ ಇನ್ನೊಬ್ಬರು ಮರುಳಸಿದ್ಧರು ಈಗಿನ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕು ಉಜ್ಜಿನಿಯಲ್ಲಿ ಪೀಠವನ್ನು ಹನ್ನೊಂದನೆಯ ಶತಮಾನದಲ್ಲಿ ಸ್ಥಾಪಿಸಿದರು. ವಿಶ್ವಾರಾಧ್ಯರು ಕಾಶಿಯಲ್ಲೇ ಪೀಠವನ್ನು ಸ್ಥಾಪಿಸಿದರು. ಇವರ ಪರಂಪರೆಯು ಈಗಲೂ ಮುಂದುವರಿದಿದೆ.

ರೇವಣಸಿದ್ಧರ ಬಗ್ಗೆ ಹರಿಹರನ ರೇವಣಸಿದ್ಧೇಶ್ವರ ರಗಳೆ ಮತ್ತು ರಾಘವಾಂಕನ ಸಿದ್ಧರಾಮೇಶ್ವರ ಚರಿತ್ರೆಗಳಲ್ಲಿ ಅನೇಕ ಸಂಗತಿಗಳು ದೊರೆಯುತ್ತವೆ. ಹರಿಹರನ ಕಾಲಕ್ಕಾಗಲೇ ರೇವಣಸಿದ್ಧರ ಚರಿತ್ರೆಯೊಂದಿಗೆ ಪ್ರಾಚೀನ ರೇಣುಕರ ಚರಿತ್ರೆಯೂ ಬೆಸೆದುಕೊಂಡು ಒಂದೇ ಇತಿಹಾಸವಾಗಿದೆ. ಈ ರೇವಣಸಿದ್ಧರು ಬಸವಣ್ಣನ ಹಿರಿಯ ಸಮಕಾಲೀನರು. ಅವರಿಗಿಂತ ಹಿಂದೆ ಅನೇಕ ರೇವಣಸಿದ್ಧರು, ರೇಣುಕಾಚಾರ್ಯರು ಆಗಿಹೋಗಿದ್ದರು. ಹೀಗೆ ಮೂಲ ರೇಣುಕರಿಂದ ಹಿಡಿದು ಈ ರೇವಣಸಿದ್ಧರವರೆಗೆ ಒಂದು ಪರಂಪರೆಯೇ ರೇವಣಸಿದ್ಧೇಶ್ವರ ರಗಳೆಯಲ್ಲಿ ಹಾದುಹೋಗುತ್ತದೆ. ರೇವಣಸಿದ್ಧರ ಬಾಯಲ್ಲಿ ಹೇಳಿಸಿದಂತೆ 'ಅರಿದೇಳು ನೂರು ವರುಷ, ಅರಿಯದೇಳು ನೂರು ವರುಷ' (ಪ್ರತ್ಯಕ್ಷವಾಗಿ ೭೦೦ ವರ್ಷ ಮತ್ತು ಅಪ್ರತ್ಯಕ್ಷವಾಗಿ ೭೦೦ ವರ್ಷ) ಎಂಬ ಲೆಕ್ಕದಲ್ಲಿ ಅವರದು ೧೪೦೦ ವರ್ಷಗಳ ಇತಿಹಾಸ.

ಉಜ್ಜಿನಿ ಪೀಠದ ಮರುಳಸಿದ್ಧ ಅಥವಾ ಮರುಳಾರಾಧ್ಯರು ಮೊದಲಿಗೆ ಮಧ್ಯ ಪ್ರದೇಶ ಉಜ್ಜಯಿನಿಯ ಬಳಿಯೇ ಪೀಠವನ್ನು ಸ್ಥಾಪಿಸಿದರು. ಮುಕ್ತಿಮುನಿ ಮುಂತಾದ ಅನೇಕ ಆಚಾರ್ಯರ ಅನಂತರ ಬಂದ ಇನ್ನೊಬ್ಬ ಮರುಳಸಿದ್ಧರು ಜೈನ ರಾಜರ (ವೀರಸೇನ ಮುಂತಾದವರ) ಉಪದ್ರವದಿಂದ ಬೇಸತ್ತು ತಮ್ಮ ಶಿಷ್ಯರೊಂದಿಗೆ ಮಹಾರಾಷ್ಟ್ರದ ವಿವಿಧ ಸ್ಥಾನಗಳಲ್ಲಿ ಸಂಚರಿಸಿ ಮಠಗಳನ್ನು ಸ್ಥಾಪಿಸುತ್ತಾ ಬಳ್ಳಾರಿ ಜಿಲ್ಲೆಯ ಒಂದು ಗ್ರಾಮಕ್ಕೆ ಬಂದು

ಅದಕ್ಕೆ ಉಜ್ಜನಿಯೆಂದು ನಾಮಕರಣ ಮಾಡಿ ತಮ್ಮ ಪೀಠವನ್ನು ಸ್ಥಾಪಿಸಿದರು.

ಕೇದಾರ ಪೀಠದ ಪ್ರಾಚೀನ ಇತಿಹಾಸವನ್ನು ತಿಳಿಯಲು ಪಂಡಿತ ಹರಿಕೃಷ್ಣ ರತೂಡಿ ಅವರ ''ಗಢವಾಲ ಕಾ ಇತಿಹಾಸ'' (೧೯೨೮)ವನ್ನು ನೋಡಬಹುದು. ಏಕೋರಾಮಾರಾಧ್ಯರು ಕೇದಾರದಲ್ಲಿ ಪೀಠಸ್ಥಾಪನೆ ಮಾಡಿದ ನಂತರ ಉಷಾದೇವಿಯು ಭವ್ಯವಾದ ಮಠವನ್ನು ಕಟ್ಟಿಸಿಕೊಟ್ಟಳು. ಆದ್ದರಿಂದಲೇ ಕೇದಾರ ಪೀಠದ ಮಠಕ್ಕೆ 'ಓಖೀಮಠ' (ಉಷಾಮಠ) ಎಂದು ಹೆಸರು. ಮುಂದೆ ಆನಂದ ಲಿಂಗ ಶಿವಾಚಾರ್ಯರ ಕಾಲದಲ್ಲಿ ಜನಮೇಜಯ ಮಹಾರಾಜನು ತನ್ನ ಆಡಳಿತದಲ್ಲಿದ್ದ ಕೇದಾರ ಕ್ಷೇತ್ರವನ್ನು ದಾನ ಮಾಡಿ ತಾಮ್ರ ಶಾಸನವನ್ನು ಬರೆದುಕೊಟ್ಟಿರುವನು. ಆ ತಾಮ್ರ ಶಾಸನ ಇಂದಿಗೂ ಪೀಠದ ವಶದಲ್ಲಿದೆ.

ಶ್ರೀಶೈಲ ಪೀಠವನ್ನು ಪಂಡಿತಾರಾಧ್ಯರು ಸ್ಥಾಪಿಸಿದ ನಂತರದ ಸದಾನಂದರ ಇತಿಹಾಸವು ಸ್ಕಂದಪುರಾಣದ ಒಂದು ಅಧ್ಯಾಯದಲ್ಲಿ ಬಂದಿದೆ. ಕ್ರಿ. ಶ. ೯೪೦ರಲ್ಲಿ ನನ್ನೆಚೋಳನೆಂಬ ಆಂಧ್ರರಾಜನು ತನ್ನ ''ಕುಮಾರ ಸಂಭವ''ವೆಂಬ ಆಂಧ್ರ ಕಾವ್ಯವನ್ನು ಶ್ರೀಶೈಲ ಜಗದ್ಗುರು ಮಲ್ಲಿಕಾರ್ಜುನ ದೇವಾಚಾರ್ಯರಿಗೆ ಅರ್ಪಣೆ ಮಾಡಿದ್ದಾನೆ. ಮುದೇನೂರಿನ ದಾಸಿಮಯ್ಯನು ಶ್ರೀಶೈಲ ಪೀಠದ ಗುರುಗಳಿಂದ ಶಿವತತ್ತ್ವದ ಉಪದೇಶವನ್ನು ಪಡೆದನೆಂದು ಚಿಲಕೂರಿ ನಾರಾಯಣರಾಯರು ಗಮನವನ್ನು ಸೆಳೆದಿದ್ದಾರೆ.

ಕಾಶಿಯಲ್ಲಿ ವಿಶ್ವಾರಾಧ್ಯರು ಪೀಠವನ್ನು ಸ್ಥಾಪಿಸಿದ ಮೇಲೆ ಅವರ ಪರಂಪರೆಯಲ್ಲಿ ಹಲವರು ಆಗಿಹೋಗಿದ್ದಾರೆ. ಜಯನಂದದೇವನೆಂಬ ಕಾಶಿ ರಾಜನು ಮಲ್ಲಿಕಾರ್ಜುನ ಜಂಗಮರಿಗೆ ಭೂದಾನವನ್ನು ಮಾಡಿ ಕ್ರಿ. ಶ. ೫೭೪ರಲ್ಲಿ ದಾನಶಾಸನವನ್ನು ಬರೆದು ಕೊಟ್ಟಿದ್ದಾನೆ. ಅದು ಪೀಠದ ಸ್ಥಾನವಾದ ಜಂಗಮವಾಡಿ ಮಠದಲ್ಲಿ ಸುರಕ್ಷಿತವಾಗಿದೆ. ಕಾಶಿ ನಗರದಲ್ಲಿರುವ ಮಠಗಳಲ್ಲೆಲ್ಲಾ ಜಂಗಮವಾಡಿ ಮಠವು ಅತ್ಯಂತ ಪ್ರಾಚೀನ.

ಹೀಗೆ ಪಂಚಾಚಾರ್ಯ ಪೀಠಗಳಿಗೆ ಇರುವಷ್ಟು ಪ್ರಾಚೀನತೆ ಬೇರೆ ಯಾವ ವೀರ ಶೈವ ಮಠಗಳಿಗೂ ಇಲ್ಲವೆಂಬುದು ಸ್ಪಷ್ಟ. ಪಂಚಾಚಾರ್ಯರೇ ವೀರಶೈವ ಮತದ ಸಂಸ್ಥಾಪಕರು ಎಂಬುದು ಸಿದ್ಧವಾಗುತ್ತದೆ. ಶ್ರೀಶೈಲ, ಕೇದಾರ ಮತ್ತು ಕಾಶಿ ಜ್ಯೋತಿರ್ಲಿಂಗಗಳಿಂದ ಆವಿರ್ಭವಿಸಿದ ಮೂಲ ಪುರುಷರು ಅಂದರೆ ಪಂಡಿತಾರ್ಯರು, ಏಕೋರಾಮರು ಮತ್ತು ವಿಶ್ವಾರಾಧ್ಯರು. ಇವರು ವೀರಶೈವ ಮತದ ಸಂಸ್ಥಾಪಕರೇ ಹೊರತು ಶೈವಮತದ ಸಂಸ್ಥಾಪಕರಲ್ಲ. ಪಂಡಿತಾರ್ಯರ ಪರಂಪರೆಯಲ್ಲಿ ಬಂದ ಸದಾನಂದ ಶಿವಾಚಾರ್ಯರ ಬಗ್ಗೆ ಸ್ಕಂದ ಪುರಾಣದಲ್ಲಿ (ಶಂಕರಸಂಹಿತೆ, ೮೫-೬೨) ಅವರನ್ನು 'ಲಿಂಗಾಂಗ ಸಂಬಂಧಿ'ಯೆಂಬ ವಿಶೇಷಣದಿಂದ ಗುರುತಿಸಲಾಗಿದೆ. ಇದೇ ಬೇರೆ ಆಚಾರ್ಯರಿಗೂ ಅನ್ವಯಿಸುತ್ತದೆ. ಅವರು ಇಷ್ಟಲಿಂಗ ಪೂಜಕರೇ ಹೊರತು ಸ್ಥಾವರ ಲಿಂಗ ಪೂಜಕರಲ್ಲ.

ಲಿಂಗಾಯತ ಧರ್ಮವನ್ನು ಹಾಗೂ ಇಷ್ಟಲಿಂಗವನ್ನು ಕರುಣಿಸಿದವರು ಬಸವಾದಿ ಶರಣರೇ ಹೊರತು ಬೇರಾರೂ ಅಲ್ಲ ಎಂಬುದು ಸರ್ವಥಾ ತಪ್ಪು. ಇಷ್ಟಲಿಂಗದ ಪರಿಕಲ್ಪನೆ ಮತ್ತು ಇಷ್ಟಲಿಂಗ ಧಾರಣೆಯ ಪದ್ಧತಿಗಳು ಬಸವಾದಿ ಶರಣರಿಗಿಂತ ಎಷ್ಟೋ ಹಿಂದೆ ಅವರೇ ಪ್ರಮಾಣ ರೂಪದಲ್ಲಿ ಉಲ್ಲೇಖಿಸುವ ಶೈವಾಗಮಗಳಲ್ಲಿ ನಿರೂಪಿಸಲ್ಪಟ್ಟಿವೆ. ಉದಾಹರಣೆಗೆ, ಚಂದ್ರಜ್ಞಾನಾಗಮ, ಉತ್ತರ ಭಾಗ, ಕ್ರಿಯಾಪಾದ, ೩.೩೨ ಮತ್ತು ೩.೪೫ ನೋಡಬಹುದು.

ಅಂದರೆ ಬಸವಾದಿ ಶರಣರಿಗಿಂತ ಎಷ್ಟೋ ಹಿಂದಿನ ಕಾಲದಿಂದ ಇಷ್ಟಲಿಂಗ ಧಾರಣೆಯ ಪರಂಪರೆ ಇತ್ತು. ಬಸವಾದಿ ಶರಣರು ಆ ಪರಂಪರೆಯನ್ನು ಅನುಸರಿಸಿದ್ದಾರೆ. ಬಸವಣ್ಣನವರಿಗಿಂತ ಮುಂಚೆ 'ರಾಮನಾಥ' ಎಂಬ ಅಂಕಿತದೊಂದಿಗೆ ವಚನಗಳನ್ನು ಬರೆದ ಜೇಡರ ದಾಸಿಮಯ್ಯ, ಮಾದಾರ ಚನ್ನಯ್ಯ, ಕೆಂಭಾವಿ ಭೋಗಣ್ಣ , ಕುಂಬಾರ ಗುಂಡಯ್ಯ ಮುಂತಾದವರು ಇಷ್ಟಲಿಂಗ ಮುಂತಾದ ಎಲ್ಲಾ ಪರಿಕಲ್ಪನೆಗಳ ಪರಿಚಯವನ್ನು ನೀಡುತ್ತಾರೆ. ಜೇಡರ ದಾಸಿಮಯ್ಯನ ಕಾಲ ಕ್ರಿ. ಶ. ೧೦೧೮ರಿಂದ ೧೦೪೨ರವರೆಗೆ. ಮಾದಾರ ಚನ್ನಯ್ಯ ಮುಂತಾದವರು ಅವರಿಗಿಂತಲೂ ಹಿಂದಿನವರು. ಅವರಿಗೂ ಕೂಡ ಇಷ್ಟಲಿಂಗ ಮುಂತಾದ ಪರಿಕಲ್ಪನೆಗಳು ಹಿಂದಿನ ಪರಂಪರೆಯಿಂದ ಬಂದಿದ್ದುವು. ಆದ್ದರಿಂದ ಪ್ರಭುಲಿಂಗಲೀಲೆಯ ಉಲ್ಲೇಖದಲ್ಲಿ ಬಂದಿರುವುದು ಬಸವಣ್ಣನವರ ಮೇಲಿನ ಅಭಿಮಾನದಿಂದ ಮೂಡಿಬಂದ ಪ್ರಶಂಸೆಯ ಮಾತು, ಕೇವಲ ಅರ್ಥವಾದ.

ಹನ್ನೆರಡನೆಯ ಶತಮಾನದಲ್ಲಿ ಕೆಲವು ಶರಣರು ಬಸವಣ್ಣ ಕಾರಣಿಕ ಪುರುಷ, ಆತನೇ ಗುರು - ಲಿಂಗ - ಜಂಗಮಕ್ಕೆಯೂ ಮೂಲ ಎಂದು ಕೊಂಡಾಡಿದ್ದಾರೆ. ಆಗಿನ ಕಾಲದಲ್ಲಿ ವೀರಶೈವ ಸಮುದಾಯದ ನೇತಾರ, ಪ್ರಧಾನ ಪುರುಷ ಆತ. ಆದ್ದರಿಂದ 'ಆತನೇ ಗುರು - ಲಿಂಗ - ಜಂಗಮಕ್ಕೆಯೂ ಮೂಲ' ಎಂದು ಕೊಂಡಾಡಿದ್ದಾರೆ. ಬಸವಣ್ಣನವರೇ ಚನ್ನಬಸವಣ್ಣನವರ ಬಗ್ಗೆ ಹೇಳಿರುವ ಈ ವಚನವನ್ನು ನೋಡಿ :

ಗುರುವಿಂಗೆ ನೀನೆ ಕರ್ತ, ಲಿಂಗಕ್ಕೆ ನೀನೆ ಕರ್ತ,
ಜಂಗಮಕ್ಕೆ ನೀನೆ ಕರ್ತ,
ಪ್ರಸಾದಕ್ಕೆ ನೀನೆ ಕರ್ತ, ಉಪದೇಶಕ್ಕೆ ನೀನೆ ಕರ್ತ,
ಕೂಡಲಸಂಗಮ ದೇವರು ಸಾಕ್ಷಿಯಾಗಿ,
ಎನಗೆಯೂ ನೀನೆ ಕರ್ತನಾದ ಕಾರಣ ನಾನು ಬೇಕೆನಲಮ್ಮೆ,
ಬೇಡೆನಲಮ್ಮೆ,
ಕಾಣಾ ಚನ್ನಬಸವಣ್ಣಾ.

ಹೀಗೆಯೇ ಬಸವಣ್ಣನವರು ಪ್ರಭುದೇವರ ಬಗ್ಗೆ ಹೇಳಿದ್ದಾರೆ. ಒಟ್ಟಿನಲ್ಲಿ ಅನುಭವ ಮಂಟಪದಲ್ಲಿ ಸೇರಿದಾಗ ಬಸವಣ್ಣ ಮುಂತಾದವರು ಒಬ್ಬೊಬ್ಬರಿಂದ ಒಂದೊಂದು ಪಾರಮಾರ್ಥಿಕ ವಿಚಾರವನ್ನು ತಿಳಿದುಕೊಂಡು ಅದಕ್ಕಾಗಿ ಒಬ್ಬೊಬ್ಬರನ್ನೂ ಕೊಂಡಾಡುವ ಸನ್ನಿವೇಶವನ್ನು ಕಾಣುತ್ತೇವೆ. ಹಾಗೆಂದ ಮಾತ್ರಕ್ಕೆ ವೀರಶೈವದ ಪರಿಕಲ್ಪನೆಗಳಿಗೆಲ್ಲಾ ಅವರೇ ಮೂಲಕರ್ತರು ಎಂದು ಹೇಳುವುದು ಸಾಧ್ಯವೇ ? ಅವೆಲ್ಲ ಮಾತುಗಳನ್ನು ಪರಸ್ಪರವಾಗಿ ಅಭಿಮಾನಪೂರ್ವಕವಾದ ಪ್ರಶಂಸೆಯ ಮಾತುಗಳೆಂದು ತಿಳಿಯಬೇಕು. ಹಾಗೆ ಅವೆಲ್ಲ ಅರ್ಥವಾದಗಳು. ರೇಣುಕಾಚಾರ್ಯರನ್ನು ಹೊಗಳುವ ಸಂದರ್ಭ ಬಹುಶಃ ಬಸವಣ್ಣನವರಿಗೆ ಒದಗಿಬಂದಿರಲಿಕ್ಕಿಲ್ಲ. ಅವರು ಅನುಭವ ಮಂಟಪದಲ್ಲಿ ಭಾಗವಹಿಸುತ್ತಿರಲಿಲ್ಲವಲ್ಲ! ಬಸವಣ್ಣನವರು ಪ್ರಶಂಸಿಸಲಿಲ್ಲವೆಂದ ಮಾತ್ರಕ್ಕೆ ರೇಣುಕಾದಿಗಳು ವೀರಶೈವ ಧರ್ಮದ ಪರಿಕಲ್ಪನೆಗಳ ಬಗ್ಗೆ ಬೋಧನೆ ಮಾಡಲಿಲ್ಲ ಎಂದು ಅರ್ಥವೇ ?

ಇನ್ನೊಂದು ವಿಷಯ: ಲಿಂಗಾಯತ ಧರ್ಮದ ನಿಜವಾದ ವಾರಸುದಾರರು ದಲಿತರೇ ವಿನಃ ಮತ್ತಾರೂ ಅಲ್ಲ ಎನ್ನುವುದು ಸರ್ವಥಾ ತಪ್ಪು. ವೀರಶೈವ ಪರಂಪರೆಯಲ್ಲಿ ದಲಿತರು ಎಂಬ ವರ್ಗವೇ ಇಲ್ಲ. ಲಿಂಗವಂತರಾದ ಮೇಲೆ ಎಲ್ಲರೂ ಒಂದೇ. ಶೈವಾಗಮಗಳು ಇದನ್ನು ಘಂಟಾ ಘೋಷವಾಗಿ ಸಾರುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ, ಬಸವಣ್ಣನವರು ಯಾವುದನ್ನೂ ಹುಟ್ಟು ಹಾಕಲಿಲ್ಲ, ಅವರು ಇದ್ದ ಬುನಾದಿಯ ಮೇಲೆ ಸಮಾಜವನ್ನು ಕಟ್ಟಿದರು, ಉದ್ಧರಿಸಿದರು. ಪಂಚಾಚಾರ್ಯರದೇ ಮೂಲಪರಂಪರೆ. ಅದರಲ್ಲಿ ಮುನ್ನಡೆದವರು ಸಮಾಜವನ್ನು ಮುನ್ನಡೆಸಿದವರು ಬಸವಾದಿ ಶರಣರು.

ಲೇಖಕರು ಶಿವಾಚಾರ್ಯರೆಂಬುವರು ಎಂದು ಹೇಳಿರುವುದು ಶಿವಯೋಗಿ ಶಿವಾಚಾರ್ಯರ ಬಗ್ಗೆ. ಅವರು ೧೩ನೆಯ ಶತಮಾನದಿಂದೀಚೆಗೆ ಆಗಿ ಹೋದವರಲ್ಲ. ಅದಕ್ಕೂ ಮುಂಚೆ ಕನಿಷ್ಠ ಮೂರು ಶತಮಾನಗಳಿಗಿಂತ ಹಿಂದಿನವರು. ಕ್ರಿ. ಶ. ೮ನೆಯ ಶತಮಾನದಿಂದ ಕ್ರಿ. ಶ. ೧೦ನೆಯ ಶತಮಾನಗಳ ಮಧ್ಯಭಾಗವೆಂದು ಅವರ ಕಾಲವನ್ನು ಸ್ಥೂಲವಾಗಿ ಹೇಳಬಹುದು. ಅವರ ಕೃತಿಯು 'ಸಿದ್ಧಾಂತ ಶಿಖಾಮಣಿ'. ಅದರ ''ಪ್ರಸಾದಾದೇವ ಸಾಭಕ್ತಿಃ'' ಎಂಬ ಶ್ಲೋಕವು (೯.೧೧) ''ನೀನೊಲಿಯಿತ್ತೆ ಪುಣ್ಯ; ನೀನೊಲ್ಲದುದೆ ಪಾಪ'' ಎಂದು ಪ್ರಾರಂಭವಾಗುವ ವಚನದಲ್ಲಿ ಬಂದಿದೆ. ''ಶಿವಭಕ್ತ ಸಮಾವೇಶೇ'' ಎಂಬ ಅದರ ಇನ್ನೊಂದು ಶ್ಲೋಕವು ''ಸಾಧಕದೆಸೆಯಲ್ಲಿ ಕುಲವನರಸಬಹುದಲ್ಲದೆ'' ಎಂದು ಪ್ರಾರಂಭವಾಗುವ ಚನ್ನಬಸವಣ್ಣನವರ ವಚನದಲ್ಲಿ ಬಂದಿದೆ. ಇಷ್ಟೇ ಅಲ್ಲ ''ಯದಾ ಶಿವಕಲಾಯುಕ್ತಂ'', ''ಸಸಂಸ್ಕಾರೇಷು ಲಿಂಗೇಷು'' ಮತ್ತು ''ನಾಹ್ವಾನಂ ನ ವಿಸರ್ಗಂಚ'' ಎಂಬ ಮೂರು ಆಹ್ವಾನ ನಿರಸನಸ್ಥಲದ ಶ್ಲೋಕಗಳು (ಸಿ.ಶಿ.೧೦. ೪೫-೪೭) ಚನ್ನಬಸವಣ್ಣನವರ ಒಂದು ವಚನದಲ್ಲಿ ಬಂದಿದೆ. ಇದರಿಂದ ಸಿದ್ಧಾಂತ ಶಿಖಾಮಣಿಯು ಬಸವಾದಿ ಶರಣರ ಕಾಲಕ್ಕಿಂತ ಮುಂಚಿನದೆಂಬುದು ಸಿದ್ಧ. ಅದರಲ್ಲಿ ಬಂದಿರುವ ನೂರೊಂದು ಸ್ಥಲಗಳ ಉಲ್ಲೇಖವು ಚನ್ನಬಸವಣ್ಣನವರ ಒಂದು ವಚನದಲ್ಲಿ ಮತ್ತು ಪ್ರಭುದೇವರ ಒಂದು ವಚನದಲ್ಲಿ ಬಂದಿದೆ. ಇದರಿಂದಲೂ ಅದೇ ನಿರ್ಣಯವು ಸಿದ್ಧ. ಅದೊಂದು ಸಿದ್ಧಾಂತ ಗ್ರಂಥ. ಅದರಲ್ಲಿ ಪರಸ್ಪರ ಸಂಬಂಧವುಳ್ಳ ಸಂಗತಿಗಳೇ ಬಂದಿರುವುದು. ಅದನ್ನು 'ಪೊಟ್ಟೆ ಪುಸ್ತಕ'ವೆಂದು ಕರೆಯುವುದು 'ಒಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು' ಎಂಬಂತಹದು.

ಡಾ|| ಎಂ. ಶಿವಕುಮಾರ ಸ್ವಾಮಿ
ನಂ. ೮೮, ೪ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ
ಆರ್. ಪಿ. ಸಿ. ಬಡಾವಣೆ, ಬೆಂಗಳೂರು - ೫೬೦ ೦೪೦

# ವಾಲ್ಮೀಕಿ ಪೂರ್ವದ ರಾಮಾಯಣಗಳು ಮತ್ತು ಸೀತೆ

ಪ್ರೊ|| ಭಾಲಚಂದ್ರ ಜಯಶೆಟ್ಟಿ

ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳು ಭಾರತೀಯ ಸಂಸ್ಕೃತಿಯ ಎರಡು ಕಣ್ಣುಗಳಿದ್ದಂತೆ. ಒಂದು ದೇಶದ ಸಾಂಸ್ಕೃತಿಕ ಪರಂಪರೆಯನ್ನು ಪ್ರತಿನಿಧಿಸಲು ಇಂಥ ಮಹಾಕಾವ್ಯಗಳು ಸಹಾಯಕವಾಗುತ್ತವೆ. ಮಹಾಭಾರತ ಕುರಿತು ಅಂಥ ಯಾವ ವಾದವಿವಾದಗಳು ಇದುವರೆಗೆ ಹುಟ್ಟಿಕೊಂಡಿಲ್ಲ. ಅದರಲ್ಲಿ ಎಷ್ಟೇ ಪ್ರಕ್ಷಿಪ್ತ ಅಂಶಗಳಿರ ಬಹುದಾದರೂ ನಾವು ಅದನ್ನು ಯಾವುದೇ ತಕರಾರಿಲ್ಲದೆ ಸ್ವೀಕರಿಸಿದ್ದೇವೆ. ಅದು ಐತಿಹಾಸಿಕ ಕಾವ್ಯವೆ ? ಪೌರಾಣಿಕರ ಕಲ್ಪನೆಯೆ ? ಎಂಬ ಬಗ್ಗೆ ನಾವು ಅಷ್ಟೊಂದು ತಲೆ ಕೆಡಿಸಿಕೊಳ್ಳಲು ಹೋಗುವುದಿಲ್ಲ. ಆದರೆ ರಾಮಾಯಣದ ಕುರಿತು ಹಾಗಲ್ಲ, ಅದೊಂದು ಐತಿಹಾಸಿಕ ಕಾವ್ಯ. ವಾಲ್ಮೀಕಿ ಬರೆದ ರಾಮಾಯಣವೊಂದೇ ಸಾಧುವಾದುದು, ಉಳಿದ ಜೈನ, ಬೌದ್ಧ ರಾಮಾಯಣಗಳೆಲ್ಲ ಧಾರ್ಮಿಕ ಹಿತಾಸಕ್ತಿಗೆ ಒಳಗಾಗಿರುವಂಥವು ಎಂದು ವಾದಿಸುವ ವಿದ್ವಾಂಸರಿಗೆ ಕೊರತೆಯಿಲ್ಲ. ರಾಮಾಯಣದ ಕಥೆಯನ್ನು ವಾಲ್ಮೀಕಿಯು ತಾನೇ ಹುಟ್ಟುಹಾಕಿ ಬರೆದನೆಂದು, ಆತ ಬರೆದಂತೆ ಮುಂದೆ ಆತನ ಕಾಲದಲ್ಲಿಯೇ ರಾಮಾಯಣ ಘಟಿಸಿತು ಎಂದು ಅನೇಕರು ಭಾವಿಸಿದ್ದಾರೆ. ರಾಮಾಯಣದ ಉತ್ತರ ಕಾಂಡವು ಈ ನಂಬಿಕೆಗೆ ಪೂರಕವೂ ಆಗಿದೆ. ಆದರೆ ವಸ್ತುಸ್ಥಿತಿ ಹಾಗಿಲ್ಲ, ಬೇರೆಯೇ ಆಗಿದೆ.

ವಾಲ್ಮೀಕಿಗಿಂತ ಮುಂಚೆ ರಾಮಾಯಣ ಕಥೆಯು ಪ್ರಚಲಿತವಾಗಿತ್ತು, ಅದು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಸ್ವರೂಪ ತಳೆದಿತ್ತು ಎಂಬುದು ವಸ್ತುಸತ್ಯವಾಗಿದೆ. ರಾಮನ ಕಥೆಯು ವಾಲ್ಮೀಕಿಯ ಕಾಲಕ್ಕಿಂತ ಮುಂಚೆಯೇ ಜನಜನಿತವಾಗಿತ್ತು ಎಂಬುದಕ್ಕೆ ರಾಮಾಯಣದಲ್ಲಿಯೇ ನಮಗೆ ಆಧಾರ ಸಿಗುತ್ತದೆ. ಒಮ್ಮೆ ನಾರದನು ವಾಲ್ಮೀಕಿಯ ಆಶ್ರಮಕ್ಕೆ ಬಂದಾಗ ವಾಲ್ಮೀಕಿಯು, 'ಈ ಲೋಕದಲ್ಲಿ ಇಂದು ಗುಣವಂತನೂ, ವೀರ್ಯ ವಂತನೂ, ಧರ್ಮಜ್ಞನೂ, ಕೃತಜ್ಞನೂ, ಸತ್ಯವಚನನೂ, ದೃಢವ್ರತನೂ, ಚರಿತ್ರವಂತನೂ, ಸರ್ವಭೂತ ಹಿತಕರನೂ, ವಿದ್ಯಾವಂತನೂ, ಸಮರ್ಥನೂ, ಏಕಪ್ರಿಯದರ್ಶನನೂ, ಜಿತ ಕ್ರೋಧನೂ, ಕಾಂತಿಯುತನೂ, ಅನಸೂಯಾವಂತನೂ, ಯುದ್ಧದಲ್ಲಿ ದೇವತೆಗಳನ್ನೆಲ್ಲ ಜಯಿಸಬಲ್ಲಂಥವನೂ ಆದಂಥ ಯಾರಾದರೂ ಒಬ್ಬ ವ್ಯಕ್ತಿ ಇದ್ದಾನೆಯೇ ?' ಎಂದು ಕೇಳುತ್ತಾನೆ. ಈ ಎಲ್ಲಾ ಗುಣಗಳುಳ್ಳಂಥ ವ್ಯಕ್ತಿಯೊಬ್ಬನಿದ್ದಾನೆ, ಆತನೇ ರಾಮನು ಎಂದು ಸಂಗ್ರಹವಾಗಿ ರಾಮನ ಕಥೆಯನ್ನು ನಾರದನು ವಾಲ್ಮೀಕಿಗೆ ಹೇಳುತ್ತಾನೆ. ನಾರದನಿಗೆ ರಾಮನ ಆ ಕಥೆ ಹೇಗೆ ಮತ್ತು ಎಲ್ಲಿಂದ ಗೊತ್ತಾಯಿತು ಎಂಬ ಪ್ರಶ್ನೆ ಏಳುತ್ತದೆ. ಇದಕ್ಕೆ ಸರಳವಾದ ಉತ್ತರವೆಂದರೆ ಆಗ ಜಾನಪದರಲ್ಲಿ ಜನಜನಿತವಾಗಿದ್ದ ರಾಮನ ಕಥೆಯು ವಾಲ್ಮೀಕಿಗೆ ಗೊತ್ತಿರಲಿಲ್ಲ, ಅದನ್ನು ನಾರದನು ಹೇಳಿದ ಎಂದು ನಾವು ಅರ್ಥ ಮಾಡಬೇಕಾಗುತ್ತದೆ.

ಚರಿತ್ರೆಯನ್ನು ಅರಿತವರೆಲ್ಲಾ ತಿಳಿದಂತೆ ಜೈನ ಮತ್ತು ಬೌದ್ಧ ಸಂಪ್ರದಾಯಗಳು ಆಯಾ ಕಾಲದ ವೈದಿಕ ಜನಜೀವನದಿಂದ ಬೇರ್ಪಟ್ಟು ವಿಕಾಸಗೊಂಡ ಸಂಪ್ರದಾಯಗಳಾಗಿವೆ. ಧಾರ್ಮಿಕ ಮತ್ತು ಸಾಂಪ್ರದಾಯಿಕ ದೃಷ್ಟಿಕೋನಗಳು ಭಿನ್ನವಾಗಿ ಈ ಪಂಥಗಳು ಬೆಳೆದು ನಿಂತರೂ ಅವುಗಳಿಂದ ಜಾನಪದೀಯ ನಂಬಿಕೆಗಳು ಅಷ್ಟು ಸುಲಭವಾಗಿ ಬಿಟ್ಟುಹೋಗು ವುದಿಲ್ಲ. ಬೀಜ ರೂಪವಾಗಿದ್ದ ಕಥೆಯೊಂದನ್ನು ವಾಲ್ಮೀಕಿಯು ವಸ್ತುವನ್ನಾಗಿ ಮಾಡಿ ಕೊಂಡು ರಾಮಾಯಣದಂಥ ಮಹಾಕಾವ್ಯವನ್ನು ರಚಿಸಿದರೂ ಅದರ ಮೂಲ ರೂಪವು ಜಾನಪದೀಯವಾಗಿದೆ. ವಾಲ್ಮೀಕಿಯ ರಾಮಾಯಣವು ರಚಿತವಾದ ಮೇಲೆ ರಾಮಕಥೆಗೆ ಒಂದು ಸುಸ್ಥಿರವಾದ ಸ್ವರೂಪ ಬಂದಿತು, ಇಡೀ ವೈದಿಕ ಜನಾಂಗವನ್ನು ಅದು ತನ್ನ ಸೆಳೆತಕ್ಕೆ ಎಳೆದುಕೊಂಡಿತು. ಆದರೆ ಜಾನಪದೀಯ ಮೂಲದ ಕಥೆಯು ಜೈನ, ಬೌದ್ಧರಲ್ಲಿ ಮತ್ತು ಭಾರತದ ನೆರೆಹೊರೆ ರಾಷ್ಟ್ರಗಳಲ್ಲಿ ತನ್ನ ಮೂಲ ರೂಪದಲ್ಲಿಯೇ ಬೆಳೆದುಬಂದಿತು ಎಂಬ ಮಾತೂ ಕೂಡ ಅಷ್ಟೇ ನಿಜ.

ಹೀಗಾಗಿ ವಾಲ್ಮೀಕಿ ರಾಮಾಯಣವನ್ನು ಹೊರತುಪಡಿಸಿದರೆ, ಇತರೆ ರಾಮ ಕಥೆಗಳಲ್ಲಿ ನಾವು ಅನೇಕ ಭಿನ್ನತೆಗಳನ್ನು ಕಾಣುತ್ತೇವೆ. ಆ ಭಿನ್ನತೆಗಳು ನಾವು ಅಂದುಕೊಂಡಿರುವಂತೆ ವಾಲ್ಮೀಕಿ ರಾಮಾಯಣದಿಂದ ಮಾಡಿಕೊಂಡ ಬದಲಾವಣೆಗಳಲ್ಲ, ಯಾಕೆಂದರೆ ಆಯಾ ರಾಮ ಕಥೆಗಳಿಗೆ ವಾಲ್ಮೀಕಿ ರಾಮಾಯಣವು ಆಕರ ಗ್ರಂಥವಾಗಿರಲಿಲ್ಲ, ಅವು ಸ್ವತಂತ್ರ ವಾಗಿ, ಮೌಖಿಕವಾಗಿ ಬೆಳೆದುಬಂದಂಥವುಗಳು. ಅವು ತಮ್ಮ ಮೂಲ ಸ್ವರೂಪವನ್ನು ಕಾಯ್ದು ಕೊಂಡು ಬಂದಿವೆ. ವಾಲ್ಮೀಕಿ ರಾಮಾಯಣವೊಂದೇ ವಸ್ತುಸತ್ಯ ಎಂದು ನಂಬಿಕೊಂಡಂಥ ವರು ಮಾತ್ರ ಇತರೆ ರಾಮಾಯಣಗಳಲ್ಲಿ ಕಂಡುಬರುವ ಭಿನ್ನತೆಗಳು ಆಯಾ ಮತ ಸಂಪ್ರದಾಯದವರು ಮಾಡಿಕೊಂಡಂಥ ಬದಲಾವಣೆಗಳು ಎಂದು ಹೇಳುತ್ತಾರೆ, ಅಷ್ಟೆ.

ಚರಿತ್ರೆಯಲ್ಲಿ ನಾವು ಓದಿದಂತೆ ನಮ್ಮ ಪೂರ್ವಜರು ಅನೇಕ ದೇಶಗಳೊಡನೆ ವಾಣಿಜ್ಯ ವ್ಯವಹಾರವನ್ನು ಹೊಂದಿದ್ದರು. ಅವರು ವಾಣಿಜ್ಯ ಸರಕುಗಳೊಂದಿಗೆ ಪರದೇಶಗಳಿಗೆ ಧರ್ಮವನ್ನೂ ರಫ್ತು ಮಾಡಿದರೆಂದು ತಿಳಿದುಬರುತ್ತದೆ. ಹೀಗಾಗಿ ಏಷಿಯಾ ಖಂಡದ ಅನೇಕ ರಾಷ್ಟ್ರಗಳಲ್ಲಿ ರಾಮ ಕಥೆಯು ವ್ಯಾಪಿಸಿತು. ಈ ದಿನ ಶ್ರೀಲಂಕಾ, ಕಾಂಬೋಡಿಯಾ, ಟಿಬೆಟ್, ಮಂಗೋಲಿಯಾ, ಸೈಬೀರಿಯ, ಥಾಯ್ಲೆಂಡ್, ಇಂಡೋನೇಷಿಯಾ, ಮಲೇಷಿಯಾ, ಜಪಾನ್, ಚೀನಾ ಮುಂತಾದ ಅನೇಕ ದೇಶಗಳಲ್ಲಿ ಜಾನಪದ ಗಾಥೆಯಾಗಿ ರಾಮಕಥೆಯು ಪ್ರಚಾರದಲ್ಲಿದೆ. ಈ ಎಲ್ಲ ಕತೆಗಳು ವಾಲ್ಮೀಕಿ ರಾಮಾಯಣದಲ್ಲಿ ಇಲ್ಲದ ಅನೇಕ ಅಂಶಗಳನ್ನು ಒಳಗೊಂಡಿರುವುದು ಒಂದು ವಿಶೇಷ.

ಇಂದು ಥಾಯಲೆಂಡ್ ಎಂದು ಗುರುತಿಸಲ್ಪಡುವ ದೇಶವು ಹಿಂದೆ ಸಯಾಂ ಎಂದು ಕರೆಸಿಕೊಳ್ಳುತ್ತಿತ್ತು. ಆ ಸಯಾಂನಲ್ಲಿ ಅಯೋಧ್ಯಾ ಎಂಬ ಪಟ್ಟಣವಿದೆ. ಇದು ಬ್ಯಾಂಕಾಕ್‌ದಿಂದ ಉತ್ತರಕ್ಕೆ ಸುಮಾರು ೭೦ ಕಿ.ಮೀ. ದೂರದಲ್ಲಿದೆ. ಸಯಾಂ ದೇಶಕ್ಕೆ ಅಯೋಧ್ಯೆಯೇ ರಾಜಧಾನಿ. ಕ್ರಿ.ಶ. ೧೩೫೦ರಿಂದ ೧೭೬೭ರವರೆಗೆ ಅಂದರೆ ೪೧೭ ವರ್ಷಗಳವರೆಗೆ ಬೇರೆ ಬೇರೆ ರಾಜಮನೆತನಕ್ಕೆ ಸೇರಿದ ೩೭ ಜನ ರಾಜರು ಈ ಅಯೋಧ್ಯೆಯಲ್ಲಿಯೇ ಪಟ್ಟ ಕಟ್ಟಿಕೊಂಡು ರಾಜ್ಯವಾಳಿದ್ದಾರೆ. ಇನ್ನೊಂದು ವಿಶೇಷವೆಂದರೆ ಇಲ್ಲಿ ರಾಜ್ಯವಾಳಿದ ರಾಜರುಗಳೆಲ್ಲ ರಾಮನ ಭಕ್ತರೇ ಆಗಿದ್ದು ಅವರೆಲ್ಲ ರಾಮನಾಮ ಧಾರಿಗಳೇ ಆಗಿದ್ದರು. ಉದಾ : ರಾಮಾಧಿಬೋಧಿ, ರಾಮೇಶ್ವರ, ರಾಮರಾಜ, ರಾಮಾಧಿ ಪತಿ ಮುಂತಾಗಿ ಅವರ ಹೆಸರುಗಳಾಗಿವೆ.

೧೮ನೆಯ ಶತಮಾನದಲ್ಲಿ ಆಳಿದ ಚಕ್ರಿ ವಂಶದ ರಾಜರುಗಳು ಒಂದನೆಯ ರಾಮ, ಎರಡನೆಯ ರಾಮ, ಮೂರನೆಯ ರಾಮ ಎಂದು ಗುರುತಿಸಲ್ಪಡುತ್ತಾರೆ. ಹೀಗಿರುವಾಗ ರಾಮಜನ್ಮ-ಭೂಮಿಯ ಕುರಿತು ಹುಯಿಲೆದ್ದಿರುವ ಈ ದಿನಗಳಲ್ಲಿ ರಾಮನು ಐತಿಹಾಸಿಕ ವ್ಯಕ್ತಿಯೇ ಆಗಿದ್ದಲ್ಲಿ ಆತ ಹುಟ್ಟಿದ್ದು ಯಾವ ಅಯೋಧ್ಯೆಯಲ್ಲಿ ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ.

ಇಲ್ಲಿ ನಾವು ಚರ್ಚಿಸಬೇಕೆಂದಿರುವ ವಿಷಯ ವಾಲ್ಮೀಕಿ ರಾಮಾಯಣದ ವಿಪರ್ಯಾಸ ಗಳನ್ನು ಕುರಿತಲ್ಲ, ರಾಮ ಕಥೆಯಲ್ಲಿ ಬರುವ ಪಾತ್ರಗಳ ವೈಚಿತ್ರ್ಯಗಳನ್ನು ಕುರಿತು. ಇಲ್ಲಿ ಎಲ್ಲ ಪಾತ್ರಗಳನ್ನು ಕುರಿತು ಚರ್ಚಿಸಲು ಸಾಧ್ಯವಿಲ್ಲದ ಕಾರಣ ಸೀತೆಯನ್ನು ಕುರಿತು ಆದಷ್ಟು ಸಂಕ್ಷಿಪ್ತವಾಗಿ ಚರ್ಚಿಸಲು ಪ್ರಯತ್ನಿಸಲಾಗಿದೆ. "ಸೀತಾ" ಕ್ರಮವಾಗಿ ಬೆಳೆದುಬಂದ ಬಗೆಯನ್ನು ಒಂದಿಷ್ಟು ಪರ್ಯಾಲೋಚಿಸಿ ನಂತರ ಸ್ಥೂಲವಾಗಿ ವಿವಿಧ ರಾಮಕಥೆಗಳ ಹಿನ್ನೆಲೆಯಲ್ಲಿ ಸೀತೆ ರಾಮನಿಗೆ ಏನಾಗಬೇಕು ಎಂಬ ವಿಚಾರವನ್ನು ನೋಡೋಣ.

ವೈದಿಕ ಸಾಹಿತ್ಯದಲ್ಲಿ ಇಬ್ಬರು ಸೀತೆಯರ ಉಲ್ಲೇಖ ಸಿಗುತ್ತದೆ. ಮೊದಲನೆಯ ಸೀತೆ ಕೃಷಿಯ ಒಬ್ಬ ಅಧಿದೇವತೆ. ಋಗ್ವೇದದಿಂದ ಹಿಡಿದು ಇಡೀ ವೈದಿಕ ಸಾಹಿತ್ಯದಲ್ಲಿ ಅನೇಕ ಕಡೆಗಳಲ್ಲಿ ಈ ಸೀತೆಯ ಉಲ್ಲೇಖ ಬರುತ್ತದೆ. ಎರಡನೆಯ ಸೀತೆಯ ಪರಿಚಯ ನಮಗೆ ಕೃಷ್ಣಯಜುರ್ವೇದದ ತೈತ್ತಿರೀಯ ಬ್ರಾಹ್ಮಣದಿಂದ ಲಭ್ಯವಾಗುತ್ತದೆ. ಇಲ್ಲಿ ಸೀತಾಸಾವಿತ್ರಿ, ಸೂರ್ಯನ ಪುತ್ರಿ ಮತ್ತು ಸೋಮರಾಜನ ಉಪಾಖ್ಯಾನದ ರೂಪದಿಂದ ಒಂದಿಷ್ಟು ವಿಸ್ತಾರಪೂರ್ವಕವಾದ ಮಾಹಿತಿಯೆ ಇದೆ. ಈ ಒಂದು ಆಧಾರ ಬಿಟ್ಟರೆ ಈ ಸೀತೆಯ ಉಲ್ಲೇಖ ವೈದಿಕ ಸಾಹಿತ್ಯದಲ್ಲಿ ಬೇರೆಲ್ಲಿಯೂ ದೊರೆಯುವುದಿಲ್ಲ.

ಈ ಕಥೆಯ ಪ್ರಕಾರ ಸೀತಾಸಾವಿತ್ರಿ ಹಾಗೂ ಶ್ರದ್ಧಾ ಇವರು ಪ್ರಜಾಪತಿಯ

ಪುತ್ರಿಯರು. ಈ ಪ್ರಜಾಪತಿಯನ್ನು ಸಾಯಣರು ಸವಿತಾ ಅರ್ಥಾತ್ ಸೂರ್ಯದೇವತೆಯ ಪರ್ಯಾಯನಾಮವೆಂದು ಹೇಳುತ್ತಾರೆ. ಇಲ್ಲಿ ಸೀತೆಯು ಸೋಮರಾಜನನ್ನು ಪ್ರೀತಿಸುತ್ತಾಳೆ. ಆದರೆ ಸೋಮರಾಜನು ಸೀತೆಯ ಸೋದರಿಯಾದ ಶ್ರದ್ಧೆಯನ್ನು ಪ್ರೀತಿಸುತ್ತಾನೆ. ಸೀತೆ ತನ್ನ ತಂದೆಯ ಹತ್ತಿರ ಹೋಗಿ ತನ್ನ ಮನದ ಇಂಗಿತವನ್ನು ಹೇಳುತ್ತಾಳೆ. ತಂದೆಯಾದ ಪ್ರಜಾಪತಿಯು ಸೀತೆಗಾಗಿ ಸ್ಥಾಗರ ಎಂಬ ದ್ರವ್ಯದಿಂದ ಅಂಗರಾಗವನ್ನು ತಯಾರಿಸಿ ಮಂತ್ರಗಳಿಂದ ಅಭಿಮಂತ್ರಿಸಿ ಅದರಲ್ಲಿ ಸಮ್ಮೋಹಿನಿ ಶಕ್ತಿಯನ್ನು ತುಂಬಿ ಮಗಳ ಮುಖಕ್ಕೆ ಲೇಪಿಸುತ್ತಾನೆ. ಈ ರೀತಿಯಾಗಿ ಅಲಂಕೃತಳಾದ ಸೀತೆಯಲ್ಲಿ ಸೋಮರಾಜನು ಮೋಹಿತನಾಗಿ ಆಕೆ ಬೇಡಿದ್ದನ್ನೆಲ್ಲ ಕೊಟ್ಟುಬಿಡುತ್ತಾನೆ. ಈ ಕಥೆಗೂ ವಾಲ್ಮೀಕಿ ರಾಮಾಯಣಕ್ಕೂ ಯಾವುದೇ ಸಂಬಂಧವಿಲ್ಲ. ಆದರೂ ಅತ್ರಿಯ ಪತ್ನಿಯಾದ ಅನಸೂಯಾಳು ಸೀತೆಗೆ ನೀಡಿದ ಉಡುಗೊರೆಗಳಲ್ಲಿ ಒಂದು ಅವಿನಶ್ವರವಾದ ಅಂಗರಾಗವನ್ನೂ ನೀಡುತ್ತಾಳೆ. ಅದರಿಂದ ಸೀತೆಯ ದೇಹವು ದಿವ್ಯ ಸೌಂದರ್ಯದಿಂದ ಕಂಗೊಳಿಸುತ್ತದೆ ಎಂಬ ಉಲ್ಲೇಖ ಬರುತ್ತದೆ. ಇದನ್ನು ನಾವು ಗಮನಿಸಬೇಕು.

ಕೃಷಿಯ ಅಧಿದೇವತೆಯಾಗಿ ಸೀತೆಯನ್ನು ಉಪಾಸನೆಗೈಯುವುದು ಸೀತೆಯ ಇನ್ನೊಂದು ರೂಪ. ವೇದಕಾಲದ ಆರಂಭದಲ್ಲಿ ಪ್ರಮುಖವಾಗಿ ಆರಾಧಿಸಲ್ಪಡುತ್ತಿದ್ದ ದೇವತೆಗಳೆಂದರೆ ಪ್ರಕೃತಿ ದೇವತೆಗಳು. ಕಾರ್ಯಕ್ಷೇತ್ರಕ್ಕೆ ಅನುಗುಣವಾಗಿ ಅವರಲ್ಲಿ ಮೂರು ವರ್ಗಗಳನ್ನು ಮಾಡಲಾಗಿದೆ – ದ್ಯುಲೋಕದ ದೇವತೆಗಳು, ಅಂತರಿಕ್ಷದ ದೇವತೆಗಳು ಮತ್ತು ಭೂಲೋಕದ ದೇವತೆಗಳು. ಋಗ್ವೇದದಲ್ಲಿ ಇಂದ್ರ, ಅಗ್ನಿ ಮತ್ತು ಸೋಮ ಅಥವಾ ಸೋಮಲತೆಯ ಮಾದಕ ರಸದ ದೇವತೆ ಇವರ ಉಲ್ಲೇಖ ಪ್ರಮುಖವಾಗಿದೆ. ಸೂರ್ಯ, ದ್ಯೌ, ವಾಯು, ಉಷಸ್, ವರುಣ, ಮಿತ್ರ, ಪರ್ಜನ್ಯ ಮುಂತಾದ ಅನೇಕ ದೇವತೆಗಳ ಉಲ್ಲೇಖಗಳೂ ಇವೆ. ಈ ದೇವತೆಗಳಲ್ಲದೆ ಇನ್ನೊಂದು ಬಗೆಯ ದೇವತೆಗಳನ್ನು ಕಲ್ಪಿಸಲಾಗಿದೆ. ಅವರ ಕಾರ್ಯ ಕ್ಷೇತ್ರ ಸೀಮಿತವಾದುದು. ಇವರಲ್ಲಿ ಕ್ಷೇತ್ರಪತಿ, ವಾಸ್ತೋಷ್ಪತಿ, ಸೀತಾ ಮತ್ತು ಉರ್ವರಾ ಪ್ರಮುಖರು. ಆರ್ಯರ ದೃಷ್ಟಿಯಲ್ಲಿ ಇವರು ಅಷ್ಟೊಂದು ಮಹತ್ವದ ದೇವತೆಗಳಲ್ಲ, ಯಾಕೆಂದರೆ ಇವರೆಲ್ಲ ಮುಖ್ಯವಾಗಿ ಕೃಷಿಗೆ ಸಂಬಂಧಿಸಿದ ದೇವತೆಗಳು. ಆರ್ಯರಿಗೆ ಕೃಷಿಗಿಂತಲೂ ಪಶುಪಾಲನೆಯು ಮುಖ್ಯವಾಗಿತ್ತು. ಆದರೂ ಋಗ್ವೇದದಲ್ಲಿ (೪.೫೭) ಒಂದೇ ಒಂದು ಸೂಕ್ತದಲ್ಲಿ ಸೀತೆಯ ಉಲ್ಲೇಖವಾಗಿದ್ದು ಅದು ವ್ಯಕ್ತಿ ಹಾಗೂ ದೇವತ್ವದ ರೂಪದಲ್ಲಿ ನಿರೂಪಿತವಾಗಿದೆ. ಸೀತೆಯನ್ನು ಉಲ್ಲೇಖಿಸಿರುವ ಆ ಸೂಕ್ತದಲ್ಲಿ ಕೃಷಿಗೆ ಸಂಬಂಧಿಸಿದ ಅನೇಕ ದೇವತೆಗಳ ಕುರಿತು ಪ್ರಾರ್ಥನೆಗಳಿವೆ. ಸೀತೆಗೆ ಸಂಬಂಧಿಸಿದ ಪ್ರಾರ್ಥನೆ ಈ ರೀತಿಯಾಗಿದೆ :

ಅರ್ವಾಚೀ ಸುಭಗೇ ಭವ ಸೀತೇ ವಂದಾಮಹೇ ತ್ವಾ ।
ಯಥಾ ನಃ ಸುಭಗಾಸಸಿ ಯಥಾ ನಃ ಸುಫಲಾಸಸಿ ॥೬॥
ಇಂದ್ರಃ ಸೀತಾಂ ನಿಗೃಹ್ಣಾತು ತಾಂ ಪೂಷಾನು ಯಚ್ಛತು ।
ಸಾ ನಃ ಪಯಸ್ವತೀ ದುಹಾಮುತ್ತರಾಮುತ್ತರಾಂ ಸಮಾಮ್ ॥೭॥

(ಹೇ ಸೌಭಾಗ್ಯವತಿಯೇ! ಕೃಪೆ ಮಾಡಿ ನಮಗೆ ಅಭಿಮುಖಳಾಗು. ಹೇ ಸೀತೆ! ನಾವು ನಿನ್ನನ್ನು ವಂದಿಸುತ್ತೇವೆ. ನೀನು ನಮಗಾಗಿ ಸುಂದರವಾದ ಧನವನ್ನು ಮತ್ತು ಫಲವನ್ನು ನೀಡುವಂಥವಳಾಗು. ।೬। ಇಂದ್ರನು ಸೀತೆಯನ್ನು ಗ್ರಹಣ ಮಾಡಲಿ, ಪೂಷಾ (ಸೂರ್ಯನು) ಆಕೆಯನ್ನು ಸಂಚಾಲಿಸಲಿ. ಜಲಭರಿತಳಾದ ಸೀತೆ ಪ್ರತಿ ವರ್ಷವೂ ನಮಗೆ ಧಾನ್ಯವನ್ನು ದಯಪಾಲಿಸುತ್ತಿರಲಿ. ।೭।). ಈ ಸೂಕ್ತದ ಮಹತ್ವವೇನೆಂದರೆ ಸೀತೆಯನ್ನು ಕುರಿತಾದ ಅತಿ ಪ್ರಾಚೀನವಾದ ಪ್ರಾರ್ಥನೆ ಈ ಸೂಕ್ತದಲ್ಲಿ ರಕ್ಷಿಸಲ್ಪಟ್ಟಿದೆ.

ಸೀತೆಯನ್ನು ಕುರಿತಾದ ವೈದಿಕ ಸಾಹಿತ್ಯದಲ್ಲಿ ದೊರೆಯುವ ಪ್ರಾರ್ಥನೆಯು ''ಸೀರಾ ಯುಂಜಂತಿ'' ಮಂತ್ರದ ಅಂಶವಾಗಿದೆ. ಈ ಮಂತ್ರವು ಯಜುರ್ವೇದ ಹಾಗೂ ಅಥರ್ವವೇದ ಎರಡರಲ್ಲಿಯೂ ಕಾಣಸಿಗುತ್ತದೆ. ಆದರೆ ಯಜುರ್ವೇದದ ಉಲ್ಲೇಖವು ಕೃಷಿಗೆ ಹೊರತಾಗಿ ಬೇರೆ ಪ್ರಸಂಗದಲ್ಲಾಗಿದ್ದು ಅದು ಮೌಲಿಕವಾಗಿಲ್ಲ ಎಂದು ಅಭಿಪ್ರಾಯಪಡಲಾಗುತ್ತದೆ. ಮೇಲೆ ಉಲ್ಲೇಖಿಸಿದ ಋಗ್ವೇದದ ಎರಡು ಮಂತ್ರಗಳಿಂದಲೇ ಉದ್ಧರಿಸಿ ಅಥರ್ವವೇದವು 'ಸೀರಾ ಯುಂಜಂತಿ' ಮಂತ್ರದಲ್ಲಿ ಹೇಳಿದೆ. ಅದು ಹೀಗಿದೆ :

ಇಂದ್ರಃ ಸೀತಾಂ ನಿಗೃಹ್ಣಾತು ತಾಂ ಪೂಷಾಭಿ ರಕ್ಷತು
ಸಾ ನಃ ಪಯಸ್ವತೀ ದುಹಾಮುತ್ತರಾಮುತ್ತರಾಂ ಸಮಾಮ್ ॥೪॥
..........................................................
ಸೀತೆ ವಂದಾಮಹೇ ತ್ವಾರ್ವಾಚೀ ಸುಭಗೇ ಭವ ।
ಯಥಾ ನಃ ಸುಮನಾ ಅಸೋ ಯಥಾ ನಃ ಸುಫಲಾ ಭುವಃ ॥೮॥
ಘೃತೇನ ಸೀತಾ ಮಧುನಾ ಸಮಕ್ತಾ ವಿಶ್ವೈರ್ದೇವೈರನುಮತಾ ಮರುದ್ಭಿಃ ।
ಸಾ ನಃ ಸೀತೇ ಪಯಸಾಭ್ಯಾವವೃತ್ಸ್ವೋರ್ಜಸ್ವತೀ ಘೃತವತ್ಪಿನ್ವ ಮಾನಾ ॥೯॥

ವೈದಿಕ ಸಾಹಿತ್ಯಕ್ಕಿಂತಲೂ ಗೃಹ್ಯಸೂತ್ರಗಳಲ್ಲಿ ಸೀತೆಗೆ ಸಂಬಂಧಿಸಿದ ವಿಸ್ತಾರವಾದ ಆಕರಗಳು ದೊರೆಯುತ್ತವೆ. ಇದರ ಅರ್ಥ ಏನೆಂದರೆ ವೈದಿಕ ಕಾಲದ ಕೊನೆಕೊನೆಗೆ ಕೃಷಿಗೆ ಹೆಚ್ಚಿನ ಮಹತ್ವ ದೊರೆಯ ಹತ್ತಿತು. ಕೃಷಿಕರ್ಮಗಳಲ್ಲಿ ಸೀತೆಯನ್ನು ಪ್ರಾರ್ಥಿಸಲಾಗುತ್ತಿತ್ತು. ಇಲ್ಲಿ ಒಂದು ಮಾತನ್ನು ನೆನಪಿನಲ್ಲಿ ಇಡಬೇಕು. ಸೀತೆಯೊಬ್ಬಳೇ ಕೃಷಿ ದೇವತೆಯಾಗಿರಲಿಲ್ಲ. ಆದರೆ ಆಕೆಯ ಸ್ಮರಣೆ ಅನೇಕ ಕಡೆಗಳಲ್ಲಿ ಆಗಿದೆ. ಕೃಷಿಕರ್ಮದ ಅನೇಕ ಕ್ರಿಯೆಗಳಲ್ಲಿ ಅನೇಕ ಬಗೆಯಾಗಿ ಸೀತೆಯನ್ನು ಪ್ರಾರ್ಥಿಸಲಾಗಿದೆ. ನೇಗಿಲು ಹೂಡುವಾಗ, ಉತ್ತು ಬಿತ್ತಿದ ಹೊಲದ ಪೂಜೆ ಮಾಡುವಾಗ, ಬೀಜ ಬಿತ್ತುವಾಗ, ರಾಶಿ ಮಾಡುವಾಗ, ಖಣದಲ್ಲಿ ದವಸಧಾನ್ಯವನ್ನು ಹಸನು ಮಾಡುವಾಗ, ಹೀಗೆ ಅನೇಕ ಸಂದರ್ಭಗಳಲ್ಲಿ ಸೀತೆಯನ್ನು ಪ್ರಾರ್ಥಿಸಲಾಗುತ್ತದೆ. ಕೌಶಿಕ ಸೂತ್ರದ ಹದಿಮೂರನೆಯ ಅಧ್ಯಾಯದಲ್ಲಿ ಸೀತೆಯನ್ನು ಕುರಿತು ಸುದೀರ್ಘವಾದ ಪ್ರಾರ್ಥನೆ ಇದೆ. ಈ ಪ್ರಾರ್ಥನೆಯಲ್ಲಿ ಸರ್ವಾಂಗ ಶೋಭಿಣೆ, ಹಿರಣ್ಯಮಯವಾದ ಮಾಲೆಯನ್ನು ಧರಿಸುವಂಥವಳು, ಕಾಲನೇತ್ರಳು, ಶ್ಯಾಮಲೆಯು, ಹಿರಣ್ಯಮಯಳು, ಪರ್ಜನ್ಯಪತ್ನಿಯಾದ ಸೀತೆಯನ್ನು ಮಾನವೀಕರಿಸಲಾಗಿದೆ. ವೇದಕಾಲದಲ್ಲಿ ರಾಮನು ರಾಮಾಯಣ ಕಾಲದ ರಾಮನಾಗಿ ರೂಪುಗೊಂಡಿರಲೇ ಇಲ್ಲ ಎಂಬ ಅಂಶ ಇಲ್ಲಿ ಮುಖ್ಯವಾದುದು. ಆದ್ದರಿಂದ ಸೀತೆಯು ಇಂದ್ರನ ಪತ್ನಿ ಎಂಬ ಉಲ್ಲೇಖವೇ ನಮಗೆ ಕಾಣಸಿಗುತ್ತದೆ.

ವಾಲ್ಮೀಕಿ ರಾಮಾಯಣದಲ್ಲಿಯೂ ಸೀತೆಯು ಭೂಮಿಗೆ ಸಂಬಂಧಿಸಿದ ವ್ಯಕ್ತಿ ಎಂಬ ಕಲ್ಪನೆಗೆ ಆಧಾರ ದೊರೆಯುತ್ತದೆ. ಸೀತೆಯ ಹುಟ್ಟು, ಆಕೆ ಕೊನೆಗೆ ಭೂಮಿಯಲ್ಲಿ ಸೇರಿ ಹೋಗುವುದು ಇದನ್ನೇ ಸಂಕೇತಿಸುತ್ತವೆ. ಈಗ ನಾವು ರಾಮಾಯಣಗಳಲ್ಲಿಯ ಸೀತೆಯ ಕುರಿತು ಪರಿಶೀಲಿಸುವ. ಈ ಲೇಖನದ ತಲೆಬರಹವೇ 'ರಾಮಾಯಣಗಳು' ಅಂದರೆ ಒಂದೇ ರಾಮಾಯಣವಲ್ಲ, ಅನೇಕ ರಾಮಾಯಣಗಳು ಎಂದು ಅರ್ಥ. ವಾಲ್ಮೀಕಿ ಬರೆದದ್ದೊಂದೇ ರಾಮಾಯಣವಲ್ಲ; ಅದಕ್ಕೆ ಹೊರತಾಗಿ ಇನ್ನೂ ಅನೇಕ ರಾಮಾಯಣಗಳಿವೆ. ಆ ರಾಮಾಯಣಗಳ ಪ್ರಕಾರ ಸೀತೆ ರಾಮನಿಗೆ ಏನಾಗಬೇಕು ಎಂಬ ಪ್ರಶ್ನೆಯನ್ನು ಪರಿಶೀಲಿಸೋಣ. 'ಬೆಳತನಕ ರಾಮಾಯಣ ಕೇಳಿ ರಾಮನಿಗೆ ಸೀತೆ ಏನಾಗಬೇಕು' ಎಂದು ಕೇಳಿದರಂತೆ ಎಂಬ ಮಾತೊಂದಿದೆ. ಹಾಗೆ ಕೇಳುವವರು ಮೂರ್ಖರು ಎಂದೇ ನಾವೆಲ್ಲ ತಿಳಿದಿರುವುದು. ಆದರೆ ಬೇರೆ ಬೇರೆ ರಾಮಾಯಣಗಳನ್ನು ನೋಡಿದಾಗ ಈ ಪ್ರಶ್ನೆ ಎಷ್ಟು ಅರ್ಥಪೂರ್ಣ ಎಂಬ ಅಂಶ ಗಮನಕ್ಕೆ ಬಾರದೆ ಇರದು.

ಎಷ್ಟೋ ಬೌದ್ಧ ರಾಮಾಯಣಗಳಿವೆ ಎಂದು ನಾವು ಹೇಳುತ್ತೇವೆ. ಅವುಗಳಲ್ಲಿ ಅತಿ ಪ್ರಾಚೀನವಾದ ರಾಮಕಥೆಗೆ ಸಂಬಂಧಿಸಿದ ಚೀಣೀ ಭಾಷೆಯ ಅನುವಾದಗಳು ದೊರೆಯುತ್ತವೆ. ಅವುಗಳಲ್ಲಿ 'ಅನಾಮಕಂ ಜಾತಕಂ' ಎಂಬುದೂ ಒಂದು. ಈ ರಾಮಕಥೆಯಲ್ಲಿ ರಾಮಾಯಣದ ಬೀಜ ಕಂಡುಬರುತ್ತದೆ. 'ಅನಾಮಕಂ ಜಾತಕಂ'ದಲ್ಲಿ ಲಕ್ಷ್ಮಣ, ಭರತ, ಶತ್ರುಘ್ನ, ಹನುಮಂತ, ಅಂಗದ, ವಾಲಿ ಮುಂತಾದ ಪಾತ್ರಗಳಾವುವೂ ಇಲ್ಲ. ಯತಿ ವೇಷದಲ್ಲಿ ಸೀತೆಯ ಅಪಹರಣ, ಸೇತುಬಂಧ, ರಾಕ್ಷಸರ ಮಾಯಾಯುದ್ಧ ಮುಂತಾದ ವಾಲ್ಮೀಕಿ ರಾಮಾಯಣದ ಸಂಗತಿಗಳು ಬೀಜರೂಪವಾಗಿ ಇದರಲ್ಲಿ ಇವೆ. ಸೀತೆಯ ಹುಟ್ಟು ಮುಂತಾದ ವಿಚಾರಗಳು ಇಲ್ಲಿ ಇಲ್ಲ.

'ದಶರಥ ಜಾತಕ' ಎಂಬುದು ಪಾಲಿ ಭಾಷೆಯ 'ಜಾತಕಟ್ಠವಣ್ಣನಾ' ಎಂಬ ಗ್ರಂಥದಲ್ಲಿ ಸುರಕ್ಷಿತವಾಗಿದೆ. ದಶರಥ ಜಾತಕದ ಪ್ರಕಾರ ರಾಮ, ಲಕ್ಷ್ಮಣ ಮತ್ತು ಸೀತೆ ಮೂವರೂ ಒಂದೇ ತಾಯಿಯ ಮಕ್ಕಳು. ಜೈನರ ೪೫ ಪವಿತ್ರ ಗ್ರಂಥಗಳಲ್ಲಿ 'ಜಂಬೂ ದ್ವೀಪ ಪ್ರಜ್ಞಪ್ತಿ' ಎಂಬುದೂ ಒಂದು. ಅದರಲ್ಲಿ ಮನುಷ್ಯರನ್ನು ಯುಗಳರು ಎಂದು ಕರೆಯಲಾಗುತ್ತಿತ್ತೆಂದು ಹೇಳಲಾಗಿದೆ. ಯಾಕೆಂದರೆ ಎಲ್ಲರಿಗೂ ಒಬ್ಬ ಮಗ ಮತ್ತು ಒಬ್ಬ ಮಗಳು ಹುಟ್ಟುತ್ತಿದ್ದರು. ಆ ಏಕೋದರರು ಬೆಳೆದು ದೊಡ್ಡವರಾದ ಮೇಲೆ ಗಂಡ-ಹೆಂಡತಿಯಾಗಿ ಜೀವನ ನಡೆಸುತ್ತಿದ್ದರು. ಪ್ರಕೃತಿಯಲ್ಲಿ ಇದು ಸಹಜ ಎಂದು ರಾಬರ್ಟ ಬ್ರಿಫಾಲ್‌ಟ್ಸ್ ಎನ್ನುವ ವಿದ್ವಾಂಸನು ಹೇಳುತ್ತಾನೆ. ಆತನ ಪ್ರಕಾರ, ''ಸಾಧಾರಣವಾಗಿ ಆಫ್ರಿಕನ್ ರೀಡಬಕ್ ಎಂಬ ಪ್ರಾಣಿಯು ಒಂದು ಗರ್ಭದಲ್ಲಿ ಎರಡು ಮರಿಗಳನ್ನು ಈಯುತ್ತದೆ – ಒಂದು ಗಂಡು, ಒಂದು ಹೆಣ್ಣು. ಆ ಮರಿಗಳು ಬೆಳೆದು ಒಂದರೊಡನೊಂದು ಕೂಡಿ ವಂಶವನ್ನು ಮುಂದುವರಿಸಿಕೊಂಡು ಹೋಗುತ್ತವೆ. ಜಿಂಕೆಗಳಲ್ಲೂ ಚಿಕ್ಕ ಜಾತಿಗಳಲ್ಲಿ ಇದೇ ವಾಸ್ತವವೆಂದು ಕಂಡು ಬರುತ್ತದೆ. ಕೆಂಪು ಜಿಂಕೆಗಳಲ್ಲೂ ಇದೇ ನಿತ್ಯ ನಿಯಮ. ಹೆಣ್ಣು ಹುಲಿಯೂ ಸಾಧಾರಣವಾಗಿ ಎರಡು ಮರಿಗಳನ್ನು ಈಯುತ್ತದೆ – ಒಂದು ಗಂಡು, ಒಂದು ಹೆಣ್ಣು. ಲೈಂಗಿಕವಾಗಿ ದೊಡ್ಡವಾಗುವವರೆಗೆ ತಾಯಿಯ ಜೊತೆಗಿದ್ದು ಅನಂತರ ತಾವೇ ಜೊತೆಗೂಡಿ ಜೀವನ ನಡೆಸುತ್ತವೆ'' (Robert Briffaults : *The Mothers; Vol. 1,*



# ನಾನು

ಎದೆಯ ಬೆಳಕನ್ನು ನಂಬಿದ
ಮನುಜನಲ್ಲಿ ದೇವನ
ಅರಸುವವ ನಾನು;
ದೇಗುಲದಲ್ಲಲ್ಲ.

ಹೊಟ್ಟೆಪಾಡಿಗೆ ತಂತ್ರಗಳ
ಹೆಣೆಯುವ ಅರ್ಚಕನ ಸಂಕಟ
ಗಮನಿಸುವವ ನಾನು;
ಪೂಜಾರತಿಯನ್ನಲ್ಲ.

ಕಗ್ಗಲ್ಲ ಕೆತ್ತಿ ಚಂದದ ಕಲೆಯ
ಅರಳಿಸುವ ಶಿಲ್ಪಿಯ ಕೈಚಳಕ
ಅರಿಯುವವ ನಾನು;
ದೈವೀ ಪವಾಡವನ್ನಲ್ಲ.

ದರ್ಶನಕ್ಕೆ ದುಡ್ಡು ತೆತ್ತು ಕ್ಯೂನಿಂತು.
ಧನ್ಯರಾದ ಭಕ್ತರ ಪರದಾಟ ಕಂಡು
ಕನಿಕರಿಸುವವ ನಾನು;
ನೇಣಿಗೆ ಕೊರಳೊಡ್ಡುವವನಲ್ಲ.

ಗುಡಿಗೋಪುರಕ್ಕೆ ಚಂದಾ ಎತ್ತುವವರ
ಗಿಮ್ಮಿಕ್ಕುಗಳಿಂದ ಚರಿತ್ರೆಯ ಪಾಠ
ಕಲಿಯುವವ ನಾನು;
ಧರ್ಮಶಾಸ್ತ್ರದ ನಮ್ರ ಹಿಂಬಾಲಕನಲ್ಲ!

**ಡಾ|| ಎಚ್. ಎನ್. ಮಂಜುರಾಜ್**
ಕನ್ನಡ ಅಧ್ಯಾಪಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕೃಷ್ಣರಾಜನಗರ-೫೭೧ ೬೦೨

*p. 205*). ಪ್ರಕೃತಿಯಲ್ಲಿ ಕಂಡುಬರುವ ಈ ಯುಗಳ ಸಂಬಂಧವನ್ನು ಜೈನರು ಬಹುಶಃ ತಮ್ಮ ಕಥೆಗಳಲ್ಲಿ ಯಥಾವತ್ತಾಗಿ ಬಳಸಿಕೊಂಡರೆಂದು ಕಾಣುತ್ತದೆ.

ಸೀತೆಯು ದಶರಥನ ಮಗಳು ಎಂಬ ವಿಚಾರ ಇಂಡೋನೇಷಿಯಾದ ಜಾವಾದಲ್ಲಿ ಪ್ರಚಲಿತವಿರುವ **'ರಾಮ ಕೇಲಿಂಗ'**, ಮಲಯದ **'ಸೇರೀ ರಾಮ'** ಮತ್ತು **'ಹಿಕಾಯದ ಮಹಾರಾಜ ರಾವಣ'** ಎಂಬ ರಾಮಕಥೆಗಳಲ್ಲಿ ಕಾಣಬರುತ್ತದೆ. ಈ ಕಥೆಗಳ ಪ್ರಕಾರ ಮಂಡೋದರಿಯು ದಶರಥನ ಪಟ್ಟದ ರಾಣಿ. ಆಕೆಯ ಸೌಂದರ್ಯದ ಸಂಗತಿ ತಿಳಿದು ರಾವಣನು ದಶರಥನಲ್ಲಿಗೆ ಬಂದು ಮಂಡೋದರಿಯನ್ನು ದಯಪಾಲಿಸಬೇಕೆಂದು ಕೇಳುತ್ತಾನೆ. ದಶರಥ ಆಗಲಿ ಎಂದು ಹೇಳುತ್ತಾನೆ. ಆದರೆ ಮಂಡೋದರಿಗೆ ಇದು ಇಷ್ಟ ಇರುವುದಿಲ್ಲ. ಆಕೆ ಒಬ್ಬ ಮಾಯಾ ಮಂಡೋದರಿಯನ್ನು ನಿರ್ಮಿಸಿ ರಾವಣನ ಜೊತೆಗೆ ಕಳಿಸುತ್ತಾಳೆ. ಈ ವಿಚಾರ ಆಮೇಲೆ ದಶರಥನಿಗೆ ತಿಳಿಯುತ್ತದೆ. ಮಾಯಾ ಮಂಡೋದರಿಯು ಅಕ್ಷತಯೋನಿಯಾದುದರಿಂದ ಆಕೆ ನಿಜವಾದ ಮಂಡೋದರಿಯಲ್ಲ ಎಂಬ ಸಂಗತಿ ರಾವಣನಿಗೆ ಗೊತ್ತಾಗಿ, ತನಗೆ ಮೋಸ ಮಾಡಲಾಗಿದೆ ಎಂದು ಆತ ತಿಳಿಯುತ್ತಾನೆ ಎಂದು ಹೆದರಿ ದಶರಥನು ರಾತ್ರಿ ಆಕಾಶಮಾರ್ಗದಿಂದ ಲಂಕೆಗೆ ಹೋಗಿ ಮಾಯಾ ಮಂಡೋದರಿಯನ್ನು ಭೋಗಿಸುತ್ತಾನೆ. ಆಮೇಲೆ ರಾವಣನೊಂದಿಗೆ ಆಕೆಯ ಮದುವೆಯಾಗುತ್ತದೆ. ಮುಂದೆ ಆಕೆಯ ಗರ್ಭದಿಂದ ಸೀತೆ ಹುಟ್ಟುತ್ತಾಳೆ. ಆ ಕನ್ಯೆಯಿಂದ ರಾವಣನಿಗೆ ಸಾವು ಸಂಭವಿಸುತ್ತದೆ ಎಂದು ಜಾತಕದಿಂದ ತಿಳಿದು ಆ ಮಗುವನ್ನು ಒಂದು ಪೆಟ್ಟಿಗೆಯಲ್ಲಿ ಮುಚ್ಚಿ ಸಮುದ್ರದಲ್ಲಿ ಬಿಡಲಾಗುತ್ತದೆ. ಮುಂದೆ ಅದು ವಿದೇಹದಲ್ಲಿ ಜನಕನಿಗೆ ಸಿಗುತ್ತದೆ, ಇತ್ಯಾದಿ ಕಥೆ ಅಲ್ಲಿ ವರ್ಣಿತವಾಗಿದೆ.

ಮುಂದೆ ಬಂದ ರಾಮಾಯಣಗಳಲ್ಲಿ ದಶರಥ-ಮಂಡೋದರಿಯರ ಸಂಬಂಧವನ್ನು ಕೈಬಿಡಲಾಯಿತು. ಮಂಡೋದರಿಯು ರಾವಣನ ಹೆಂಡತಿಯಾಗಿ ಮಾತ್ರ ಚಿತ್ರಿತಳಾದಳು ಮತ್ತು ಸೀತೆ ಅವರಿಬ್ಬರ ಮಗಳೆಂದು ಭಾವಿಸಲಾಯಿತು. ಆ ಮಗಳ ಜಾತಕದಿಂದ ರಾವಣನಿಗೆ ಅನಿಷ್ಟವೆಂದು ತಿಳಿದುಬಂದಾಗ ಆಕೆಯನ್ನು ಪೆಟ್ಟಿಗೆಯಲ್ಲಿ ಇಟ್ಟು ನೆಲದಲ್ಲಿ ಹುಗಿಯಲಾಯಿತು ಎಂಬ ಕಥೆ ಹುಟ್ಟಿಕೊಂಡಿತು. ಶ್ವೇತಾಂಬರ ಪಂಥದ ಜೈನ ರಾಮಾಯಣದಲ್ಲಿ ಜಾನಕಿಯು ಜನಕ ಮತ್ತು ಆತನ ಹೆಂಡತಿಗೆ ಹುಟ್ಟಿದ ಸ್ವಂತ ಮಗಳು. ಆದರೆ ವಾಲ್ಮೀಕಿ ರಾಮಾಯಣದಲ್ಲಿ ಸೀತೆ ಅಯೋನಿಜೆ.

ಈ ಬದಲಾವಣೆಗಳು ಹೇಗಾದವು ಎಂಬುದು ಅಧ್ಯಯನದ ವಿಷಯವಾಗಿದೆ. ರಾಮನಿಗೆ ಸ್ವಂತ ಸೋದರಿಯಾದ ಸೀತೆ ಮುಂದೆ ಮಲತಾಯಿಯ ಮಗಳಾಗಿ ಚಿತ್ರಿತಳಾದಳು. ಆಮೇಲೆ ರಾಮ-ಸೀತೆಯರು ಒಬ್ಬನೇ ತಂದೆಯ ಮಕ್ಕಳಾಗಿರದೆ ಬೇರೆ ಬೇರೆ ತಂದೆತಾಯಿಯರಿಗೆ ಹುಟ್ಟಿದವರಾದರು. ಇನ್ನೂ ಮುಂದೆ, ವಾಲ್ಮೀಕಿಯಲ್ಲಿ ಆಕೆಯು ಅಯೋನಿಜೆಯಾದಳು. ಇದು ರಾಮಾಯಣ ಕಥೆಯು ವಿಕಾಸಗೊಂಡ ಕಾಲಘಟ್ಟಗಳನ್ನು ಸೂಚಿಸುತ್ತದೆ. ಹಿಂದೆ ಬೌದ್ಧರ ಕಾಲಕ್ಕೆ ಸ್ವಂತ ಅಣ್ಣ-ತಂಗಿಯರಲ್ಲೇ ಸಂಬಂಧವಾಗುತ್ತಿತ್ತು, ಮುಂದೆ ಜೈನರ ಕಾಲಕ್ಕೆ, ಬಹುಶಃ ಮೊದಲನೆಯ ತೀರ್ಥಂಕರನಾದ ವೃಷಭದೇವನು ಈ ಸಂಪ್ರದಾಯವನ್ನು ಮುರಿದನೆಂದು ಕಾಣುತ್ತದೆ. ಹೆಣ್ಣು-ಗಂಡುಗಳು ಒಬ್ಬನೇ ತಂದೆಗೆ ಹುಟ್ಟಿದವರಾಗಿದ್ದರೂ ಅವರ ತಾಯಂದಿರು ಬೇರೆ ಬೇರೆಯಾಗಿರುತ್ತಿದ್ದರು; ಎಂದರೆ, ಮಲ-ಸೋದರ-ಸೋದರಿಯರಾಗಿರುತ್ತಿದ್ದರು. ವೃಷಭದೇವನು ತನ್ನ ಮೊದಲನೆಯ ಹೆಂಡತಿ ಸುಮಂಗಳೆಯಲ್ಲಿ ಹುಟ್ಟಿದ ಭರತ ಮತ್ತು ಬ್ರಾಹ್ಮಿಯರನ್ನು ಕ್ರಮವಾಗಿ ಎರಡನೆಯ ಹೆಂಡತಿಯಾದ ಸುನಂದಳಲ್ಲಿ ಹುಟ್ಟಿದ ಸುಂದರಿ ಹಾಗೂ ಬಾಹುಬಲಿಯರಿಗೆ ವಿವಾಹ ಮಾಡಿಸಿದ. ಈ ಕಥೆಯ ಪ್ರಭಾವದಿಂದಲೇ ಬಹುಶಃ ಸೀತೆಯು ದಶರಥನಿಂದ ಮಂಡೋದರಿಯಲ್ಲಿ ಹುಟ್ಟಿದ ಮಗಳು ಎಂಬ ಕಲ್ಪನೆ ಬೆಳೆದುಬಂದಿರಬೇಕು.

ಅಂತೂ ಕಾಲಕಾಲಕ್ಕೆ ರಾಮಾಯಣ ಕಥೆಯಲ್ಲಿ ಅನೇಕ ಬದಲಾವಣೆಗಳು ಆಗುತ್ತ ಬಂದಿದ್ದು ನಾವು ಅವುಗಳನ್ನು ಗಂಭೀರವಾಗಿ ಪರಿಗಣಿಸಬೇಕು. ವಾಲ್ಮೀಕಿ ಬರೆದದ್ದೇ ಪ್ರಮಾಣ ಎಂದು ತಿಳಿಯುವುದು ಸರಿಯಲ್ಲ. ವಾಲ್ಮೀಕಿ ಬರೆದದ್ದು ಒಂದು ಕಾವ್ಯ, ಮಹಾಕಾವ್ಯ ಮಾತ್ರ ಎಂಬ ಮಾತನ್ನು ನಾವು ಮರೆಯಬಾರದು. ಅದಕ್ಕೆ ಆಧಾರವಾದುದು ಜಾನಪದ ಕಥೆಯೊಂದು ಮಾತ್ರ, ಚಾರಿತ್ರಿಕ ಘಟನೆಯಲ್ಲ. ಕಾವ್ಯವು ಇತಿಹಾಸವಾಗಲಾರದು. ಕಾವ್ಯದ ವ್ಯಕ್ತಿಗಳು, ಘಟನೆಗಳು ಎಷ್ಟೇ ವಾಸ್ತವ ಅನಿಸಿದರೂ ಅವು ಚಾರಿತ್ರಿಕ ಪಾತ್ರಗಳಾಗಲೀ ಘಟನೆಗಳಾಗಲೀ ಆಗಲಾರವು ಎಂಬ ಅಂಶ ಜಿಜ್ಞಾಸುಕರಿಗೆಲ್ಲ ಹೊಸದೇನೂ ಅಲ್ಲ. ಒಂದು ಮಾತಿದೆ : ಕಾವ್ಯವು ಕಲ್ಪಿತವಾಗಿದ್ದರೂ ಚರಿತ್ರೆಗಿಂತಲೂ ಹೆಚ್ಚು ಹೃದ್ಯವೂ, ಸತ್ಯವೂ ಆಗಿ ಕಾಣುತ್ತದೆ. ಆದರೆ ಚರಿತ್ರೆಯು ಎಷ್ಟೇ ಸತ್ಯ ಸಂಗತಿಗಳನ್ನು ಒಳಗೊಂಡಿದ್ದರೂ, ಕಾವ್ಯದಷ್ಟು ಹೃದ್ಯವಾಗುವುದಿಲ್ಲ. ಇದಕ್ಕೆ ಒಳ್ಳೆಯ ಉದಾಹರಣೆಯೆಂದರೆ ಈ ರಾಮಾಯಣ ಮಹಾಕಾವ್ಯ. ಅನೇಕ ರೂಪಗಳಲ್ಲಿ, ಅನೇಕ ಮಿಥಕಗಳಲ್ಲಿ ವ್ಯಾಪಿಸಿರುವ ರಾಮಕಥೆಯನ್ನು ಒಂದು ಚರಿತ್ರೆಯೆಂಬ ಭ್ರಮೆಯನ್ನು ಹುಟ್ಟಿಸಿ ಜನಜೀವನದ ನೆಮ್ಮದಿಯನ್ನು ಹಾಳುಗೆಡುವುದು ಎಂಥ ದುಷ್ಟತನ ಎಂಬುದನ್ನು ನಾವು ಪರ್ಯಾಲೋಚಿಸಬೇಕು. ಪೂರ್ವಗ್ರಹವಿಲ್ಲದೆ ಯಾವುದಕ್ಕೆ ಎಷ್ಟರಮಟ್ಟಿಗೆ ಪ್ರಾಶಸ್ತ್ಯ ಕೊಡಬೇಕೋ ಅಷ್ಟರಮಟ್ಟಿಗೆ ಕೊಟ್ಟರೆ ಅಧ್ಯವಸಾಯಿಯಾದ ಪ್ರತಿಯೊಬ್ಬ ಜಿಜ್ಞಾಸಕನಿಗೆ ಸಿಗುವ ಆನಂದ ಅಷ್ಟಿಷ್ಟಲ್ಲ. ಕಾವ್ಯವನ್ನು ಕಾವ್ಯವನ್ನಾಗಿಯೇ ನಾವು ಓದಬೇಕು ಮತ್ತು ಅದರ ರಸಾಸ್ವಾದನೆ ಮಾಡಬೇಕು. ಬಲವಂತವಾಗಿ ಅದನ್ನು ಚರಿತ್ರೆಯ ಒರೆಗಲ್ಲಿಗೆ ತಿಕ್ಕಿ ನೋಡಬಾರದು. ಆಧುನಿಕ ವೈದ್ಯರಂತೆ ಅದನ್ನು 'ಡಿಸೆಕ್ಟ್' ಮಾಡಿ ನೋಡಲು ಪ್ರಯತ್ನಿಸಿದರೆ, ಅದರ ಆಳವನ್ನು ಅಗೆದು ನೋಡ ಹೊರಟರೆ ನಮಗೆ ಸಿಗುವುದು ಏನು ? ಹೀಗೆ ಮಾಡುವುದು ಸಹೃದಯರ ಲಕ್ಷಣವಲ್ಲ.

**ಪ್ರೊ|| ಭಾಲಚಂದ್ರ ಜಯಶೆಟ್ಟಿ**
'ನಮ್ಮ ಮನೆ', ಜಯನಗರ, ಸೇಡಂ ರಸ್ತೆ, ಗುಲಬರ್ಗಾ - ೫೮೫ ೧೦೮

# ಗುಜರಾತ್ ಘಟನೆಯ ನಂತರ

ಭಾರತ ದೇಶ ಶತಶತಮಾನಗಳಿಂದ ಮನು ಧರ್ಮ, ರಾಮಾಯಣ, ಮಹಾಭಾರತಗಳ ಹಿನ್ನೆಲೆಯಲ್ಲಿ ವರ್ಣಾಶ್ರಮ, ಜಾತಿಪದ್ಧತಿ, ಅಸ್ಪೃಶ್ಯತೆಯಂತಹ ಸಾಮಾಜಿಕ ಅಸಮಾನತೆಯ ಆಗರವಾಗಿದೆ. ಇಡೀ ವಿಶ್ವ ೨೧ನೇ ಶತಮಾನದ ಆದಿಯಲ್ಲಿರುವಾಗ ಭಾರತದ ಹಿಂದುವಾದಿ ಸಂಘಟನೆಗಳು ಧರ್ಮದ ಅಮಲನ್ನು ಯುವ ಜನರ ತಲೆಗೆ ಏರಿಸುವಲ್ಲಿ ತಲ್ಲೀನವಾಗಿವೆ. ಇದೇ ಹೊತ್ತಿಗೆ ಸರಿಯಾಗಿ ಗುಜರಾತಿನಲ್ಲಿ ದೇಶವೆ ತಲ್ಲಣಿಸಿಹೋದ ಒಂದು ದೊಡ್ಡ ದುರಂತ ನಡೆದು ಹೋಯಿತು. ಆರ್‌ಎಸ್‌ಎಸ್, ಬಜರಂಗದಳ ಮತ್ತು ಶಿವಸೈನ್ಯ ಸಂಘಟನೆಗಳು ಒಂದು ರಾಜಕೀಯ ಪಕ್ಷದ ಜೊತೆಗೆ ಹಲವು ವರ್ಷಗಳಿಂದ ಇಂತಹ ಘಟನೆಗಳಿಗಾಗಿ ತಯಾರಿ ನಡೆಸಿದ್ದವು. ಮೇಲಿನ ಸಂಘಟನೆಗಳ ಲ್ಯಾಬೊರೇಟರಿಯಾಗಿರುವ ಗಾಂಧಿ ಗುಜರಾತಿನಲ್ಲಿ ಅನಿವಾರ್ಯವಾಗಿ ಇದು ನಡೆಯಲೇಬೇಕಿತ್ತು. ಹಿಂದೂವಾದಿಗಳು ಬಹಳ ವ್ಯವಸ್ಥಿತವಾಗಿ ಗುಜರಾತಿನಲ್ಲಿ ಇದನ್ನು ಪರೀಕ್ಷಿಸಿ ನೋಡಿಯೇಬಿಟ್ಟರು.

ಮುಖ್ಯವಾಗಿ ದಲಿತ ಬಹುಜನರಿಂದ ಮುಸ್ಲಿಮರ ಮೇಲೆ ನಡೆದ ಈ ಘೋರ ಅತ್ಯಾಚಾರವನ್ನು ಗುಜರಾತಿನಾದ್ಯಂತ ಸಂಘಟಿಸಲಾಗಿತ್ತು. ಇದರ ಹಿಂದೆ ಎಷ್ಟು ವರ್ಷಗಳ ತಯಾರಿ ನಡೆದಿತ್ತು ಎನ್ನುವ ವಿವರಗಳು ಈಗ ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಗುಜರಾತ್ ಘಟನೆಯ ನಂತರ ದೇಶದಲ್ಲಿ ಇನ್ನೆರಡು ಕುತೂಹಲಕರವಾದ ಘಟನೆಗಳು ನಡೆದುಹೋಗಿವೆ. ಈ ಘಟನೆಗಳಿಂದ ಮುಂದಿನ ದಿನಗಳಲ್ಲಿ ಜನರ ಮೇಲೆ ಯಾವ ರೀತಿಯ ಪರಿಣಾಮಗಳಾಗಬಹುದು ಎನ್ನುವ ಕುತೂಹಲ ಈಗ ಸೃಷ್ಟಿಯಾಗಿದೆ.

ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಪರಿನಿರ್ವಾಣದ ದಿನವಾದ ಡಿಸೆಂಬರ್ ೬, ೨೦೦೨ ರಂದು ಚೆನ್ನೈನಲ್ಲಿ ಅಖಿಲ ಭಾರತ ಕ್ರೈಸ್ತರ ಕೌನ್ಸಿಲ್‌ನ ಬಿಷಪ್ ಥಾಮಸ್ ಸಾರ್ವಜನಿಕ ಸಭೆಯಲ್ಲಿ ದಲಿತರ ಪಾದಗಳನ್ನು ತೊಳೆದು ಈ ದೀನದಲಿತರ ಪಾಪ ಕಳೆದ ದಿನ ಎಂದು ಹೇಳಿ ಅವರ ಶ್ರೇಯಸ್ಸಿಗಾಗಿ ದುಡಿಯುವುದಾಗಿ ಘೋಷಿಸಿದರು. ಜಮಾಹಿತ್ ಉಲೇಮಾ-ಐ-ಹಿಂದ್ ಎನ್ನುವ ಸಂಘಟನೆ ಮುಸ್ಲಿಮರು ಮತ್ತು ದಲಿತರ ನಡುವೆ ಭ್ರಾತೃತ್ವ ಬೆಳೆಸಲು 'ಒಂದೇ ತಟ್ಟೆಯಲ್ಲಿ ಭೋಜನ' ಎನ್ನುವ ಸಮಾರಂಭವನ್ನು ಹೈದರಾಬಾದಿನಲ್ಲಿ ಏರ್ಪಡಿಸಿತ್ತು. ಆ ದಿನ ಮುಸ್ಲಿಂ ನಾಯಕರು, ಮುಲ್ಲಾಗಳು ದಲಿತರ ಜೊತೆಗೆ ಒಟ್ಟಾಗಿ ಕುಳಿತು ಭೋಜನ ಮಾಡಿದರು.

ಜಮಾಹಿತ್ ಉಲೇಮಾ ಮಾರ್ಚ್ ೯, ೨೦೦೩ ರಂದು ದೆಹಲಿಯಲ್ಲಿ ಒಂದು ಬೃಹತ್ ಸಭೆಯನ್ನು ಏರ್ಪಡಿಸಿ ಇದು ದಲಿತ್-ಮುಸ್ಲಿಮ್ ಫ್ರಂಟ್ ಎಂದು ಘೋಷಿಸಿತು. ಈ ಸಂಘಟನೆ ದೇಶದಾದ್ಯಂತ ದಲಿತ ಬಹುಜನರ ಜೊತೆಗೆ ಸಮಾನ ಸಮಾಜವನ್ನು ಕಟ್ಟುವ ಕೆಲಸದಲ್ಲಿ ತೊಡಗಿಕೊಂಡಿದೆ. ಮುಂದಿನ ದಿನಗಳಲ್ಲಿ ದಲಿತ್-ಮುಸ್ಲಿಂ ಫ್ರಂಟ್ ರಾಜಕೀಯ ವೇದಿಕೆಯಾಗಲಿದೆ ಎಂಬುದಾಗಿ ಹೇಳಿಕೆ ಕೊಟ್ಟಿತು.

ಆದರೆ ಜಮಾಹಿತ್ ಉಲೇಮಾ ಒಂದು ಸಾಮಾಜಿಕ ಸಂಘಟನೆಯಾಗಿದ್ದು ಅದು ನೇರವಾಗಿ ರಾಜಕಾರಣದಲ್ಲಿ ತೊಡಗಿಕೊಳ್ಳುವಂತಿಲ್ಲ. ಪ್ರಸ್ತುತ ಅದು ಬಡ ಮುಸ್ಲಿಮರ ನಡುವೆ ವಿದ್ಯೆ ಮತ್ತು ಆರ್ಥಿಕತೆಯನ್ನು ಬೆಳೆಸಲು ದುಡಿಯುತ್ತಿದೆ. ಅದೇ ರೀತಿ ಮುಂದಿನ ದಿನಗಳಲ್ಲಿ ಆ ಸಂಘಟನೆ ದಲಿತರು, ಬುಡಕಟ್ಟು ಜನರು ಮತ್ತು ಹಿಂದುಳಿದವರ ನಡುವೆ ಸಂಪರ್ಕವನ್ನು ಬೆಳೆಸುವಲ್ಲಿ ಸಫಲವಾಗಬೇಕಿದೆ.

ಜಮಾಹಿತ್ ಉಲೇಮಾ ಸ್ವಾತಂತ್ರ್ಯ ಪೂರ್ವದ ಸಂಘಟನೆಯಾಗಿದ್ದು ಬ್ರಿಟಿಷರ ಕಾಲದಲ್ಲಿ ಮುಸ್ಲಿಂ ಲೀಗ್ ಮತ್ತು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ಗಳಿಗೂ ಸಹಾಯ ಹಸ್ತ ನೀಡಿತ್ತು. ಈ ಕಾರಣದಿಂದ ಈ ಸಂಘಟನೆಯನ್ನು ಮುಸ್ಲಿಂ ಸಂಘಟನೆಗಳು, ಹಿಂದೂ - ಮುಸ್ಲಿಂ ಸಂಘಟನೆ ಎಂದು ಹಂಗಿಸಿದ್ದವು.

ಹಿಂದುತ್ವವನ್ನು ಪೋಷಿಸಿಕೊಂಡು ಬಂದಿರುವ ಸಂಘಟನೆಗಳು ಇದುವರೆಗೂ ಸಾವರ್ಕರ್ ರೀತಿಯ ಕಾರ್ಯ ವೈಖರಿಯನ್ನು ಅನುಸರಿಸಿ ಸಾಮಾಜಿಕ ಸಮಾನತೆಯ ಬಗ್ಗೆ ಎಂದೂ ಮಾತನಾಡಲಿಲ್ಲ. ಆದರೆ ದಲಿತ ಬಹುಜನರು ಕ್ರೈಸ್ತರಾಗಿ ಮತ್ತು ಮುಸ್ಲಿಮರಾಗಿ ಮತಾಂತರ ಹೊಂದುತ್ತಿರುವುದು ಜಾಸ್ತಿಯಾಗುತ್ತಿರುವುದರಿಂದ ಹಿಂದೂವಾದಿಗಳು ಪ್ರಸ್ತುತ, ಮತಾಂತರ ದೇಶಕ್ಕೆ ಗಂಡಾಂತರ ಎನ್ನುತ್ತಿವೆ. ದಲಿತ ಬಹುಜನರು ಹಿಂದೂ ಧರ್ಮವನ್ನು ತೊರೆದು ಯಾಕಾದರೂ ಕ್ರೈಸ್ತರಾಗಿ, ಮುಸ್ಲಿಮರಾಗಿ ಮತ್ತು ಬೌದ್ಧರಾಗಿ ಪರಿವರ್ತನೆಗೊಳ್ಳುತ್ತಿದ್ದಾರೆ ಎನ್ನುವುದನ್ನು ಹಿಂದೂವಾದಿಗಳು ಈಗ ತೀವ್ರವಾಗಿ ಯೋಚಿಸಬೇಕಾಗಿದೆ. ಹಿಂದೂವಾದಿಗಳು ದಲಿತ ಬಹುಜನರ ನಡುವೆ ಮತಾಂತರವನ್ನು ತಡೆಯಬೇಕಾದರೆ ಹಳೆಯ ಚಾಳಿಗಳನ್ನು ಬಿಟ್ಟು ಮನುಷ್ಯತ್ವವನ್ನು ಪ್ರದರ್ಶಿಸಬೇಕಾಗಿದೆ. ಅಂಬೇಡ್ಕರ್ ಅವರು ದಲಿತ ಬಹುಜನರೆಲ್ಲ ಒಂದು ದಿನ ಹಿಂದೂ ದೊಡ್ಡಿಯಿಂದ ಹೊರಬೀಳಬೇಕಿದೆ ಎಂದು ಎಚ್ಚರಿಸಿದ್ದರು. ಅದು ಈಗ ಮಂದವಾಗಿ ಸಾಗುತ್ತಿದೆ.

ಗುಜರಾತಿನ ಕರ್ಮಕಾಂಡವು ಮೊದಲಬಾರಿಗೆ ತೀವ್ರವಾಗಿ ಮುಸ್ಲಿಮರನ್ನು ಮತ್ತು ಕ್ರೈಸ್ತರನ್ನು ಯೋಚಿಸುವಂತೆ ಮಾಡಿದೆ. ಕ್ರೈಸ್ತರು ಈ ದೇಶಕ್ಕೆ ಕಾಲಿಟ್ಟ ದಿನದಿಂದಲೂ ಕ್ರೈಸ್ತರಲ್ಲದ ಇನ್ನುಳಿದ ಮತೀಯರಲ್ಲಿ ಸಾಮಾಜಿಕ ಮತ್ತು ಆರ್ಥಿಕತೆಯ ಸಮಾನತೆಯನ್ನು ತರುವುದಾಗಿ ಶ್ರಮಿಸುತ್ತಿದ್ದಾರೆ. ಹಿಂದೂಗಳು ನಡೆಸುವ ಆಶ್ರಮಗಳು, ವಿದ್ಯಾಲಯಗಳು, ವೇದ ಪಾಠಶಾಲೆಗಳು ಇಂದಿಗೂ ದಲಿತ ಬಹುಜನರಿಗೆ ಬಹುಮಟ್ಟಿಗೆ ಮುಚ್ಚಿದ ನಿಗೂಢ ಕೂಪಗಳಾಗಿವೆ. ಮಸೀದಿಗಳು ಉಗ್ರವಾದಿಗಳ ತಾಣಗಳಾದರೆ ಮದರಸಾಗಳು ಓಬಿರಾಯನ ಕಾಲದ ಅರಬ್ಬಿ ಶಾಲೆಗಳಾಗಿಯೇ ಉಳಿದಿವೆ. ಆದರೆ ಕ್ರೈಸ್ತರ ವಿದ್ಯಾಲಯಗಳು ಮಾತ್ರ ಎಲ್ಲಾ ಮತದವರಿಗೂ ವಿದ್ಯೆ ಕೊಡುವ ಭಾಗ್ಯದ ಬಾಗಿಲುಗಳಾಗಿವೆ. ಕ್ರೈಸ್ತರು ನಡೆಸುವ ಆಸ್ಪತ್ರೆಗಳು ಮಾನವ ಸೇವೆಯ ಸಂಕೇತಗಳಾಗಿವೆ. ಹಿಂದೂಗಳು ಈಗಲೂ ಮಾನವತ್ವವನ್ನು ಮೆರೆಯದೇ ಹೋದಲ್ಲಿ ಹಿಂದೂ ಧರ್ಮಕ್ಕೆ ಇಂದಲ್ಲ ನಾಳೆ ಮತಾಂತರವೆಂಬ ಗಂಡಾಂತರ ಕಟ್ಟಿಟ್ಟ ಬುತ್ತಿ.

ಹಿಂದೂವಾದಿಗಳು ನಡೆಸುತ್ತಿರುವ ವಿದ್ಯಾಲಯಗಳಲ್ಲಿ ಹಿಂದುತ್ವದ ಛಾಯೆಯನ್ನು ಬೋಧಿಸುತ್ತಿರುವುದು ಗುಪ್ತವಾಗೇನೂ ಉಳಿದಿಲ್ಲ. ಅದೇ ರೀತಿಯಾಗಿ ಮುಸ್ಲಿಮರು ನಡೆಸುವ ಮದರಸಾಗಳಲ್ಲೂ ಅದೇ ನಡೆಯುತ್ತಿದೆ. ಈಗ ಹಿಂದೂವಾದಿಗಳು ಕುರಾನ್‌ನಲ್ಲಿರುವ ನಕಾರಾತ್ಮಕ ಅಧ್ಯಾಯಗಳನ್ನು ಕೈಬಿಡುವಂತೆ ಒತ್ತಾಯಿಸುತ್ತಿದ್ದಾರೆ.

ಅದೇ ರೀತಿಯಾಗಿ ಮುಸ್ಲಿಂ ಬುದ್ಧಿಜೀವಿಗಳು ಹಿಂದೂ ಧರ್ಮದಲ್ಲಿರುವ ನಕಾರಾತ್ಮಕ ಅಧ್ಯಾಯಗಳನ್ನು ಕೈಬಿಡುವಂತೆ ಯಾಕೆ ಕೇಳುತ್ತಿಲ್ಲ ? ಹಿಂದೂ ಪುರಾಣಗಳಲ್ಲಿ ಬಳಸುವ ಶೂದ್ರ, ಚಂಡಾಲ, ಅಸ್ಪೃಶ್ಯರು ಮುಂತಾದ ಪದಗಳನ್ನು ಇಂದಿಗೂ ಹಿಂದೂಗಳು ಬಳಸುತ್ತಿದ್ದು, ಅವರ ಮೇಲೆ ಸಾಮಾಜಿಕ ಬಹಿಷ್ಕಾರಗಳು ನಿರಂತರವಾಗಿ ನಡೆದೇ ಇದೆ.

ಕುರಾನ್ ನಂಬದವರನ್ನು ಕಾಫಿರ್‌ಗಳೆಂದಾಗ ಉಗ್ರವಾಗಿ ವಿರೋಧಿಸಲಾಗುತ್ತದೆ. ಅದೇ ಹಿಂದೂವಾದಿಗಳು ಪುರಾಣಗಳಲ್ಲಿ ಬರುವ ಶೂದ್ರ, ಚಂಡಾಲ, ಅಸ್ಪೃಶ್ಯ ಇತ್ಯಾದಿ ಪದಗಳನ್ನು ಯಾಕಾದರೂ ತೆಗೆದು ಬಿಸಾಡಬಾರದು ? ಇದರ ಬಗ್ಗೆ ಬೇರೆ ಧರ್ಮಗಳವರು ಮಾತನಾಡಿದಾಗ ಅದು ಹಿಂದೂ ಮನೆಯ ಒಳಗಿನ ಜಗಳವಾಗುತ್ತದೆ. ಆದರೆ ಹಿಂದೂಗಳು ಕ್ರೈಸ್ತ ಮತ್ತು ಮುಸ್ಲಿಮರ ಬಗ್ಗೆ ಏನಾದರೂ ಕೇಳಬಹುದಾಗಿದೆ. ಎಲ್ಲಾ ಧರ್ಮಗಳ ಬುದ್ಧಿಜೀವಿಗಳು ಒಂದಾಗಿ ಸೇರಿ ಎಲ್ಲಾ ಧರ್ಮಗಳ ಒಳಗಿರುವ ತಾರತಮ್ಯಗಳನ್ನು ಪರೀಕ್ಷೆಗೆ ಒಳಪಡಿಸಬೇಕಿದೆ.

ಇನ್ನು ಸಂಕಟ ಬಂದಾಗ ಮಾತ್ರ ಕಣ್ಣು ಉಜ್ಜಿಕೊಂಡು ನೋಡಿ ಮತ್ತೆ ತೂಕಡಿಸುವ ದಲಿತ ಬಹುಜನರು ಮತ್ತೆ ಅದೇ ರೀತಿ ಯಾವುದಾದರೂ ಘಟನೆಗಳು ನಡೆದಾಗ ಮಾತ್ರ ಕಣ್ಣು ಉಜ್ಜಿಕೊಂಡು ನೋಡಿ ಮತ್ತೆ ತೂಕಡಿಸುತ್ತಾರೋ ಇಲ್ಲ ಈ ಎರಡು ಬೆಳವಣಿಗೆಗಳ ಆಧಾರದ ಮೇಲೆ ಎಚ್ಚೆತ್ತುಕೊಂಡು ಸಂಘಟಿತರಾಗುತ್ತಾರೋ ಕಾಲವೇ ಹೇಳಬೇಕು.

ಎಂ. ವೆಂಕಟಸ್ವಾಮಿ
೫೭ ಎ, ಸಾಯಿಲೋಟಸ್ ಬಡಾವಣೆ, ಸುಬ್ರಮಣ್ಯಪುರ ಪೋಸ್ಟ್
ಬೆಂಗಳೂರು - ೫೬೦ ೦೬೧



# ಮಲೆನಾಡಿನ ಮಳೆ ಬೀಡಿನ ಕೃಷಿ ಬಯಲ ಮನೆಯ ಕಥೆ

ಬಿಳುಮನೆ ರಾಮದಾಸ್ ಅವರ ಕಾದಂಬರಿಗಳಲ್ಲಿ 'ತಲೆಮಾರು' ಎದ್ದುಕಾಣುವ ಕಾದಂಬರಿ. ಅಷ್ಟೇ ಅಲ್ಲ, ಮುಖ್ಯ ಕೃತಿಯೂ ಆಗಿದೆ. ಇದು ಒಂದೇ ರಸಬಳ್ಳಿಯ ಮೂರು ತಲೆಮಾರಿನ ಕಥನವನ್ನು ತೆರೆದಿಟ್ಟು, ನಾಲ್ಕನೇ ತಲೆಮಾರಿನ ಜನನದೊಂದಿಗೆ ಮುಗಿಯುತ್ತದೆ. ನಾಲ್ಕನೇ ತಲೆಮಾರಿನ ಪ್ರವೇಶ ಕುಟುಂಬದ ಒಡಕು ಬಿರುಕುಗಳನ್ನು ಮುಚ್ಚುತ್ತ ಹೊಂಬೆಳಕನ್ನು ಪಸರಿಸುತ್ತದೆ. ಈ ನಾಲ್ಕನೇ ತಲೆಮಾರಿನ ಪ್ರವೇಶ ನೇರ ಹೆದ್ದಾರಿಯಲ್ಲಿ ಆಗುವುದಿಲ್ಲ. ಕಾಲುದಾರಿ, ಬಂಡಿದಡ, ಮುಖ್ಯರಸ್ತೆ, ಕಾಡು, ಗದ್ದೆ - ತೋಟಗಳು ಎದೆ ತೆರೆದು ಸಹಕರಿಸುತ್ತವೆ. ತಂತ್ರ, ಪ್ರತಿ ತಂತ್ರ, ಸಂಚು, ವಿಷಮತೆ, ವೈಷಮ್ಯಗಳ ನಡುವೆ ಸುತ್ತಿ ಸುತ್ತಿ, ಅಲೆದಲೆದು ಬಳಲಿ ಪ್ರೀತಿ ಪ್ರೇಮಗಳ ಹಸುರಿ ನೊಲವಿನಿಂದಾಗುತ್ತದೆ. ಇದನ್ನು ಗೆಲ್ಲಿಸುವುದಾಗಿ ಆಗುತ್ತದೆ.

ಮೊದಲ ತಲೆಮಾರಿನವರ (ಗಿರಿಯಪ್ಪಗೌಡ-ಸುಬ್ಬಣ್ಣಗೌಡ) ಪರುಷ ಪೌರುಷ ರೋಷ ಎರಡನೇ ತಲೆಮಾರಿನಲ್ಲಿ ಅಷ್ಟು ಬಿಗಿಯಾಗಿ ಬೀಗದಿದ್ದರೂ (ಸಿಗಪ್ಪ ಗೌಡ, ಮಂಜಪ್ಪಗೌಡ, ಪುಟ್ಟಣ್ಣಗೌಡ, ದ್ಯಾವಪ್ಪ ಗೌಡ, ಶಂಕರಪ್ಪಗೌಡ) ಅದನ್ನು ಒಪ್ಪಿಕೊಂಡ ಮೌನದ ಒಳ ಗುದಿಯೊಂದಿಗೆ ಹಿಂದಿನ ತಲೆಮಾರಿನ ಗುಣಾವಗುಣ ಗಳೊಂದಿಗೆ ಬದ್ಧತೆ ಪಡೆದು ಒಗೆತನವನ್ನು, ಒಕ್ಕಲುಗಾರಿಕೆ ಯನ್ನು ಮುಂದುವರೆಸುತ್ತದೆ. ಮೂರನೇ ತಲೆಮಾರು ಶ್ರಾವಣದ ನದಿ - ಕೆರೆಯಂತೆ, ಶೃಂಗಾರ ಮಾಸದ ಕಾಡಿ ನಂತೆ. ಇದರ ಅಂತರ್ಯದ ತುಡಿತ - ದುಡಿತ - ಮಿಡಿತವೆ ಹಸನಿಕೆ - ನಗೆ - ಉಲ್ಲಾಸ, ದೂರ ಸರಿದದ್ದು, ಸರಿಸಿದ್ದನ್ನು ಒಗ್ಗೂಡಿಸುವ ಹಸುರುತನ. (ಶ್ರೀನಿವಾಸ-ಕಿಟ್ಟಪ್ಪ)

ಆಯಾ ತಲೆಮಾರಿನಂತೆ ಸ್ತ್ರೀ ಪಾತ್ರಗಳೂ ಇವೆ. ಆದರೆ ಕಾಡಮ್ಮ ಹೆಗ್ಗಡತಿಯದು ಇವುಗಳಿಗೆ ಭಿನ್ನವೂ ಗಾಂಭೀರ್ಯದ್ದೂ ಆಗಿದೆ. ಈಕೆ ಎಲ್ಲ ಹೆಂಗಸರಂತೆ ಕಾದಂಬರಿಯಲ್ಲಿ ಪ್ರವೇಶ ಮಾಡುತ್ತಾಳೆ. ಪ್ರೇಮ ಪ್ರಕರಣ ದಲ್ಲಿ ಬಲಿಪಶುವಾಗುತ್ತಾಳೆ. ಗಂಡನ ಸಾವಿನ ನಂತರ ಕಾಡಮ್ಮ ಹೆಗ್ಗಡತಿಯ ಗಟ್ಟಿ ವ್ಯಕ್ತಿತ್ವ ಅವಳ ಶ್ರಮಶಕ್ತಿಯ ಮೂಲಕ ಪ್ರಕಾಶಿಸುತ್ತದೆ. ಅವಳೆದೆ ನೆಲದ್ದು, ಬದುಕಿನ ಕಸುವು ನೀರಿನದು. ಹಾಗಾಗಿಯೇ ಅವಳು ಎಲ್ಲವನ್ನೂ ನಿಭಾಯಿಸುತ್ತಾಳೆ; ಎಲ್ಲರನ್ನೂ ಸಂಭಾಳಿಸುತ್ತಾಳೆ. ಅವಳ ಈ ಗುಣ (ವಿಧವೆಯಾದ ನಂತರ ಪ್ರಕಟಕ್ಕೆ ತಂದದ್ದು) ಅವಳ ಮೊಮ್ಮಗಳಾದ ಸಾವಿತ್ರಿಯಲ್ಲಿ ಎರಚಾಗಿ ಪ್ರಕಟ ವಾಗುತ್ತದೆ. ಅಜ್ಜಿ ಮತ್ತು ಮೊಮ್ಮಗಳ ಬದುಕಿನಲ್ಲಿ ಒಂದೇ ಪ್ರಸಂಗ ಬೇರೆ ಕಾಲ ಘಟ್ಟದಲ್ಲಿ ನಡೆಯುತ್ತದೆ. ಅಜ್ಜಿ ಅಂಜಿಕೆ, ಅಸಹಾಯಕತೆಯಲ್ಲಿ ಕಳೆದುಕೊಂಡದ್ದನ್ನು ಮೊಮ್ಮಗಳು ನೇರ ನುಡಿಗಾರಿಕೆಯಿಂದ ಪಡೆದುಕೊಳ್ಳು ತ್ತಾಳೆ. ಕಾಡಮ್ಮನ ಪ್ರೇಮಿ ಗುಂಡಿಕ್ಕಿಕೊಂಡರೆ, ಕಾಡಮ್ಮ ಅಸಮ ವಯಸ್ಕನನ್ನು ಪಡೆದು ವಿಧವೆಯಾದರೆ, ಸಾವಿತ್ರಿ ಕೋರಿಕೊಂಡು ಪ್ರೀತಿಸಿದವನನ್ನು ಗಂಡನನ್ನಾಗಿ ಪಡೆದು ಹಡೆಯುತ್ತಾಳೆ. ಆದರೆ ವ್ಯತ್ಯಾಸವೆಂದರೆ ಕಾಡಮ್ಮನಿಗೆ ಎಲ್ಲವೂ ಸಹಕಾರಿಯಾಗಿರಲಿಲ್ಲ. ಪೌರುಷದ ಬೆದರಿಕೆ ಇತ್ತು. ಸಾವಿತ್ರಿ ಪಾಲಿಗೆ ಅಪ್ಪನೇ ಖಳನಾದರೂ ತಪ್ಪಿಸುವ ಕಾರಣ ಪಾತ್ರಗಳು ರಂಗದಲ್ಲಿ ಸಕ್ರಿಯವಾಗಿದ್ದವು. ಮೆದು ಗೊಂಡ ಪೌರುಷದ ಒತ್ತಾಸೆ ಸಿಕ್ಕಿತ್ತು.

ಗೌಡತಿಯರು (ನಾಗಮ್ಮ, ಹಾಲಮ್ಮ, ದೇವಮ್ಮ, ಬೆಳ್ಳಮ್ಮ, ರಂಗಮ್ಮ) ಪುರುಷ ಛಾಯಾನುವರ್ತಿಗಳು. ಇವರದು ಅಡಗಿಸಿಟ್ಟ ಬದುಕು. ಆದರೂ ಸಂದರ್ಭ ಒದಗಿದಾಗ ಅದನ್ನು ತಮ್ಮಂತೆ ಮಾಡಿಕೊಳ್ಳುವ ಹವಣಿಕೆ ಯಿಂದ ದೂರ ಸರಿದವರಲ್ಲ. ಇದನ್ನು ಶ್ರೀನಿವಾಸನ




ಪುಟ : ೩೦೪ ಬೆಲೆ : ರೂ. ೧೮೦

ಜ್ಞಾನೋದಯ ಪಬ್ಲಿಕೇಷನ್ಸ್
ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯

ಮದುವೆ ಪ್ರಸ್ತಾಪ, ನಂತರದ ಅವನದೇ ಮದುವೆ ಶಾಸ್ತ್ರದ ಸಂದರ್ಭದಲ್ಲಿ ಬೆಳ್ಳಮ್ಮನಲ್ಲಿ ಕಾಣಬಹುದು. ಸಾವಿತ್ರಿಯ ಮಲತಾಯಿ ರಂಗಮ್ಮ ಗಂಡನ ಉದ್ದೇಶಕ್ಕೆ ಗುಪ್ತ ವಿರೋಧಿಯಾಗಿ ಸಾವಿತ್ರಿಯನ್ನು ತಾಳಿಕಟ್ಟುವ ಶಾಸ್ತ್ರದ ಕುತ್ತಿನಿಂದ ಬಚಾವು ಮಾಡುವುದು, ಪುಟ್ಟಿ ಕಾಡಮ್ಮನ ಇಚ್ಛಾನುವರ್ತಿಯಾಗಿ ವ್ಯವಹರಿಸುವುದು, ನಾಗಮ್ಮ, ಹಾಲಮ್ಮ ಕಾಡಮ್ಮನಂತೆ ಯೋಚಿಸಿ ಸಾವಿತ್ರಿಯನ್ನು ಹಸುಮನೆಗೆ ಕೊಡಲು ಬೆಂಬಲಿಸುವುದು ನಡೆಯುತ್ತದೆ. ಆದರೆ ದೇವಮ್ಮನಂತಹ ಪಾತ್ರಗಳು ಇದಕ್ಕೆ ವಿರೋಧೀ ದಿಕ್ಕಿನಲ್ಲಿ ನಿಲ್ಲುತ್ತವೆ. ಹೀಗೆ ಕಾದಂಬರಿಯ ಹೆಣ್ಣು - ಗಂಡು ಪಾತ್ರಗಳು ವೈರುಧ್ಯಗಳ ನಡುವೆ ಬದುಕನ್ನು ಕಾಣುವ ರೀತಿಯಲ್ಲಿ ಮುಂದುವರೆಯುತ್ತವೆ.

ಮಲೆನಾಡಿನ ಮಳೆಗಾಲದ ನಿಧಾನ ನಡಿಗೆಯ ರಾತ್ರಿ ಗಳಂತೆ ನಿರೂಪಿತವಾಗುವ ಕಾದಂಬರಿಯಲ್ಲಿ ಸಿಂಗಪ್ಪ ಮತ್ತು ಕಾಡಮ್ಮರ ನಡುವಿನ ರಹಸ್ಯ ಪ್ರೇಮ ಸ್ಫೋಟ ಗೊಳ್ಳುವಾಗ, ರಂಗಪ್ಪಗೌಡ - ರಾಮೇಗೌಡರು ಮಾಡುವ ಮದುವೆಯ ಸಂಚು, ಶ್ರೀನಿವಾಸ ಸಾವಿತ್ರಿಯರ ಪ್ರಣಯ ಚಟುವಟಿಕೆ, ತನ್ನ ಪ್ರೇಮದ ಬಗ್ಗೆ ವಿಚಾರಣೆಗೆ ಕುಳಿತ ಹಿರಿಯರ ಮುಂದೆ ಶ್ರೀನಿವಾಸ ಸಾವಿತ್ರಿಯರು ನಡೆಸುವ ವಾದ ಸರಣಿ, ಸಾವಿತ್ರಿಯನ್ನು ರಕ್ಷಿಸಿಕೊಳ್ಳಲು ಶಂಕರಪ್ಪ ಗೌಡ, ಗುಂಡಪ್ಪಗೌಡರು ಕೊಳಿಗೆಗೆ ಹೋದಾಗ ಹಾಗೂ ಕೊಳಗಿನ ಮನೆಯಿಂದ ಸಾವಿತ್ರಿಯನ್ನು ಕರೆತಂದ ನಂತರ ಕಾದಂಬರಿ ಚುರುಕಿನಿಂದ ಸಾಗುತ್ತದೆ.

ತಲೆಮಾರಿನ ಕತೆ, ಮಲೆನಾಡಿನ ಜೀವನ ಪದ್ಧತಿ ಹಾಗೂ ಸಂಸ್ಕೃತಿಗಳ ದಾಖಲೆಯೂ ಆಗಿ ನಮ್ಮ ಮನದಲ್ಲಿ ಅರಳುತ್ತದೆ. ಕಾರಣೀಕ ಘಟನೆಗಳ ನೋವುಗಳ ನಡುವೆಯೂ ಜಾನಪದೀಯ ಸಂಗೋಪನಾ ಚೈತನ್ಯ ಉಸಿರಾಡುವುದನ್ನು, ಇದಕ್ಕಾಗಿ ಬೇಸಾಯದಲ್ಲಿ ತಮ್ಮ ಸ್ಥಿತಿ ಗತಿಗಳನ್ನು ರೂಪಿಸಿಕೊಳ್ಳುವುದನ್ನು ಸಂಸ್ಕೃತಿಯ ನೆಲೆಯಲ್ಲಿ ಕಾಣುತ್ತೇವೆ. ಪಶು ಸಂಗೋಪನೆ ಇದರ ಒಂದು ಭಾಗ ವಾಗಿ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತದೆ. ಮಲೆನಾಡಿಗರ ಕಾವ್ಯ ಪ್ರೇಮ ಸಾವಿತ್ರಿಯ ಹಾಡು ಗಾರಿಕೆಯ ಮೂಲಕ ಪ್ರಕಟಗೊಳ್ಳುತ್ತದೆ. ತಲೆಮಾರಿನಿಂದ ತಲೆಮಾರಿಗೆ ದೈವದ ನಂಬಿಕೆ ಸಡಿಲವೂ ಭೀತ ಮುಕ್ತವೂ ಆಗುತ್ತದೆ.

ಪ್ರೀತಿ ಪ್ರೇಮಕ್ಕೆ ಆಸ್ತಿ, ಹಣಕಾಸು, ಪ್ರತಿಷ್ಠೆ ಪೌರುಷಾಹಂಕಾರ ವಿರೋಧಿಯಾಗಿ ನಿಲ್ಲುವುದು ಹಸುರುಮನೆ ಪ್ರಣಯ ದುರಂತದ ಕೇಂದ್ರವಾಗಿ ಕಾಣುವುದು. ಇಲ್ಲಿ ಗಿರಿಯಪ್ಪಗೌಡರ ತಮ್ಮ, ಮಗ ಸಿಂಗಪ್ಪಗೌಡರ ಆತ್ಮಹತ್ಯೆ ನಡೆದದ್ದು ಕೈಗೂಡದ ಪ್ರಣಯ ದಿಂದ. ಶ್ರೀನಿವಾಸನ ಗತಿಯೂ ಅದೇ ಆಗುವುದಿತ್ತು. ಆದರೆ ಈ ಕಾಲಕ್ಕೆ ಬದುಕು ಮತ್ತು ವಂಶದ ಉಳಿಕೆ ಮುಖ್ಯವಾಗಿ ಪ್ರೇಮಿಗಳು ಒಂದಾಗಲು ಕಾರಣವಾಯಿತು.

ಕಾದಂಬರಿಯಲ್ಲಿರುವ ಸಂಘರ್ಷಗಳಲ್ಲಿ ವೈವಾಹಿಕ ಸಂಬಂಧದ್ದು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಇವುಗಳಲ್ಲಿ ಮೊದಲನೆಯದು ಸಿಂಗಪ್ಪ - ಕಾಡಮ್ಮನವರ ಮದುವೆಯದು. ಇದರ ಪರ್ಯಾವಸಾನ ಕಾಡಮ್ಮ ದೇವಪ್ಪನವರ ಮದುವೆ ಹಾಗೂ ಸಿಂಗಪ್ಪ ಗುಂಡಿಕ್ಕಿ ಕೊಳ್ಳುವುದರಲ್ಲಿ ಆದರೆ ರಾಮಪ್ಪಗೌಡ ಸಾವಿತ್ರಿಯರ ಮದುವೆಗಾಗಿ ಹುಟ್ಟಿಕೊಳ್ಳುವ ಸಂಘರ್ಷ ಎರಡನೆಯದು. ಇದರೊಂದಿಗೆ ಥಳುಕು ಹಾಕಿಕೊಳ್ಳುವ ಸಂಘರ್ಷ ಎರಡನೆಯದು. ಇದರೊಂದಿಗೆ ಥಳುಕು ಹಾಕಿಕೊಳ್ಳುವ ಮೂರನೇ ಸಂಘರ್ಷ ಶ್ರೀನಿವಾಸ ಸಾವಿತ್ರಿಯ ಮದುವೆಯದು. ಈ ಮೂಲಕ ಪ್ರತಿಷ್ಠೆಯೂ ಹೆಡೆ ಎತ್ತಿ ಬುಸುಗುಡುತ್ತದೆ. ಒಂದೇ ರಸಬಳ್ಳಿಯ ಟಿಸಿಲುಗಳು ಹಗೆಯಾಗುತ್ತವೆ, ಕೆಳೆಯಾಗುತ್ತವೆ. ಹಗೆಗೊಂಡವು ಹಟ ಸಾಧಿಸುತ್ತವೆ. ಕೆಳೆಗೊಂಡವು ಬೆಸೆದುಕೊಂಡು ಮುಂಬರಿ ಯುತ್ತವೆ. ಹಗೆತನದಲ್ಲಿ ಅಗಲಿಕೆ ಇದ್ದರೆ ಕೆಳೆತನದಲ್ಲಿ ಕೂಡುವ ಬೆಳವಣಿಗೆಯಿದೆ. ಈ ಎರಡೂ ಮುಖಾಮುಖಿ ಯಾಗುತ್ತಲೆ ಬದುಕನ್ನು ನಡೆಸುತ್ತವೆ. ತಮ್ಮದಾದುದನ್ನು

೫೯ನೇ ಪುಟಕ್ಕೆ

**ಸ. ರಘುನಾಥ**

# ಸಂಸರ ವಿಗಡ ವಿಕ್ರಮರಾಯ

ಎನ್. ಗೀತಾ

**ಕ**ನ್ನಡ ಸಾಹಿತ್ಯಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ಆದರೂ, ಸಾಹಿತ್ಯ ಪ್ರಕಾರಗಳಲ್ಲಿ ಪ್ರಮುಖವಾದ – ವಿದ್ಯಾವಂತರಿಗೂ, ಅವಿದ್ಯಾವಂತರಿಗೂ ತಲುಪಬಲ್ಲ 'ನಾಟಕ' – ಒಂದು ಲಿಖಿತ ನಾಟಕ ದೊರೆತಿಲ್ಲದಿರುವುದು ಬೆರಗನ್ನು ಉಂಟು ಮಾಡುತ್ತದೆ. ಹಳಗನ್ನಡ ಸಾಹಿತ್ಯ ಸಂದರ್ಭದಲ್ಲಿ ಕನ್ನಡ ಕವಿಗಳಿಗೆ ಸಂಸ್ಕೃತ ಸಾಹಿತ್ಯದ ಪ್ರಭಾವ ಹೇರಳವಾಗಿತ್ತೆನ್ನಬಹುದು. ಸಂಸ್ಕೃತದಲ್ಲಿ ಆಗ ಹೆಚ್ಚಾಗಿ ನಾಟಕಗಳು ರಚನೆಯಾಗಿದ್ದರೂ, ಆ ನಾಟಕಗಳ ಕೆಲವು ಪದ್ಯಗಳನ್ನು ಭಾಷಾಂತರಿಸಿಕೊಂಡ ನಮ್ಮ ಕವಿಗಳು ತಾವೇ ಏಕೆ ನಾಟಕಗಳನ್ನು ರಚಿಸಲಿಲ್ಲ ಎಂಬ ಕುತೂಹಲ ಸಾಹಿತ್ಯಾಸಕ್ತರಿಗೆ ಇದ್ದೇ ಇದೆ. ಈ ಕುರಿತು ಅನೇಕ ವಿದ್ವಾಂಸರು ತಮ್ಮ ಚರ್ಚೆ ಅಭಿಪ್ರಾಯ ಮಂಡಿಸಿದ್ದಾರೆ.

ಆದರೆ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದಾಗ, ನಾಟಕಗಳಿದ್ದ ಬಗ್ಗೆ ದಾಖಲೆಗಳಿವೆ. ಪಂಪನಲ್ಲಿ ನಾಟ್ಯ, ನಾಟಕ ಪ್ರಯೋಗದ ವರ್ಣನೆಗಳಿದ್ದರೆ, ರನ್ನನ 'ಗದಾಯುದ್ಧ' ತನ್ನ ಒಡಲಲ್ಲಿ ನಾಟಕವನ್ನೇ ಒಳಗೊಂಡಿರುವಂತೆ ರಚಿತವಾಗಿದೆ. ಹೀಗೆ ಪ್ರಾಚೀನ ಮಹಾಕಾವ್ಯಗಳಲ್ಲಿ ನಾಟಕೀಯ ಅಂಶಗಳಿದ್ದರೂ, ಕ್ರಿ. ಶ. ೧೭ನೆಯ ಶತಮಾನದ ಸಿಂಗರಾರ್ಯನ 'ಮಿತ್ರಾವಿಂದಾ ಗೋವಿಂದಾ' ನಾಟಕವೇ ಮೊದಲ ಕನ್ನಡ ನಾಟಕವಾಗಿದೆ. ಕರ್ಣಪಾರ್ಯನ 'ಮಾಳವೀ ಮಾಧವ', ಕೇಶಿರಾಜನ 'ಸುಭದ್ರಾಹರಣ' ಪ್ರಬೋಧ ಚಂದ್ರ - ಇವು ನಾಟಕಗಳಾಗಿರಬಹುದು ಎನ್ನುತ್ತಾರೆ. (ಕನ್ನಡ ರಂಗಭೂಮಿ) 'ರತ್ನಾವಳಿ' ಎಂಬ ಸಂಸ್ಕೃತ ನಾಟಕದ ತದ್ರೂಪ ಅನುವಾದ. ಆದರೆ ಯಕ್ಷಗಾನ, ದೊಡ್ಡಾಟ, ಸಣ್ಣಾಟಗಳ ಮೂಲಕ ಚಂದ್ರಶೇಖರ ಕಂಬಾರ ಅವರು ಕನ್ನಡ ರಂಗಭೂಮಿಗೆ ಸಾವಿರ ವರ್ಷಗಳ ಪರಂಪರೆ ಇರುವುದನ್ನು ಗುರುತಿಸುತ್ತಾರೆ.

ಆದೇನೇ ಇರಲಿ, ಕನ್ನಡ ಸಾಹಿತ್ಯ ತನ್ನ ಅತ್ಯಂತ ಪ್ರಮುಖವಾದ ಬೆಳವಣಿಗೆ ಸಾಧಿಸಿದ್ದು ೧೯ನೆಯ ಶತಮಾನದಲ್ಲಿ, ಇಂಗ್ಲಿಷ್ ಭಾಷೆ, ಸಾಹಿತ್ಯದ ಪ್ರಭಾವದಿಂದ ಎನ್ನಬಹುದು. ಅವುಗಳಲ್ಲಿ ನಾಟಕದ ವಿಷಯಕ್ಕೆ ಬಂದಾಗ ಮೊದಲು ರೂಪಾಂತರ, ಭಾಷಾಂತರ ನಾಟಕಗಳು, ದುಃಖಾಂತ ನಾಟಕಗಳು, ಸುಖಾಂತ ನಾಟಕಗಳು.... ಮುಂತಾದುವನ್ನು ಗುರುತಿಸಬಹುದು. ಈ ಎಲ್ಲಾ ಬಗೆಯ ನಾಟಕಗಳೂ ಒಳಗೊಂಡದ್ದು ಐತಿಹಾಸಿಕ, ಪೌರಾಣಿಕ, ಸಾಮಾಜಿಕ ವಸ್ತುಗಳನ್ನೇ. ಆದ್ದರಿಂದ ಆಯಾ ನಾಟಕಗಳು ಒಳಗೊಂಡಿರುವ ವಸ್ತುಗಳನ್ನಾಧರಿಸಿ ಆಧುನಿಕ ಕನ್ನಡ ನಾಟಕಗಳನ್ನು ಐತಿಹಾಸಿಕ, ಸಾಮಾಜಿಕ, ಪೌರಾಣಿಕ ನಾಟಕಗಳೆಂದು ವಿಭಾಗಿಸಬಹುದು.

ಈ ಪ್ರಬಂಧಕ್ಕೆ ಸಂಬಂಧಿಸಿದಂತೆ 'ಐತಿಹಾಸಿಕ ನಾಟಕ'ಗಳ ಬಗ್ಗೆ ಸ್ಥೂಲವಾಗಿ ಅರಿಯುವುದು ಅಗತ್ಯ ಎನಿಸುತ್ತದೆ. ಕನ್ನಡ ನಾಟಕಗಳು ಆರಂಭವಾದ ಮೊದಲಲ್ಲಿ ಪೌರಾಣಿಕ ವಸ್ತುಗಳಿಗೇ ಹೆಚ್ಚು ಮನ್ನಣೆ ದೊರೆತಿದೆಯೇ ಹೊರತು, ಐತಿಹಾಸಿಕ ವಸ್ತುವಿಗಲ್ಲ. ಇದಕ್ಕೆ ಅನೇಕ ಕಾರಣಗಳಿರಬಹುದು. ಆದರೆ ನವೋದಯ ಕಾಲಘಟ್ಟದಲ್ಲಿ ಕನ್ನಡದಲ್ಲಿ ಐತಿಹಾಸಿಕ ನಾಟಕಗಳು ರಚನೆಯಾದವು. ಇಲ್ಲಿ ಸಂಸ, ಎಂ. ಆರ್. ಶ್ರೀ. ಮೊದಲಾದವರು ಪ್ರಮುಖರಾಗಿದ್ದವರು. ಇವರಿಗಿಂತ ಮೊದಲು ಸ್ವತಂತ್ರ ಮತ್ತು ಅನುವಾದಿತ ಐತಿಹಾಸಿಕ ನಾಟಕಗಳು ರಚನೆಯಾಗಿದ್ದರೂ, ಅವು ಗಣನೀಯ ಸಂಖ್ಯೆಯಲ್ಲಿಲ್ಲದಿರುವ ಕಾರಣ, ಸಂಸರೇ ನಮ್ಮ ಮೊದಲ ಐತಿಹಾಸಿಕ ನಾಟಕಕಾರರು ಎಂದು ಗುರುತಿಸಬಹುದು.

''......ನಾಟಕವು ಇತಿಹಾಸದ ಸಂದೇಶವನ್ನು ಮಾತ್ರ ಸ್ವೀಕರಿಸಿ, ಅದರ ವಿವರಗಳನ್ನು ಸಮಕಾಲೀನ ಪರಿಸರದಿಂದಲೇ ತುಂಬಿಕೊಳ್ಳುತ್ತದೆ. ಸಮಕಾಲೀನ ನೆಲೆಯಲ್ಲಿ ಇತಿಹಾಸದ ಸಂಗತಿಗಳನ್ನು ಶೋಧಿಸುವುದೇ ಉತ್ತಮ ಐತಿಹಾಸಿಕ ನಾಟಕದ ಗುರಿ'' ಎಂಬ ಕೆ. ಮರುಳಸಿದ್ದಪ್ಪನವರ ಮಾತಿನ (ಆಧುನಿಕ ಕನ್ನಡ ನಾಟಕ, ಪು. ೨೧೦) ಹಿನ್ನೆಲೆಯಲ್ಲಿ ಈಗ ಸಂಸರ ಪ್ರಮುಖ ಐತಿಹಾಸಿಕ ನಾಟಕವಾದ 'ವಿಗಡ ವಿಕ್ರಮರಾಯ' ನಾಟಕವನ್ನು ಅವಲೋಕಿಸಬಹುದು.

ಎ.ಎನ್. ಸಾಮಿ ವೆಂಕಟಾದ್ರಿ ಅಯ್ಯರ್ ಅವರ ಅಂಕಿತನಾಮವೇ ಸಂಸ (ಕಂಸ) (೧೮೯೮, ಜನವರಿ ೧೩). ಮೈಸೂರು ಸಂಸ್ಥಾನದ ಯಳಂದೂರು ತಾಲ್ಲೂಕಿಗೆ ಸೇರಿದ ಅಗರ ಎಂಬ ಊರಿನಲ್ಲಿ ಜನನ. ವಿಗಡ ವಿಕ್ರಮರಾಯ, ಸುಗಣ ಗಂಭೀರ, ಬಿರುದಂತೆಂಬರಗಂಡ, ಬೆಟ್ಟದರಸು, ಮಂತ್ರಶಕ್ತಿ, ವಿಜಯನಾರಸಿಂಹ ಮುಂತಾದ ೨೩ ಐತಿಹಾಸಿಕ ನಾಟಕಗಳನ್ನು ಬರೆದಿದ್ದಾರೆ. 'ಈಶ ಪ್ರಕೋಪನ' – ದೇವರನ್ನು ಮೂದಲಿಸಿ ಸಿಟ್ಟಿಗೇರಿಸಲು ಯತ್ನಿಸುವ ವಾರ್ಧಕ ಷಟ್ಪದೀ ಕಾವ್ಯವನ್ನು, ನರಕದುರ್ಯೋಧನೀಯ (ಚಂಪೂಕಾವ್ಯ) ಅಚ್ಯುಂಬಶತಕ ಮುಂತಾದ ಪದ್ಯಕಾವ್ಯಗಳನ್ನು ಅವರದೇ ವ್ಯಾಖ್ಯಾನದಲ್ಲಿ ಅನೇಕರು ಕೇಳಿದ್ದರಂತೆ. ಆದರೆ ಈ ಪದ್ಯಕಾವ್ಯಗಳ ಒಂದು ಸಾಲೂ ಇದುವರೆವಿಗೂ ದೊರೆತಿಲ್ಲ. ಸಂಸರು ಸಂಸ್ಕೃತ ಜ್ಞಾನ, ಹಳಗನ್ನಡ ಪಾಂಡಿತ್ಯ ಹಾಗೂ ಇಂಗ್ಲಿಷ್ ತಿಳುವಳಿಕೆಯನ್ನು ಹೊಂದಿದವರಾಗಿದ್ದರು. (ಇಂಗ್ಲಿಷ್‌ನಲ್ಲೂ ಒಂದು ಕಾದಂಬರಿಯನ್ನು ಬರೆದಿದ್ದರಂತೆ). Soul ಅನ್ನು ಕುರಿತ ಒಂದು 'problem play' ಬರೆಯಬೇಕೆಂದೂ ತೊಡಗಿದ್ದರಂತೆ). ಹೀಗೆ ಸಾಹಿತ್ಯ ಕ್ಷೇತ್ರದಲ್ಲಿ ಅದ್ಭುತ ಪ್ರತಿಭೆ ಹೊಂದಿದ್ದ ಸಂಸರು ಮಾನಸಿಕ ಅಸ್ವಸ್ಥತೆಯಿಂದ ಕಣ್ಮರೆಯಾದುದು ದುರಂತ.

ಮೈಸೂರು ಒಡೆಯರಿಗೆ ಸಂಬಂಧಿಸಿದಂತೆ ವಂಶ ರತ್ನಾಕರ (ಚಾಮರಾಜೇಂದ್ರ ಒಡೆಯರ ಕುಟುಂಬ), ಇತಿಹಾಸಕಾರ ವಿಲ್ಕ್ಸನ್ ಹಾಗೂ ಮೈಸೂರು ಚರಿತ್ರೆಗೆ ಸಂಬಂಧಪಟ್ಟ ಇನ್ನೂ ಅಚ್ಚಾಗದ, ಕೈ ಬರಹದ ಹಲವು ಕಡತಗಳನ್ನು ಪರಿಶೀಲಿಸಿದ ಸಂಸರು ಈ ಮೂಲಗಳ ಆಧಾರದಿಂದ ಹಾಗೂ ತಮ್ಮ ಪ್ರತಿಕಲ್ಪನಾ ಸಾಮರ್ಥ್ಯದಿಂದ 'ವಿಗಡ ವಿಕ್ರಮರಾಯ' ನಾಟಕವನ್ನು ರಚಿಸಿದ್ದಾರೆ.

ಮೊದಲನೇ ರಾಜ ಒಡೆಯರ ಅಣ್ಣಂದಿರಾದ ಬೆಟ್ಟದ ಚಾಮರಾಜ ಒಡೆಯರ ಗಾಂಧರ್ವಪುತ್ರ ಅಥವಾ ಬಂಗಾರದವಳ ಮಗನೇ ವಿಕ್ರಮರಾಯ. ಈತ ಮೊದಲನೇ ರಾಜ ಒಡೆಯರಾದ ಮೇಲೆ ಅವರ ಮೊಮ್ಮಕ್ಕಳಾದ ಚಾಮರಾಜ ಒಡೆಯರ ಆಳ್ವಿಕೆಯ ಕಾಲದಲ್ಲಿ ದಳವಾಯಿಯಾಗಿದ್ದಾಗಿಯೂ, ಅಲ್ಲಿಂದ ಮುಂದೆ ೭ ವರ್ಷ ೧ ತಿಂಗಳು ೩ ದಿವಸ ದಳವಾಯಿತನ ಮಾಡಿದನೆಂತಲೂ, ಅನಂತರ ಬಂದ ಇಮ್ಮಡಿ ರಾಜಒಡೆಯರು ಆಳಿದಷ್ಟು ಕಾಲವೂ (೧ ವರ್ಷ ೫ ತಿಂಗಳು) ಅವರ ದಳವಾಯಿಯಾಗಿದ್ದು ಕೆಲವು ಪಾಳೇಗಾರರನ್ನು ಜಯಿಸಿ ಶ್ರೀರಂಗಪಟ್ಟಣಕ್ಕೆ ಬಂದನೆಂದೂ, ಈತನ ಮಂತ್ರ ಮಾಟಗಳಿಗೂ, ವಿಷ ಪ್ರಯೋಗಕ್ಕೂ ಮೊದಲನೆಯ ರಾಜ ಒಡೆಯರ ಮೊಮ್ಮಕ್ಕಳಾದ ಚಾಮರಾಜ ಒಡೆಯರೂ ಮತ್ತು ಇಮ್ಮಡಿ ರಾಜ ಒಡೆಯರೂ ಬಲಿಯಾದರೆಂದೂ ಮಹಿಶೂರ ಶ್ರೀಮನ್ಮಹರಾಜ ಚಾಮರಾಜೇಂದ್ರ ಒಡೆಯರವರ ವಂಶ ರತ್ನಾಕರ (೧೮೮೭)ದಲ್ಲಿ ವಿಕ್ರಮರಾಯನನ್ನು ಕುರಿತಂತೆ ಹೇಳಲಾಗಿದೆ.

ಇತಿಹಾಸದಲ್ಲಿ ಬಂದಿರುವ ಈ ಭೂಮಿಕೆಯ ಆಧಾರದ ಮೇಲೆಯೇ ದಳವಾಯಿ ವಿಕ್ರಮರಾಯನು 'ಸಂಸ'ರ ಕೈಯಲ್ಲಿ 'ವಿಗಡ' ವಿಕ್ರಮರಾಯನಾದುದು. 'ವಿಗಡ' ಎಂದರೆ ಸಾಹಸ, ಧೈರ್ಯ, ಕ್ರೌರ್ಯ, ಶೂರ ಎಂಬರ್ಥವೂ, ಪ್ರಚಂಡವಾದ, ಭಯಂಕರವಾದ, ಕೆಟ್ಟ, ಉದ್ಧಟತನದಿಂದ ಕೂಡಿದ ಎಂಬರ್ಥವೂ ಇದೆ. ವಿಕ್ರಮರಾಯನ ಇಂಥ 'ವಿಗಡತನ'ವನ್ನು ನಾಟಕದ ಆರಂಭದ ಪ್ರವೇಶದಲ್ಲೇ ಕಾಣಬಹುದು. ವಿಕ್ರಮನ ಎದುರಲ್ಲಿ 'ಕರಣೀಕ' ಮಹಾರಾಜರು ಬಂದ ಸಂಗತಿಯನ್ನು ತಿಳಿಸಲು ''....ಶ್ರೀಮನ್ಮಹಾರಾಜರವರೇ ಸ್ವತಃ ಬಿಜಯ ಮಾಡಿಸಿ...'' ಎಂದದ್ದಕ್ಕೆ ಅವನ ಕೋಪ ನೆತ್ತಿಗೇರಿ ಕೂಗಾಡುತ್ತಾನೆ. ಆಗ ಅರಮನೆಯ ವಾದ್ಯಗಳ ಘೋಷಣೆಯನ್ನು ಸಹಿಸಲಾರದೇ, ''.....ನಮ್ಮ ಪ್ರಾಸಾದದೆಡೆಯಲ್ಲಿ ಆರ, ಆವ ವಾದ್ಯಗಳಾದರೂ ಮೌನವಾಗಿ ನಡೆಯಬೇಕೆಂಬ ನಮ್ಮ ಕಟ್ಟಳೆಯನ್ನು ಆ ದುರುಳನಾವನಾದರೂ ಅವನಿಗೆ ತಿಳಿಹಿ ಬಾ-ಹೋಗು'' ಎಂದರಚುತ್ತಾನೆ. ಇಲ್ಲಿ ಈ ರೀತಿ ಆರ್ಭಟಿಸುತ್ತಿರುವವನು ರಾಜನಲ್ಲ; ದಳಪತಿ! ಬಂದಿರುವವನು ದಳಪತಿಯಲ್ಲ ಮಹಾರಾಜ! – ಹೀಗೆ ಇದರ ನಂತರದ ಸಂದರ್ಭದಲ್ಲೂ ಮಹಾರಾಜರನ್ನು ಏಕವಚನದಿಂದ ಸಂಬೋಧಿಸುವುದೂ, 'ಪುಟ್ಟಸ್ವಾಮಿ' ಎಂದು ಹೆಸರಿಡಿದೇ ಮಾತನಾಡಿಸುವುದೂ, ಎಲ್ಲಕ್ಕಿಂತ ಹೆಚ್ಚಾಗಿ ತಾನು ಕುಳಿತೇ, ರಾಜನಿಗೆ ಕುಳಿತುಕೊಳ್ಳಲು ಹೇಳುವುದೂ.... ಇತ್ಯಾದಿ ಅತ್ಯಂತ ಉದ್ಧಟತನದಿಂದ ವರ್ತಿಸುವ ವಿಕ್ರಮರಾಯ

'ವಿಗಡ'ನಾಗಿಯೇ ಪರಿಚಯಿಸಲ್ಪಡುತ್ತಾನೆ. ನಂತರ ಲೆಕ್ಕಪತ್ರ ಕೇಳಿದ ರಾಜನನ್ನೇ ಅರಮನೆಯ ವೈದ್ಯ ತಯಾರಿಸಿದ ವಿಷವನ್ನು ಹೆತ್ತ ತಾಯಿಯಿಂದಲೇ ಕುಡಿಸಿ ಕೊಲ್ಲಿಸುವುದು, ರಾಜನ ಸಾವಿಗೆ ಮೊದಲೇ ತೆರಕಣಾಂಬಿಯ 'ರಣಧೀರ'ನಿಗೆ 'ರಾಜ ಸ್ವರ್ಗಸ್ಥನಾದ' ಎಂದು ಓಲೆ ಕಳುಹಿಸುವುದು, ರಣಧೀರನನ್ನು ಕರೆಯಿಸಿ, ಅವನಿಗೆ ಕನಿಷ್ಠ ಸೌಜನ್ಯವನ್ನೂ ತೋರದೆ ಒಂದು ಬಗೆಯ ಬಂಧನದಲ್ಲಿರಿಸಿ ತಾನು ರಾಜಕಾರ್ಯನಿಮಿತ್ತ ಬೇರೆ ಊರಿಗೆ ತೆರಳುವುದೂ, ಅಲ್ಲಿನ 'ಗೌಡ' ಮೊದಲಾದವರ ಹತ್ತಿರ ಕಂದಾಯ ಕೇಳುವ ರೀತಿ, ರಣಧೀರನ ಜೊತೆಯಲ್ಲಿನ ಮಾತುಕತೆ, ತನ್ನ ಕಡೆಯ ಚನ್ನ-ರಂಗರನ್ನು ಸಂಶಯಿಸಿ ಅವರನ್ನು ಹಿಡಿದು ಚಿತ್ರಹಿಂಸೆಗೊಳಪಡಿಸಿ, ಸಾಯಿಸಬೇಕೆಂಬ 'ರಾಜನೀತಿ' ರೂಪಿಸುವುದೂ ಇಲ್ಲೆಲ್ಲಾ ವಿಕ್ರಮರಾಯನ ಪಾತ್ರ ಪೋಷಣೆ ತುಂಬಾ ಚೆನ್ನಾಗಿ ಮೂಡಿಬಂದಿದೆ.

ಆದರೆ ರಾಜ ಒಂದು ವ್ಯವಸ್ಥೆಯ ಪ್ರತಿನಿಧಿ. ಆತ ಶೂರನಿರಲಿ, ಹೇಡಿಯಿರಲಿ, ದಕ್ಷನಾಗಿರಲಿ, ಅದಕ್ಷನಾಗಿರಲಿ ಆತನಿಗೆ ಗೌರವ ಸ್ಥಾನ ನಮ್ಮ ಪರಂಪರೆಯಲ್ಲಿ ಇದ್ದೇ ಇದೆ. ಆದ್ದರಿಂದ ರಾಜನ ಎದುರಾಳಿ ಎಂಥ ಶೂರನೇ ಆದರೂ ಅವನು ಸಮಾಜ ಘಾತುಕ ಶಕ್ತಿಯಾಗಿಯೇ ಜನಕ್ಕೆ ಕಾಣಿಸುತ್ತಾನೆ. ಸಂಸರ ವಿಕ್ರಮರಾಯನೂ ಅಂಥ ಸಮಾಜ ಘಾತುಕ ಶಕ್ತಿಯಂತೆಯೇ ಚಿತ್ರಿಸಲ್ಪಟ್ಟಿದ್ದಾನೆ. ''......ಸುಣ್ಡಿಲ ಹಿಡಿದಾಟಕ್ಕೆ ಮೆಯ್ಗೊಟ್ಟಡಕವಾಗದೆ ತಪ್ಪಿಸಿಕೊಂಡು ಉರುಳು ಹೊರಳಿಯಾಡುವ ಬೇಲದ ಕಸುಗಾಯದು ಆನೆಯ ಕಾಲ ಕೆಳಗೆ ಜಜ್ಜಿ ಹೋಗುವುದು ಸಂಭವವಲ್ಲವೆ ?'' ಎಂದು ತನಗೆ ತಾನೇ ಗಜವಾಗಿ, ರಾಜನನ್ನು ಬೇಲದ ಕಸುಗಾಯಿಗೆ ಹೋಲಿಸಿ ಅಟ್ಟಹಾಸಗೈದರೂ, ಮುಂದೆ ಜನರ 'ಗಜಶಕ್ತಿ'ಗೆ ತಾನೇ ಬಲಿಯಾಗುವ ಸಂದರ್ಭ ಇತಿಹಾಸದಿಂದ ಮುಂದಿನವರು ಕಲಿಯಬೇಕಾದ ಪಾಠ. ಹೀಗೆ ಸಂಸರು ಚಿತ್ರಿಸಿದ ದಳವಾಯಿ ವಿಕ್ರಮರಾಯ ಆರ್ಭಟ, ಅಟ್ಟಹಾಸ, ಅಹಂಕಾರದಿಂದ ಮೆರೆದರೂ ಕಡೆಗೆ ಅನಿರೀಕ್ಷಿತವಾಗಿ ತನ್ನ ಕಡೆಯ ಆಳುಗಳಾದ ಚೆನ್ನ-ರಂಗರಿಂದಲೇ ಹತನಾಗುತ್ತಾನೆ.

ಮುಂದೆ ಈ ನಾಟಕದಲ್ಲಿ ಪರಿಗಣಿಸಬೇಕಾದ ಪ್ರಮುಖ ಪಾತ್ರ ರಣಧೀರ ಕಂಠೀರವ ನರಸರಾಜ ಒಡೆಯರದು. ಇಮ್ಮಡಿ ರಾಜ ಒಡೆಯರು ಕಾಲವಾದ ನಂತರ, ''ರಾಜ ಒಡೆಯರ ಧರ್ಮಪತ್ನಿಯವರಾದ ಯಡವನಹಳ್ಳೀ ತಿಮ್ಮಾಜಮ್ಮಣ್ಣಿಯವರು ತೆರಕಣಾಂಬಿಯಲ್ಲಿದ್ದ ತಮ್ಮ ಬಾವಂದಿರಾದ ಬೆಟ್ಟದ ಚಾಮರಾಜ ಒಡೆಯರವರ ೨ನೇ ಪುತ್ರರಾದ ಕಂಠೀರವ ನರಸರಾಜ ಒಡೆಯರ್ ಅವರನ್ನು ರಾಜಮರ್ಯಾದೆಯಿಂದ ಕರೆಯಿಸಿ ಶ್ರೀರಂಗಪಟ್ಟಣದಲ್ಲಿ ಪಟ್ಟಾಭಿಷೇಕ ಮಾಡಿಸಿದರು'' ಎಂದೂ, ಅವರು ತಿರುಚನಾಪಳ್ಳಿಯ ಜಟ್ಟಿಯನ್ನು ಸೋಲಿಸಿದ ಸಂದರ್ಭದ ಬಗ್ಗೆಯೂ ಮತ್ತು ಇಮ್ಮಡಿ ರಾಜ ಒಡೆಯರಿಗೆ ವಿಷ ಕೊಟ್ಟು ಸಾಯಿಸಿದ್ದಕ್ಕಾಗಿ ವೈದ್ಯನನ್ನೂ, ವಿಕ್ರಮರಾಯರನ್ನೂ ಕರೆಯಿಸಿ ವಿಚಾರಣೆ ನಡೆಸಿ, ಅವರು ತಪ್ಪೊಪ್ಪಿಕೊಂಡ ಮೇಲೆ ತಮ್ಮ ತಂದೆ (ಬೆಟ್ಟದ ಚಾಮರಾಜ ಒಡೆಯರ)ಯ ಅನುಮತಿಯಂತೆ ಪ್ರಾಣಾಂತ ಶಿಕ್ಷೆಯನ್ನು ವಿಧಿಸಿದ್ದಾಗಿಯೂ ವಂಶರತ್ನಾಕರದಲ್ಲಿ ಉಲ್ಲೇಖವಾಗಿದೆ. (ಪು. ೬೫-೬೭), (ವಂಶಾವಳಿಯಲ್ಲಿಯೂ ಇದೇ ರೀತಿ ಇದೆ). ಆದರೆ ವಿಲ್ಕ್ಸ್ ಚರಿತ್ರಕಾರನು ಹೇಳಿರುವುದೇ ಬೇರೆ. ಕಂಠೀರವ ನರಸರಾಜ ಒಡೆಯರನ್ನು ವಿಕ್ರಮರಾಯನೇ ಪಟ್ಟಕ್ಕೆ 'ಆಯ್ದು' ಕರೆಸಿಕೊಂಡನೆಂದೂ, ಅವರು ಮೈಸೂರಿಗೆ ಬಂದಾಗ ಅವರನ್ನು ಉಪೇಕ್ಷಿಸಿ ಅಲಕ್ಷ್ಯ ಮಾಡಿದನೆಂದೂ, ಅಷ್ಟರಲ್ಲಿ ಆ ದಳವಾಯಿಯ ರಾಜದ್ರೋಹವು ಪ್ರಕಟವಾಗಿ, ಅವನ ಸಂಹಾರವಾಯಿತೆಂದೂ, ಅದರ ಮಾರನೇ ದಿವಸವೇ ಕಂಠೀರವ ನರಸರಾಜ ಒಡೆಯರಿಗೆ ಪಟ್ಟಾಭಿಷೇಕವಾಯ್ತೆಂದೂ ವಿಲ್ಕ್ಸ್ ಹೇಳುತ್ತಾನೆ.

ಸಂಸರು ತಮ್ಮ ನಾಟಕಕ್ಕೆ ೨ನೇ ಆಧಾರವನ್ನೇ ಅವಲಂಬಿಸಿದ್ದಾರೆನ್ನಬಹುದು. ನಾಟಕದಲ್ಲಿ ಲೆಕ್ಕಪತ್ರಗಳನ್ನು ಪರಿಶೀಲಿಸಿ, ಬಾಕಿ ಲೆಕ್ಕಪತ್ರಗಳನ್ನು ಕೇಳಿ ಆ ಸಂಬಂಧದ ವಿಚಾರಣೆಯ ಸಭೆಯನ್ನು ಮರುದಿನವೇ ಕರೆಯುವುದಾಗಿ ಹೇಳಿಹೋದ ಇಮ್ಮಡಿ ರಾಜ ಒಡೆಯರ ಪಾಲಿಗೆ ಆ ನಾಳೆಯೇ ಬಾರದಂಥ ಕಠೋರ ಶಿಕ್ಷೆಯನ್ನು ವಿಕ್ರಮರಾಯ ವಿಧಿಸುತ್ತಾನೆ. ಅಷ್ಟಲ್ಲದೆ ರಾಜನಿನ್ನೂ ಬದುಕಿದ್ದಾಗಲೇ ಅವನು 'ಕಾಲವಾದ' ಬಗ್ಗೆ ಓಲೆ ಬರೆದು ತುಂಗರಾಯನ ಕೈಯಲ್ಲಿ ತೆರಕಣಾಂಬಿಗೆ – ರಣಧೀರ ನರಸರಾಜನಿಗೆ ತಲುಪಿಸುವಂತೆ ಹೇಳಿ ಕಳಿಸುತ್ತಾನೆ. ಇಲ್ಲಿಂದಲೇ ನಾಟಕದಲ್ಲಿ ರಣಧೀರನ ಪ್ರವೇಶವಾಗುತ್ತದೆ. ಸಂಸರು ಈ ರಣಧೀರ ಕಂಠೀರವ ನರಸರಾಜ ಒಡೆಯರಿಗೆ ಮೈಸೂರು ಅರಸರಲ್ಲೇ ಅತ್ಯಂತ ಮಹತ್ವದ ಸ್ಥಾನ ಕೊಟ್ಟಿದ್ದಾರೆ. ಇದಕ್ಕೆ ಸಾಕ್ಷಿಯಾಗಿ ಈ ರಾಜನ ಪಾತ್ರ ಪೋಷಣೆಯನ್ನು ತಮ್ಮ ಹದಿಮೂರು ನಾಟಕಗಳಲ್ಲಿ ಹಂತ ಹಂತವಾಗಿ ಮಾಡಿರುವುದು ಕಂಡುಬರುತ್ತದೆ.

ತೆರಕಣಾಂಬಿಯ ಗರಡಿಯಲ್ಲಿ ವಿಕ್ರಮರಾಯನ ಓಲೆಯನ್ನು ಕಂಡ ರಣಧೀರನು ತನಗೆ ಅನಾಯಾಸವಾಗಿ ಬಂದೊದಗಿದ ರಾಜಪದವಿಯನ್ನು ತೆರೆದ ಬಾಹುಗಳಿಂದ ಕಣ್ಮುಚ್ಚಿಕೊಂಡು ಸ್ವೀಕರಿಸಿ ಆನಂದಿಸುವುದಿಲ್ಲ. ಬದಲಿಗೆ ದಳವಾಯಿಯ ಲೇಖನವನ್ನು ಮತ್ತೊಮ್ಮೆ ಓದಿಸುತ್ತಾನೆ. ''ಬರೆದಿರುವುದು ವಂಶಕ್ಕೆ ಯಜಮಾನರಾಗಿರುವ ಅಪ್ಪಾಜಿಯವರಿಗಲ್ಲ; ನನಗೆ! ಏಕವಚನದಲ್ಲಿ!'' ಎಂದು ಆಶ್ಚರ್ಯ ವ್ಯಕ್ತಪಡಿಸುತ್ತಾನೆ ಹಾಗೂ ''.....ಇದರೊಳಗೆಲ್ಲಾ ಏನೋ ಕೃತ್ರಿಮ ಸಂಧಾನವಿರುವಂತಿದೆಯಲ್ಲವೇ ?'' ಎಂದೂ ಸೂಕ್ಷ್ಮಗ್ರಾಹಿಯಾಗಿ ತರ್ಕಿಸುತ್ತಾನೆ. ಹಾಗೇ ''ತನ್ನನ್ನು ಪಟ್ಟಕ್ಕೆ ಆಯ್ದುದಾಯ್ತು'' ಎಂಬ ಮಾತಿನಿಂದ ದಳವಾಯಿಯ ಸರ್ವಾಧಿಕಾರಿ ಮನೋಭಾವವನ್ನು ಗುರುತಿಸುತ್ತಾನೆ. ಅದಕ್ಕೆ ತಕ್ಕಂತೆ ನಿರೀಶನೂ, ''ಅಹುದು ಮಹಾಸ್ವಾಮಿ, ಈವರಿನವರಿಬ್ಬರಂತೆ ಮುಂದಣ ಮಹಾರಾಜರೂ ತನ್ನ ಕಯ್ಯಾಟದ ಬೆರ್ಚು ಮಾತ್ರವಾಗಿರಬೇಕೆಂಬುದು ಅದರ ಭಾವ'' ಎಂದು ವಿಕ್ರಮರಾಯನ ದುರಾಲೋಚನೆಯನ್ನು ಕುರಿತು ತನ್ನ ಅಭಿಪ್ರಾಯವನ್ನು ತಿಳಿಸುತ್ತಾನೆ.

ಈ ಭಾಗದಲ್ಲೆಲ್ಲಾ ರಣಧೀರನ ಪ್ರತಾಪವನ್ನು ಸಂಸರು ಅವನ ಗರಡಿ ಗೆಳೆಯರಾದ ನಿರೀಶ, ಸಕ್ಕ, ಮಲ್ಲಹನುಮ ಮುಂತಾದವರ ಮೂಲಕ ಹೇಳಿಸುತ್ತಾ ಆ ಪಾತ್ರದ ಮಹತ್ವವನ್ನು ಹೆಚ್ಚಿಸಿದ್ದಾರೆ. ಈ ಭಾಗದಲ್ಲಿ ಬರುವ ನಗದ ಆದರೆ ನಗಿಸುವ ನಿರೀಶ ಮುಂತಾದವರ ಪಾತ್ರಗಳೂ ಸಹ ಗಮನ ಸೆಳೆಯುತ್ತವೆ. ರಣಧೀರನಿಗೆ ಗೊತ್ತಾಗದಂತೆ ಅವರೆಲ್ಲಾ ಅವರವರ ಬಟ್ಟೆ ಬುತ್ತಿ ಮುಂತಾದುವನ್ನು ಮರಿಸಿಕೊಂಡು ಕತ್ತಿಗುದಿರೆಗಳನ್ನೊಡಗೊಂಡು ಸನ್ನದ್ಧರಾಗುತ್ತಾರೆ. ಇಲ್ಲಿ ನಿರೀಶ, ಕಂಠೀರವನ ವೀರಾವೇಶ ಬದುಕು, ಅವನ ಪೌರುಷ, ದಕ್ಷ ಆಡಳಿತ, ಆತನ ಬಗ್ಗೆ ತನಗಿರುವ ಸ್ವಾಮಿನಿಷ್ಠೆ ಮತ್ತು ರಣಧೀರನಿಗೆ ವಿರುದ್ಧ ಅರಮನೆಯಲ್ಲಿ ಹೂಡಲಾಗುತ್ತಿರುವ ಸಂಚು – ಇವುಗಳ ಬಗ್ಗೆ ಸಹಯೋಗಿಗಳಿಗೆ ತಿಳಿಯಹೇಳುತ್ತಾನೆ. ''ನಾವೆಲ್ಲಾ ಒಂದೇ ಭಾಷೆಯ ಕಟ್ಟಾಳ್ಗಳಾಗಿರುವುದರಿಂದ ಶಪಥ ಮುಂತಾದವು ಬೇಕಾಗಿಲ್ಲ'' ಎಂದು ಹೇಳುವ ಈ ಮಾತುಗಳಲ್ಲಿ ರಣಧೀರನ ಸಾಹಸ ಶೌರ್ಯಗಳ ಜೊತೆಗೆ ಸ್ನೇಹ -ವಿಶ್ವಾಸಗಳೂ, ಪ್ರಜಾವಾತ್ಸಲ್ಯ, ಸಂಯಮಪೂರ್ಣ ನಡತೆ, ಉದಾತ್ತ ಚಾರಿತ್ರ್ಯ ಇವೆಲ್ಲವನ್ನೂ ಕಾಣಬಹುದು. ಹಾಗೆಯೇ ಈ ಗೆಳೆಯರ ಕ್ರಾಂತಿಕಾರೀ ಮನೋಭಾವ, ಒಂದೇ ಭಾಷೆಯಲ್ಲಿರಬೇಕಾದ ಒಗ್ಗಟ್ಟಿನ ಮನೋಭಾವ, ರಾಜಕೀಯ ದೂರಾಲೋಚನೆ, ಯುವಕರಿಗಿರಬೇಕಾದ ಉತ್ಸಾಹ ಮುಂತಾದ ಉತ್ತಮ ಗುಣಗಳನ್ನು ಕಾಣಬಹುದಾಗಿದೆ. ಹೀಗೆ ಈ ಯುವ ಪಡೆಯ ದಳಪತಿಯಾಗಿ ಆಯ್ಕೆಯಾದ ನಿರೀಶನ ಮುಂದಾಳತ್ವದಲ್ಲಿ ರಣಧೀರನಿಗೆ ಗೊತ್ತಾಗದಂತೆಯೇ ಆತನ ಸುತ್ತ ಪ್ರೀತಿಪೂರ್ವಕವಾದ, ಸ್ನೇಹಪೂರ್ವಕವಾದ, ರಕ್ಷಾಕವಚದಂಥ ವಜ್ರಕೋಟೆಯೊಂದು ನಿರ್ಮಿತವಾಗುತ್ತದೆ.

ಮುಂದೆ ಈ ಯುವಕರು ಮೈಸೂರಿನ ಪ್ರಜೆಗಳು ತಮ್ಮ ಮಹಾರಾಜನಾಗುವ ರಣಧೀರನ ಬಗ್ಗೆ ಆಡುವ ಅಭಿಮಾನದ ಮಾತುಗಳನ್ನು ಕೇಳಿ, ಬೇಕೆಂತಲೇ ಅವರನ್ನು ಕೆರಳಿಸುವಂಥ - ಅವರ ಪ್ರೀತಿಯ, ವಿಶ್ವಾಸದ ಸಂಕೇತದ ಹಾಗಿರುವ 'ರಣಧೀರ'ನ ಬಗ್ಗೆ




ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯ ಸಾಹಿತ್ಯ ಪ್ರಚಾರ ಆಂದೋಲನ ಮುಂದುವರಿಕೆಯಾಗಿ ದಿನಾಂಕ ೧೧.೮.೨೦೦೩ರಂದು ಜಯದೇವ ಹೃದ್ರೋಗ ಚಿಕಿತ್ಸಾಲಯದಲ್ಲಿ ಕರ್ನಾಟಕದ ವೈದ್ಯಕೀಯ ಶಿಕ್ಷಣ ಸಚಿವರಾದ ಡಾ|| ಎ. ಬಿ. ಮಾಲಕ ರಡ್ಡಿ ಅವರು ಪುಸ್ತಕ ಪ್ರದರ್ಶನ ಉದ್ಘಾಟಿಸಿದರು ಮತ್ತು ಡಾ|| ಪದ್ಮಿನಿ ಪ್ರಸಾದ್ ರಚಿಸಿರುವ 'ಲೈಂಗಿಕ ಆರೋಗ್ಯ' ಕೃತಿ ಬಿಡುಗಡೆ ಮಾಡಿದರು.

ಚಿತ್ರದಲ್ಲಿ(ಎಡದಿಂದ ಬಲಕ್ಕೆ) ಡಾ|| ಪದ್ಮಿನಿ ಪ್ರಸಾದ್, ಡಾ|| ಎಸ್. ಪ್ರಭುದೇವ, ಡಾ|| ಎ. ಬಿ. ಮಾಲಕ ರಡ್ಡಿ ಮತ್ತು ಡಾ|| ಲೀಲಾವತಿ ದೇವದಾಸ್.

ಲಘುವಾದ ಮಾತುಗಳನ್ನಾಡುವ ಸಂದರ್ಭವೂ ಸಹ 'ರಣಧೀರ'ನ ಸಾಹಸ ಶೌರ್ಯಗಳ ವರ್ಣನೆಗೇ ಮೀಸಲಾದಂತಿದ್ದರೂ, ನಾಟಕದ ಓಟಕ್ಕೆ ತಡೆಯಾಗದೇ ಪೂರಕವಾಗಿರುವುದನ್ನು ಗಮನಿಸಬಹುದು. ಮತ್ತೆ ಇಲ್ಲಿನ ಪ್ರಜೆಗಳು ನಿಷ್ಕ್ರಿಯರಲ್ಲ. ಅವರಿಗೆ ತಮ್ಮ ನಾಡನ್ನು, ತಮ್ಮ ವ್ಯವಸ್ಥೆಗೆ ಕುಂದನ್ನು ತಂದ ಸಮಾಜಘಾತುಕರನ್ನು ಸದೆಬಡಿಯಲು 'ರಾಜ'ನೇ ಬರಬೇಕೆಂದಿಲ್ಲ.

ಆದರೆ ದುಷ್ಟ ದಳವಾಯಿ ವಿಕ್ರಮರಾಯ ಅವಸಾನ ಹೊಂದುವುದು ರಣಧೀರನಿಂದಲೂ ಅಲ್ಲ; ಈ ಉತ್ಸಾಹಿ ಕ್ರಾಂತಿಕಾರಿಗಳಿಂದಲೂ ಅಲ್ಲ. ಬದಲಾಗಿ ಆತನ ಕೊಲೆ ಮಾಡುವವರು ವಿಕ್ರಮರಾಯನ ಕಾವಲುಗಾರರೇ ಆದ ಚೆನ್ನ-ರಂಗರು. ನಾಟಕದ ಈ ಭಾಗವಂತೂ ತುಂಬಾ ಸೊಗಸಾಗಿ ಮೂಡಿಬಂದಿದೆ.

ಮತ್ತು ನಾಟಕದಲ್ಲಿ ವಿಕ್ರಮರಾಯನ ಕೃತ್ರಿಮಕ್ಕೆ, ಸಂಚಿಗೆ ಹೆಗಲು ಕೊಡುವ ಪಾತ್ರಗಳೆಂದರೆ – ಬೊಕ್ಕಸದ ಹಣವನ್ನು ನುಂಗಿ, ತಾನೆಲ್ಲಿ ಸಿಕ್ಕಿಬೀಳುತ್ತೇನೋ ಎಂಬ ಭಯದಿಂದ ಹಾಗೂ ವಿಕ್ರಮರಾಯನ ಕೆಟ್ಟ ಸಲಹೆಯನ್ನೊಪ್ಪಿ ಔಷಧಿ ಎಂದು ವಿಷ ತಯಾರಿಸಿ ಕೊಡುವ ವೈದ್ಯ ಬೊಮ್ಮರಸ, ವಿಕ್ರಮನ ಹೆದರಿಕೆಯಿಂದ ಅವನ ಸಂಚಿನ ಕಾರ್ಯಕ್ಕೆ ಹೆಗಲು ಕೊಡುವ ತುಂಗರಾಯ ಮುಂತಾದ ಪಾತ್ರಗಳೂ ಗಮನಾರ್ಹವಾದುವೇ.

ಸ್ತ್ರೀ ಪಾತ್ರಗಳ ಬಗ್ಗೆ ಹೇಳಬೇಕಾದುದೇನೂ ಇಲ್ಲ. ರಾಜಮಾತೆ ತಿಮ್ಮಾಜಮ್ಮಣ್ಣಿ ಬುದ್ಧಿವಂತಳಾದರೂ ಅಸಹಾಯಕಿ. ಚೆಂದವ್ವೆ, ರುದ್ರವ್ವೆಯರು ರಾಜಮಾತೆಯ ಕೈಗೊಂಬೆಗಳು. ಇನ್ನು ಇಮ್ಮಡಿ ರಾಜ ಒಡೆಯರ ಆಸ್ಥಾನ ನರ್ತಕಿಯರ ಪಾತ್ರಗಳಲ್ಲಿ ವಿಶೇಷವೇನಿಲ್ಲ. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿಗೆ ಯಾವ ಬಗೆಯ ಸ್ವಾತಂತ್ರ್ಯವೂ ಇಲ್ಲದಿದ್ದ ಕಾಲದಲ್ಲಿ ಬಂದ ಈ ನಾಟಕದ ಸ್ತ್ರೀ ಪಾತ್ರ ಚಿತ್ರಣದಲ್ಲಿ ನಾಟಕಕಾರರಿಂದ ಹೆಚ್ಚಿನದೇನನ್ನೂ ನಿರೀಕ್ಷಿಸುವಂತಿಲ್ಲ.

ಇನ್ನು ನಾಟಕದ ಭಾಷೆಯ ಬಗ್ಗೆ ಹೇಳಬಹುದಾದರೆ, ನವೋದಯ ಪೂರ್ವದ ಆಡು ಭಾಷೆಯನ್ನೇ ಬರಹ ರೂಪಕ್ಕೆ ತಂದಿರುವುದನ್ನು ಗಮನಿಸಬಹುದು. ಉದಾ: ಶ್ರೀಮನ್ತ, ಸಮರ್ಪಿಸಿ, ಜೀರ್ಣಿಸಿ, ಅನ್ತಃಪುರ, ಸನ್ತೋಷ, ವೃತ್ತಾನ್ತ ಇತ್ಯಾದಿ. ''ಈ ಪದಗಳು ಹಳೆಯ ಕಾಲದ ಒಂದು ಆವರಣವನ್ನು ಕಟ್ಟಿಕೊಡುವುದು ಮಾತ್ರವಲ್ಲ, ಹಲವು ಕಾಲದ ಬಳಕೆಯಿಂದ ವಿಸ್ತಾರವಾದ ಅರ್ಥವನ್ನು ಅಡಕಮಾಡಿಕೊಂಡು ಬದುಕಿ ಬಾಳಿದಂಥವು. ಇಂತಹ ಅರ್ಥವತ್ತಾದ ಪದಗಳನ್ನು ಪ್ರಯೋಗಿಸಿ, ಹಳೆಯ ಕಾಲದ ಬಂಧವನ್ನು ಆಶ್ರಯಿಸಿ ಹೆಣೆದಿರುವ ಈ ಸಂಸರ ಗದ್ಯಶೈಲಿಯ ವಿಗಡವೆನಿಸಿದ ವಿಕ್ರಮರಾಯನ ಆಟಗಳಿಗೆ ತಕ್ಕ ಹೊರಮೈ ಎನ್ನಿಸಲು ಸಮರ್ಥವಾದ ನಿಷ್ಠುರ ಶೈಲಿ'' ಎಂಬ ಜಿ. ಪಿ. ರಾಜರತ್ನಂ ಅವರ (ವಿಗಡ ವಿಕ್ರಮ ಚರಿತ - ಪು. ೭೧) ಮಾತು, ಹಾಗೂ ''ಸಂಸರ ನಾಟಕಗಳ ಭಾಷೆ, ಐತಿಹಾಸಿಕ ವಾತಾವರಣ ನಿರ್ಮಾಣಕ್ಕೆ ಬಹುತೇಕ ಸಹಕಾರಿಯಾಗಿರುವಂತಹುದು... ನಾಟಕಗಳ ಸಂಭಾಷಣೆಯು ಭಾಷಾ ವೈಶಿಷ್ಟ್ಯ, ಪಾತ್ರಗಳ ಘನತೆ ಗೌರವಗಳನ್ನು ಉಚಿತವರಿತು ಮೆರೆಯಿಸುವಂತಹುದು'' ಎಂಬ ಮರುಳಸಿದ್ದಪ್ಪನವರ ಮಾತು (ಆಧುನಿಕ ಕನ್ನಡ ನಾಟಕ) – ಸಂಸರ ಭಾಷಾ ಪ್ರೌಢಿಮೆಗೆ ಸಾಕ್ಷಿಯಾಗಿವೆ.

ಇನ್ನು ಈ ನಾಟಕದ ಹೆಸರೇ ಹೇಳುವಂತೆ ಇದು ವಿಗಡ ವಿಕ್ರಮರಾಯನ ಕತೆ. ಆದರೆ ಈ ವಿಕ್ರಮರಾಯ ಈ ನಾಟಕದ ನಾಯಕನಲ್ಲ. ಖಳನಾಯಕ. ಖಳನಾಯಕನ ಹೆಸರನ್ನು ನಾಟಕದ ಶೀರ್ಷಿಕೆಗೆ ಇಟ್ಟಿರುವುದು ಆಶ್ಚರ್ಯದ ಸಂಗತಿ. ಹಾಗಾದರೆ ಇದು ದುರಂತ ನಾಟಕವೇ ? ವಿಕ್ರಮರಾಯ ದುರಂತ ನಾಯಕನೇ ? ಎಂದರೆ 'ಇಲ್ಲ' ಎನ್ನಲೇಬೇಕು. ಕಾರಣ ಈ ನಾಟಕದ ನಾಯಕ ದುರಂತ ನಾಯಕನಲ್ಲ. ಏಕೆಂದರೆ ಈತ ಸರ್ವಗುಣ ಸಂಪನ್ನ, ಏಕ ಗುಣಹೀನನಲ್ಲ; ಈತನಲ್ಲಿ ಗುರ್ತಿಸಬಹುದಾದ ಒಂದೂ ಒಳ್ಳೆಯ ಗುಣಗಳಿಲ್ಲ. ಈತನ ಕೊಲೆಯಾದ ನಂತರ ಇಲ್ಲಿನ ಪಾತ್ರಗಳಿಗಾಗಲೀ, ಓದುಗನಿಗಾಗಲೀ ಯಾವ ಬಗೆಯ ಕರುಣೆ, ಅನುಕಂಪವೂ ಮೂಡುವುದಿಲ್ಲ. ಅಹಂಕಾರಿಯೂ, ಉದ್ಧಟನೂ, ಧೂರ್ತನೂ ಆಗಿರುವ ಅವನ ಅಂತ್ಯದ ನಾಟಕಕ್ಕೆ ಒಂದು ರೀತಿಯ ಸುಖಾಂತ್ಯವೇ ಆಗುತ್ತದೆ.

''ನಾಟಕವಾಗಿ 'ವಿಗಡ ವಿಕ್ರಮರಾಯ' ಸಂಸರ ಶ್ರೇಷ್ಠ ಕೃತಿ ಎಂಬುದರಲ್ಲಿ ಸಂದೇಹಕ್ಕೆಡೆಯಿಲ್ಲ. ನಾಟಕಕಾರರ ದೃಶ್ಯ ನಿರ್ಮಾಣಶಕ್ತಿ ಈ ನಾಟಕದಲ್ಲಿ ಶಿಖರವನ್ನು ಮುಟ್ಟಿದೆ. ೧೨ ಪ್ರವೇಶಗಳ ಈ ನಾಟಕದ ಒಂದೊಂದು ಪ್ರವೇಶವೂ ನಾಟಕದ ಕ್ರಿಯಾಗತಿಯನ್ನು ನಿರ್ದಿಷ್ಟ ಗುರಿಯೆಡೆಗೆ ತಪ್ಪದೆ ಸಾಗಿಸುತ್ತದೆ. ಈ ಬಗೆಯ ಗಾಢವಾದ ವಸ್ತು ರಚನೆ, ಅವರ ಉಳಿದ ನಾಟಕಗಳಲ್ಲಿ ಕಂಡುಬರುವುದಿಲ್ಲ. ವಿಕ್ರಮರಾಯನ ಪತನ, ರಣಧೀರನ ಉದಯವನ್ನು ಸಾಧಿಸಲು ಮೊದಲ ಎಂಟು ದೃಶ್ಯಗಳಲ್ಲಿ ಸಮರ್ಥ ಪೂರ್ವಸಿದ್ಧತೆ ಪಡೆಯುತ್ತದೆ. ಎರಡೂ ಪಕ್ಷಗಳ ಉಪನಾಯಕರು ತಮ್ಮ ನಾಯಕರ ಅಭ್ಯುದಯಕ್ಕಾಗಿ ನಡೆಸುವ ಸಂಚು ಹೋರಾಟಗಳ ರಾಜಕೀಯ ಮಹತ್ವವನ್ನು ಬಹು ಸ್ವಾರಸ್ಯಕರವಾಗಿ ಘಟನಾಬದ್ಧವಾಗಿ ಪ್ರತಿಪಾದಿಸಲಾಗಿದೆ'' – ಎಂಬ ಕೆ. ಮರುಳಸಿದ್ದಪ್ಪನವರ ಮಾತುಗಳು ಈ ನಾಟಕದ ತೂಕವನ್ನು ಹೆಚ್ಚಿಸುತ್ತದೆ.

ಕೊನೆಯದಾಗಿ, ಸಂಸರ ಈ ನಾಟಕ ಇಂದು ಪ್ರಸ್ತುತವೇ ಎಂದರೆ 'ಹೌದು' ಎನ್ನಲೇಬೇಕು. ಕಾರಣ, ಟಿ. ಎಸ್. ಎಲಿಯಟ್ ''ವರ್ತಮಾನ ಕಾಲದ ನಾವು ಭೂತಕಾಲದಿಂದ ಮಾರ್ಗದರ್ಶನ ಪಡೆದು, ಭವಿಷ್ಯತ್ತನ್ನು ರೂಪಿಸಿಕೊಳ್ಳಬೇಕು'' ಎನ್ನುತ್ತಾನೆ. ಏಕೆಂದರೆ, ನಾವು ಇತಿಹಾಸದಿಂದ ಪಾಠ ಕಲಿಯಲೇಬೇಕು. ಅಂಥ ಪಾಠವನ್ನು 'ವಿಗಡ ವಿಕ್ರಮರಾಯ'ದಂಥ ಐತಿಹಾಸಿಕ ನಾಟಕಗಳು ನಮಗೆ ಕಲಿಸಿಕೊಡುತ್ತವೆ. ಆದ್ದರಿಂದ ಈ ನಾಟಕದಲ್ಲಿ ಸಾಮಾಜಿಕ ಪ್ರಜ್ಞೆ ಇದೆ ಎಂದೇ ನನ್ನ ಅಭಿಪ್ರಾಯ. ಹೇಗೆಂದರೆ, ಅಂದು ರಾಜಪ್ರಭುತ್ವ ; ಇಂದು ಪ್ರಜಾಪ್ರಭುತ್ವ. ಆಗ ದಕ್ಷರೂ, ಅದಕ್ಷರೂ, ಹೇಡಿಗಳೂ ಆದ ರಾಜರಿದ್ದರು; ಈಗ ಅಂಥ ರಾಜಕಾರಣಿಗಳಿದ್ದಾರೆ. ರಾಜಕೀಯದಲ್ಲಿ ತಂತ್ರ, ಪ್ರತಿತಂತ್ರ, ಕುತಂತ್ರಗಳು ಅಂದೂ ಇದ್ದುವು; ಇಂದೂ ಇವೆ. ಜೊತೆಗೆ ವಿಗಡವಿಕ್ರಮರಾಯನಂಥ ಸಮಾಜಘಾತುಕರು ಎಲ್ಲಾ ಕಾಲದಲ್ಲೂ ಇರುವವರೇ. ಅವರ ಅವಸಾನ ಚೆನ್ನ-ರಂಗರಂಥ ಜನಸಾಮಾನ್ಯರಿಂದಲೇ ಆಗಬೇಕು. ಒಂದು ದೊಡ್ಡ ವಂಶದ ಚರಿತ್ರೆಯ ಮೂಲಕ ಜನಜೀವನದ ಮೌಲ್ಯಗಳು ಮುಂದುವರಿಯುತ್ತವೆಂದು ನಂಬಿದ್ದ ಸಂಸರ ಆಶಯ ಕೂಡಾ ಇದೇ ಆಗಿದ್ದಿರಬೇಕು. ಈ ದೃಷ್ಟಿಯಲ್ಲಿ ಈ ನಾಟಕ ಮಹತ್ವದ್ದೆನಿಸುತ್ತದೆ.

ಎನ್. ಗೀತಾ
ಹಿರಿಯ ಶ್ರೇಣಿ ಕನ್ನಡ ಉಪನ್ಯಾಸಕರು, ಸರ್. ಎಂ. ವಿ. ಸರ್ಕಾರಿ ಕಲಾ ಮತ್ತು ವಾಣಿಜ್ಯ ಕಾಲೇಜು
ನ್ಯೂಟೌನ್, ಭದ್ರಾವತಿ - ೫೭೭ ೩೦೧

*೫೬ನೇ ಪುಟದಿಂದ*

ಸಂಗೋಪನಗೊಳಿಸಿಕೊಂಡು ತಮ್ಮವರ ಸುಖ ಸಂತೋಷವನ್ನು ರಕ್ಷಿಸಿಕೊಳ್ಳುತ್ತದೆ. ಒಕ್ಕಲುತನದ ಮೇಲಿನ ಅಕ್ಕರೆಯಷ್ಟೆ ಅಕ್ಕರೆಯನ್ನು ತಮ್ಮ ಜನ ಜಾನುವಾರುಗಳಲ್ಲಿ ನಿಕ್ಷಿಪ್ತಗೊಳಿಸುತ್ತವೆ. ತಮ್ಮದು ತಮ್ಮ ತೆಕ್ಕೆಯಿಂದ ಜಾರದಿರುವಂತೆ ಪಾಡುಪಡುತ್ತವೆ. ವಿಘಟನೆಗೊಂಡ ದೊಡ್ಡ ಕುಟುಂಬ ಎರಡೆರಡು ಪಕ್ಷಗಳಾಗಿ ಸಂಘರ್ಷ ನಡೆಸಿ ಸೋಲು - ನೋವು, ಗೆಲುವು - ನಗೆಯನ್ನು ಪಡೆದು ಅನುಭವಿಸುತ್ತದೆ. ಕಡೆಗೆ ಯೋಗಕ್ಷೇಮವೇ ಪ್ರಧಾನವಾಗಿ ಬಯಸಿದವರಿಗೆ ಅದರ ಪ್ರಾಪ್ತಿಯಿದೆ.

ಕುವೆಂಪು ಕಾದಂಬರಿಗಳನ್ನು ತಲೆಮಾರು ಕಾದಂಬರಿಯೊಂದಿಗೆ ನೆನೆದಾಗ ಆ ದಟ್ಟ ಕಾಡಿನ ಬದುಕಿನಿಂದ ಹೊರಬರುತ್ತ ಆದರ ಒಳಸೆರಗಿನ ಜನರೊಂದಿಗೆ ಕುಳಿತು ಅವರ ಬದುಕಿನ ನೋವು ನಲಿವುಗಳನೊಡನಿದ್ದು ಬಂದಂತೆ ಅನ್ನಿಸುವುದು. ಇಲ್ಲವೆ ಆ ಕಾದಂಬರಿಗಳು ತೆರೆಯಲಿರುವ ಲೋಕಕ್ಕೆ ಈ ಕಾದಂಬರಿಯ ಪಾತ್ರ - ಸನ್ನಿವೇಶಗಳ ಗುಣ ಸ್ವಭಾವಗಳು ಪ್ರವೇಶ ಒದಗಿಸಿಕೊಡುತ್ತವೆ ಅನ್ನಿಸುವುದು.

ಕಾದಂಬರಿಯಲ್ಲಿ ಬಹುತೇಕ ಕ್ರಿಯೆಗಳಿಗೆ ಮುಂಚೆ ನೀರಿನ ಬಳಕೆ ಯಥೇಚ್ಛವಾಗಿ ಆಗುತ್ತ ನೀರಿನ ಸಂಸ್ಕೃತಿ ಬದುಕಿನದೂ ಒಂದು ಅಂಗವೂ ಪಾತ್ರವೂ ಆಗುವುದನ್ನು ಕಾಣಬಹುದು. ನೀರು ಧಾರ್ಮಿಕತೆಯ ಒಂದು ಗುಣವಾಗಿ ಮನುಷ್ಯ ಸಂಬಂಧದಲ್ಲಿ ಒಂದು ಕಟ್ಟು ಅಥವಾ ಪಾವಿತ್ರ್ಯೀಕರಣದ ಲಕ್ಷಣವಾಗುತ್ತದೆ, ಕ್ರಿಯೆಯಾಗುತ್ತದೆ. ದೈವದ ಹುಂಡಿಗೆ ಕಾಣಿಕೆ ಸಲ್ಲಿಸುವ ಮುಂಚೆ ನಾಣ್ಯವನ್ನು ತೊಳೆಯುವುದು ಪಾವಿತ್ರ್ಯೀಕರಣದ ಕ್ರಿಯೆಯೇ ಆಗಿದೆ.

ತಲೆಮಾರುವಿನ ಕಥೆಯ ಆರಂಭ ಹಸುರು ಮನೆಯಿಂದ ಆರಂಭವಾಗುತ್ತದೆ. ಇಲ್ಲಿಂದ ಅದು ನಡೆಯುವುದು ಇಳಿಮನೆಗೆ. ಇಳಿಮನೆಯಾದ ಮೇಲೆ ನೆರಲು ಮನೆಗೆ, ಹುರುಳಿ ಜಾತ್ರೆ, ಕೊಳಗಿನ ಮನೆಯನ್ನು ಒಳಗೊಂಡು ಮತ್ತೆ ಇಳಿಮನೆಯಲ್ಲಿಂದ ಹೊರಟು ಹಸುರು ಮನೆಗೇ ಬರುತ್ತದೆ. ಈ ನಕಾಸೆಯ ಒಳಗೆ ತಲೆಮಾರಿನ ಕಥೆಯನ್ನು ಬಿಳುಮನೆ ನಮಗೆ ಹೇಳುತ್ತಾರೆ; ಕೇಳುವಂತೆ ಮಾಡುತ್ತಾರೆ. ಇದು ಕಾಲದೆಸೆಯಲ್ಲಿ ಜನ ಬದುಕಿನ ಮೌಲ್ಯಾಪಮೌಲ್ಯಗಳ ಹರಿವು ಹರಹಿನ ಚಿತ್ರಕಥೆ. ಬಿಳುಮನೆಯವರು ಹೇಳುವುದು ಮಲೆನಾಡಿನ ಮಳೆಬೀಡಿನ ಕೃಷಿಬಯಲ ಮನೆಯ ಕಥೆ.

ಸ. ರಘುನಾಥ
ಶ್ರೀ ಲಕ್ಷ್ಮೀ ಪ್ರಾವಿಜನ್ ಸ್ಟೋರ್ಸ್ ರಸ್ತೆ, ರಾಮಕೃಷ್ಣ ಬಡಾವಣೆ,
ಶ್ರೀನಿವಾಸಪುರ - ೫೬೩೧೩೫, ಕೋಲಾರ ಜಿಲ್ಲೆ

ಒಳ್ಳೆಯ ಓದು



## ಭಾಷೆಯ ಬೆಳಕು

ಕೆ. ಎಲ್. ಗೋಪಾಲಕೃಷ್ಣಯ್ಯ

**ಪುಟ : ೧೬೦** **ಬೆಲೆ : ರೂ. ೭೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಭಾಷೆಯ ಬಗೆಗಿನ ಶಾಸ್ತ್ರೀಯ ವಿಚಾರಗಳನ್ನೊಳಗೊಂಡಂತೆ ತುಂಬ ಗಹನವಾದ ಭಾಷಾ ವಿಜ್ಞಾನದ ಉನ್ನತ ವ್ಯಾಸಂಗಕ್ಕೆ ಮೊದಲ ಮೆಟ್ಟಿಲಾಗಿ ಈ ಪುಸ್ತಕವನ್ನು ರಚಿಸಲಾಗಿದೆ. ಪ್ರಪಂಚದಾದ್ಯಂತ ಅಸಂಖ್ಯಾತ ಭಾಷೆಗಳು ಅಸ್ತಿತ್ವದಲ್ಲಿದ್ದರೂ ಒಂದೇ ಭಾಷೆ ಇಬ್ಬರಿಗೆ ಬರದಿದ್ದರೆ ಸಂಭಾಷಣೆ ಅಸಾಧ್ಯ. ಭಾಷೆಯ ಉಗಮ, ಬೆಳವಣಿಗೆ ಮತ್ತು ಕಾಲ ಸರಿದಂತೆ ವ್ಯತ್ಯಾಸವಾಗುವ ಉಚ್ಚಾರಣೆಯ ಸ್ವರೂಪಗಳನ್ನು ಪ್ರಸ್ತಾಪಿಸುತ್ತ ಹೋದಂತೆ ಕುತೂಹಲದ ಅಂಶಗಳು ಬೆಳಕಿಗೆ ಬರುತ್ತವೆ. ಪ್ರಪಂಚದಾದ್ಯಂತ ವೈವಿಧ್ಯತೆಯ ಮೂಲ ಒಂದೇ ಇರಬಹುದೇ ?

## ಕಡ್ಡಾಯದ ಪ್ರಾಥಮಿಕ ಶಿಕ್ಷಣ (ಲೇಖನಗಳು)

ಜಯಕುಮಾರ್ ಅನಗೋಳ್

**ಪುಟ : ೮೦** **ಬೆಲೆ : ರೂ. ೩೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಯಾವುದೇ ದೇಶಕ್ಕಾದರೂ ಅನಕ್ಷರತೆ ಒಂದು ಶಾಪ! ಸುಭಾಷಿತವೂ ಕೂಡ 'ವಿದ್ಯಾವಿಹೀನನು ಪಶುಸಮಾನ' ಎನ್ನುತ್ತದೆ. ಸಾಕ್ಷರತೆ ಸಾಧಿಸಿದ್ದೇವೆಂದು ಸರಕಾರಗಳೆಷ್ಟೇ ಹೇಳಿದರೂ ಇನ್ನೂ ಹೆಬ್ಬೆಟ್ಟು ಒತ್ತಿ ದಿನಗೂಲಿ ಪಡೆಯುವವರಿದ್ದಾರೆ. ಕಡ್ಡಾಯದ ಪ್ರಾಥಮಿಕ ಶಿಕ್ಷಣವು ಯಾವುದೇ ಒಂದು ದೇಶಕ್ಕಾಗಿ ಇರುವಂಥದಲ್ಲ, ಶಿಕ್ಷಣದ ಸಾರ್ವತ್ರೀಕರಣ ವಿಶ್ವದೆಲ್ಲೆಡೆ ಆಗಬೇಕಾಗಿದೆ. ಸರಕಾರಗಳು ಮತ್ತು ಪಾಲಕರು ಸಮಾನ ಆಸಕ್ತಿಯಿಂದ ನಿರ್ವಹಿಸಬೇಕಾದ ಆಂದೋಲನವಿದು. ಪ್ರಾಥಮಿಕ ಶಿಕ್ಷಣದ ಕಡ್ಡಾಯ ಹೇಗೆ ಮತ್ತು ಏಕೆಂದು ಚರ್ಚಿಸಲಾಗಿದೆ.

## ಸ್ತ್ರೀ ಆರೋಗ್ಯ ರಕ್ಷಣೆಯ ಸೂತ್ರಗಳು (ಲೇಖನಗಳು)



ಸಂ. ಡಾ|| ವಸುಂಧರಾ ಭೂಪತಿ

**ಪುಟ : ೧೨೮** **ಬೆಲೆ : ರೂ. ೪೦**

**ರಚನಾ ಆರೋಗ್ಯ ವಿಭಾಗ,** ನಂ. ೧೪೯, ೩ನೇ ಮೈನ್, ಎಚ್.ವಿ.ಆರ್. ಬಡಾವಣೆ, ಮಾಗಡಿ ರಸ್ತೆ, ಬೆಂ-೭೯

ಸ್ತ್ರೀಯರ ಆರೋಗ್ಯದ ಬಗ್ಗೆ ಸವಿಸ್ತಾರವಾಗಿ ಲೇಖನಗಳ ಮೂಲಕ ತಿಳುವಳಿಕೆ ನೀಡುವ ಅಪರೂಪದ ಪುಸ್ತಕ. ಹೆಚ್ಚಿನ ಮಹಿಳೆಯರು ತಮ್ಮ ದೈನಂದಿನ ಬದುಕಿನಲ್ಲಿ ಚಿಕ್ಕಪುಟ್ಟ ಆರೋಗ್ಯ ಸಮಸ್ಯೆಗಳ ಬಗ್ಗೆ ಉದಾಸೀನತೆಯಿಂದಿದ್ದು ಕಾಯಿಲೆ ತೀವ್ರವಾದಾಗ ಗಾಬರಿಗೊಳ್ಳುತ್ತಾರೆ. ಮುಂಜಾಗ್ರತೆ ವಹಿಸಿದಲ್ಲಿ ಅನೇಕ ಕಾಯಿಲೆಗಳನ್ನು ದೂರವಿಡಬಹುದೆಂದು ವೈದ್ಯೆಯರು ಅತ್ಯಂತ ಕಾಳಜಿಯಿಂದ ಇಲ್ಲಿ ತಿಳಿಸಿದ್ದಾರೆ. ಉಪಯುಕ್ತ ಆಯುರ್ವೇದೀಯ ಔಷಧಗಳ ಬಗ್ಗೆ ತಿಳಿಯಪಡಿಸಿದ್ದು ಮಹಿಳೆಯರು ಇದರ ಪ್ರಯೋಜನ ಪಡೆಯಬಹುದು.



## ಪ್ರಾಚೀನ ಬೌದ್ಧ ವಿದ್ಯಾಕೇಂದ್ರ : ಸನ್ನತಿ (ಅಧ್ಯಯನ)

ಜಯದೇವಿ ಎಂ. ಗಾಯಕವಾಡ

**ಪುಟ : ೧೩೧** **ಬೆಲೆ : ರೂ. ೧೨೦**

**ಅಮರ ಪ್ರಕಾಶನ,** ೩ನೇ ಹಂತ, ಎಲ್.ಐ.ಜಿ. ನಂ. ೧೭೫ ಬಡೇಪುರ ಕಾಲೋನಿ, ಗುಲಬರ್ಗಾ - ೫೮೫ ೧೦೫

ಸನ್ನತಿ ಎಂಬುದು ಗುಲ್ಬರ್ಗಾ ಜಿಲ್ಲೆಯ ಚಿಕ್ಕ ಊರು. ಅಲ್ಲಿ ಬೌದ್ಧ ಧರ್ಮದ ಅನೇಕ ಕುರುಹುಗಳಿರುವುದು ಅಧ್ಯಯನಗಳಿಂದ ಗೊತ್ತಾಗಿದೆ. ಬೌದ್ಧರ ಯಾತ್ರಾಸ್ಥಳ ಮಾತ್ರವಲ್ಲದೆ ಅದೊಂದು ಪ್ರಾಚೀನ ಬೌದ್ಧ ವಿದ್ಯಾಕೇಂದ್ರವೂ ಆಗಿತ್ತೆಂದು ಇನ್ನಷ್ಟು ಕ್ಷೇತ್ರ ಕಾರ್ಯಗಳಿಂದ ಲೇಖಕಿ ಮಾಹಿತಿ ಸಂಗ್ರಹಿಸಿದ್ದಾರೆ. ಅಶೋಕನು ಬೌದ್ಧ ಧರ್ಮದ ಪ್ರಸಾರ ಕಾರ್ಯದಲ್ಲಿ ನಿರತನಾಗಿದ್ದ ಬಗ್ಗೆ ಅಲ್ಲಿಯ ಅನೇಕ ಶಾಸನಗಳಿಂದ ವ್ಯಕ್ತವಾಗಿದೆ. ಬೌದ್ಧರ ಶಿಕ್ಷಣ ನೀತಿ ಹೇಗಿತ್ತೆಂದೂ ಸ್ವಲ್ಪಮಟ್ಟಿಗೆ ಇಲ್ಲಿ ತಿಳಿಸಲಾಗಿದೆ.



## ಸಾಂಖ್ಯ ದರ್ಶನ (ಅಧ್ಯಯನ)

ಎಸ್. ಎಸ್. ಹಿರೇಮಠ

**ಪುಟ : ೧೦೦** **ಬೆಲೆ : ರೂ. ೩೫**

**ಸಮತಾ ಪ್ರಕಾಶನ,** ಹರಪನಹಳ್ಳಿ - ೫೮೩ ೧೩೧

ಪ್ರಕೃತಿ ಹಾಗೂ ಮನುಷ್ಯನ ಸಂಬಂಧಗಳನ್ನು ವಿಶ್ಲೇಷಿಸುತ್ತ ಲೌಕಿಕ - ಪಾರಲೌಕಿಕ ವಿಚಾರಗಳತ್ತ ಅಧ್ಯಯನ - ತರ್ಕಗಳು ನಡೆಯುತ್ತಿದ್ದಂತೆ ಪ್ರಪಂಚದೆಲ್ಲೆಡೆ ಅನೇಕ ದರ್ಶನಗಳು ಜ್ಞಾನ ಶಾಖೆಗಳಾಗಿ ಮೂಡಿಬಂದವು. ಅವುಗಳಲ್ಲೊಂದು ಭಾರತದ ಕಪಿಲ ಮುನಿಗಳ ಕೊಡುಗೆಯಾದ ಸಾಂಖ್ಯದರ್ಶನ. ಮೂಲದಲ್ಲಿ ನಿರೀಶ್ವರವಾದ - ವೈದಿಕವಲ್ಲದ ಭೌತವಾದಿ ವಿಚಾರಗಳಿಂದ ತುಂಬಿದ್ದ ಸಾಂಖ್ಯದಿಂದ ಉಳಿದೆಲ್ಲ ದರ್ಶನಗಳು ಎಲ್ಲ ಪರಿಭಾಷೆ ಬಳಸಿ ಅದರ ಉತ್ತಮ ಗುಣಗಳನ್ನು ಹೀರಿಕೊಂಡವು. ತಾತ್ವಿಕ ಚಿಂತನೆಗೆ ಹೇರಳ ದ್ರವ್ಯವಾದ ಸಾಂಖ್ಯದ ಅದ್ಭುತ ವಿವರಣೆ ಇಲ್ಲಿದೆ.

## ಮುಂಬಯಿ ದಿನಾಂಕ..... (ಅನುಭವ ಕಥನ)



ವ್ಯಾಸರಾಯ ಬಲ್ಲಾಳ

**ಪುಟ : ೨೦೦** **ಬೆಲೆ : ರೂ. ೧೨೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಹೆಜ್ಜೆ, ಹೇಮಂತಗಾನ, ಬಂಡಾಯದಂಥ ಜೀವಂತ ಕೃತಿಗಳನ್ನು ಕನ್ನಡಿಗರಿಗೆ ನೀಡಿದ ವ್ಯಾಸರಾಯ ಬಲ್ಲಾಳರು ಐವತ್ತಕ್ಕೂ ಹೆಚ್ಚು ವರ್ಷ ಮುಂಬಯಿಯಲ್ಲಿ ನೆಲೆಸಿದ್ದರು. ತಮಗೆ ಉದ್ಯೋಗ ನೀಡಿ ಸೃಜನಶೀಲ ಲೇಖಕರಾಗಿ ರೂಪುಗೊಳ್ಳಲು ಸರ್ವವಿಧದಲ್ಲೂ ನೆರವಾದ ಮುಂಬಯಿಯನ್ನು ಅವರೆಂದಿಗೂ ಮರೆಯಲಾರರು. ಕಂಪೆನಿಯ ದಕ್ಷ ಆಡಳಿತಗಾರರಾಗಿ, ಲೇಖಕರಾಗಿ, ಪತ್ರಕರ್ತರಾಗಿ ಎಲ್ಲಕ್ಕಿಂತ ಹೆಚ್ಚಾಗಿ ಒಳ್ಳೆಯ ಸ್ನೇಹಜೀವಿಯೂ ಆಗಿದ್ದ ಬಲ್ಲಾಳರು ತಮ್ಮ ಮುಂಬಯಿ ವಾಸದ ಅನುಭವಗಳನ್ನಿಲ್ಲಿ ಹೇಳಿಕೊಂಡಿದ್ದಾರೆ.

## ವೇದಗಳಲ್ಲಿ ಜನಸಾಮಾನ್ಯರು (ಅಧ್ಯಯನ)



ಬಿ. ವಿ. ವೀರಭದ್ರಪ್ಪ

**ಪುಟ : ೧೨೦** **ಬೆಲೆ : ರೂ. ೬೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

'ವೇದ ಸುಳ್ಳಾದರೂ ಗಾದೆ ಸುಳ್ಳಾಗದು'. ಇದು ಬದುಕನ್ನು ಪ್ರಾಯೋಗಿಕವಾಗಿ ಎದುರಿಸಿದ ಜನಸಾಮಾನ್ಯರು ವೇದಕ್ಕಿಂತಲೂ ಹೆಚ್ಚು ತೂಕದ ಸತ್ಯ ಹೇಳಿದ್ದರಿಂದ ಹುಟ್ಟಿದ ಗಾದೆ ಇರಬಹುದು. ವೇದಗಳಲ್ಲಿ ಉಲ್ಲೇಖವಾಗಿರುವಂತೆ ಜನಸಾಮಾನ್ಯನ ಚಿತ್ರಣವನ್ನು ಈ ಕೃತಿ ನೀಡುತ್ತದೆ. ನಮ್ಮ ಕಾಲದ ವೈಚಾರಿಕ ಮನಸ್ಸಿನ ಲೇಖಕರು ವೈದಿಕ ಸಾಹಿತ್ಯವನ್ನು ತುಂಬ ಎಚ್ಚರದಿಂದ ವೈಜ್ಞಾನಿಕ ದೃಷ್ಟಿಕೋನವನ್ನು ಮಗ್ಗುಲಲ್ಲೇ ಇರಿಸಿಕೊಂಡು ಅಧ್ಯಯನ ಮಾಡಿದ್ದಾರೆ. ಚಾತುರ್ವರ್ಣ್ಯ ಸಮಾಜದ ಪ್ರಾರಂಭದ ಕಾಲದ ಜನಸಾಮಾನ್ಯರ ಬದುಕಿನ ಒಂದು ಪಕ್ಷಿನೋಟ ಇಲ್ಲಿದೆ.



## ಹೈದರಾಬಾದು ಕರ್ನಾಟಕ ಹಾಡು ಪಾಡು

(ಅಧ್ಯಯನ) ಅಮರೇಶ ನುಗಡೋಣಿ

**ಪುಟ : ೧೫೬** **ಬೆಲೆ : ರೂ. ೬೦**

**ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ - ೫೮೩ ೨೭೬

ಅಭಿವೃದ್ಧಿ ಎನ್ನುವುದು ಗಗನ ಕುಸುಮದಂತಿದ್ದು ಸಾಹಿತ್ಯ-ಸಾಂಸ್ಕೃತಿಕ - ಶೈಕ್ಷಣಿಕ ಕ್ಷೇತ್ರಗಳಲ್ಲಿ ಹಿನ್ನಡೆಯುತ್ತಿದ್ದು 'ಹೈದ್ರಾಬಾದು ಕರ್ನಾಟಕ' ಪ್ರದೇಶ ಉತ್ತರ ಕರ್ನಾಟಕದಲ್ಲಿದೆ. ಈ ನಾಡಿಗೆ ಇಂತಹ ದುಃಸ್ಥಿತಿ ಒದಗಲು ಕಾರಣವೇನೆಂದು ಇಲ್ಲಿ ತಿಳಿಯಲು ಪ್ರಯತ್ನಿಸಲಾಗಿದೆ. ಯೋಗ್ಯ ಮಾರ್ಗದರ್ಶನ, ಸರಿಯಾದ ಪ್ರೋತ್ಸಾಹ, ಸಂಪನ್ಮೂಲಗಳ ಸದುಪಯೋಗ ಇವೆಲ್ಲ ಇದ್ದಲ್ಲಿ ಯಾವುದೇ ಪ್ರಾಂತ್ಯ ಹಿಂದುಳಿಯಲು ಸಾಧ್ಯವೇ ಇಲ್ಲ; ಕೊರತೆಯಿರುವುದು ಇಚ್ಛಾಶಕ್ತಿಯದೇ ಎಂಬುದು ಇಲ್ಲಿ ಲೇಖಕರ ವಾದ.

– ಇಂದಿರಾ ಕುಮಾರಿ

ತಿಳಿವು

# ಸಂಸ್ಕೃತಿ, ಸಮಾಜ, ವರ್ಗ ಹೋರಾಟ

ಎಸ್. ಎಸ್. ಹಿರೇಮಠ

**ಸಂ**ಸ್ಕೃತಿ ಎಂದರೆ ಜೀವನ ವಿಧಾನ ಎಂಬುದು ಪ್ರಖ್ಯಾತ ವ್ಯಾಖ್ಯೆ. ಇದರಲ್ಲಿ ಆಚಾರ ಮತ್ತು ವಿಚಾರಗಳ ಬಹು ವಿಶಾಲವಾದ ವ್ಯಾಪ್ತಿ ಇದೆ. ಭೌತಿಕ ಮತ್ತು ಬೌದ್ಧಿಕ ಮೌಲ್ಯ ಸೃಷ್ಟಿಯ ಅಂತರಾರ್ಥವಿದೆ. ಒಂದೊಂದು ಅನನ್ಯ ಜೀವನ ವಿಧಾನಗಳಿರುವ ಗುಂಪುಗಳನ್ನು ಒಂದೊಂದು ಸಂಸ್ಕೃತಿಯೆಂದೇ ಭಾವಿಸಲಾಗುತ್ತದೆ. ಭಾರತದಲ್ಲಿ ಜಾತಿ ಮತ್ತು ಬುಡಕಟ್ಟುಗಳು ಸಾಮಾಜಿಕ ಘಟಕಗಳಾಗಿರುವುದರಿಂದ ಸಂಸ್ಕೃತಿಯನ್ನು ಅವುಗಳ ಹೆಸರಿನಿಂದಲೇ ಕರೆಯುವ ರೂಢಿ (ನಮಗೆ ಬೇಕಿರಲಿ ಬೇಡದಿರಲಿ) ಬಂದುಬಿಟ್ಟಿದೆ. ಸಂಸ್ಕೃತಿಯಲ್ಲಿ ನಿರ್ಣಾಯಕವಾದ ಪಾತ್ರವನ್ನು ವಹಿಸುವ ವೃತ್ತಿಗೂ ಜಾತಿಗೂ ಸಂಬಂಧವಿದ್ದುದರಿಂದ ಊಳಿಗಮಾನ್ಯ ಕಾಲದ ಸಾಮಾಜಿಕ ಅಧ್ಯಯನದ ಸಂದರ್ಭದಲ್ಲಿ 'ಜಾತಿ ಸಂಸ್ಕೃತಿ' ಹೆಸರನ್ನು ಬಳಸುವುದು ಅನಿವಾರ್ಯವೇ. ಆದರೆ ಆಗಲೂ ಜಾತ್ಯತೀತವಾದ ವೃತ್ತಿಗಳು ಹಲವಾದರೂ ಇದ್ದವು. ಉದಾಹರಣೆಗೆ, ಕೃಷಿ, ವ್ಯಾಪಾರ, ಪಶುಪಾಲನೆ. ಇವನ್ನು ಊಳಿಗಮಾನ್ಯ ಕಾಲದ ಸಾಮಾಜಿಕ ಪ್ರಗತಿಪರತೆಯ ಸಂಕೇತವೆಂದೇ ಭಾವಿಸಬೇಕಾಗುತ್ತದೆ. ಏಕೆಂದರೆ ಸಂಸ್ಕೃತಿಯ ಇತಿಮಿತಿಯ ಪರಿಕಲ್ಪನೆಯನ್ನು ಇದು ಸಾಕಷ್ಟು ಹಿಗ್ಗಿಸುತ್ತದೆ. ಇಷ್ಟಾಗಿಯೂ ಇವುಗಳಲ್ಲಿ ಜಾತಿಗಳು ಮತ್ತು ಅವುಗಳ ಪ್ರತ್ಯೇಕತಾ ಮನೋಭಾವ ಒಂದಿಲ್ಲೊಂದು ವಿಧದಲ್ಲಿ ಜೀವಂತವಿತ್ತು. ವ್ಯಾಪಾರ, ಕೃಷಿ ವೃತ್ತಿಗಳಲ್ಲಿ ತೊಡಗಿದ್ದ ಅನೇಕ ಜಾತಿಗಳು ತಮ್ಮ ಪ್ರತ್ಯೇಕ ಅಸ್ತಿತ್ವವನ್ನು ಉಳಿಸಿಕೊಂಡಿದ್ದವು. ಅಂದರೆ ಒಂದು 'ವೃತ್ತಿ' ಹಲವು ಜಾತಿಗಳನ್ನು ಒಟ್ಟುಮಾಡಲಿಲ್ಲವೆಂದೇ ಅರ್ಥ. ಇನ್ನೊಂದೆಡೆ ಒಂದು ಜಾತಿಯ ಒಳಗೇ ಅನೇಕ ವೃತ್ತಿಗಳನ್ನು ಮಾಡುವ ಜನಗಳಿದ್ದುದು. ಈ ಪರಿಸ್ಥಿತಿ ಒಟ್ಟಾರೆ, ಜಾತಿಗೂ, ವೃತ್ತಿಗೂ ಇರುವ ಸಂಬಂಧದ ಕುರಿತ ಸಾಂಪ್ರದಾಯಿಕ ಗ್ರಹಿಕೆಯನ್ನು ಪ್ರಶ್ನಿಸುತ್ತದೆ.

ಆದರೆ ಕೃಷಿ ಸಂಸ್ಕೃತಿಗೆ ಸಂಬಂಧಪಟ್ಟ ಕೆಲವು ಆಚರಣೆ, ಸಂಪ್ರದಾಯ, ಹಬ್ಬ, ಉತ್ಸವ, ಜಾತ್ರೆಗಳನ್ನು ಊರೊಟ್ಟಿನ ಜನಗಳೆಲ್ಲ ಸೇರಿ ಆಚರಿಸುತ್ತಿದ್ದುದು ವಾಸ್ತವವೇ. ಬುಡಕಟ್ಟಿನಲ್ಲಿದ್ದ ಒಟ್ಟುಗೂಡುವಿಕೆಯೆಂಬ ಆರೋಗ್ಯಕರ ಲಕ್ಷಣ ಇದಾಗಿದ್ದರೂ ಸಾಮೂಹಿಕವಾಗಿದ್ದ ಇಂಥ ಸಂದರ್ಭಗಳಲ್ಲೂ ಜಾತಿಗಳ ಏಣಿ ಶ್ರೇಣಿ ಜೀವಂತವಿರುತ್ತಿತ್ತು. ಅಂದರೆ ಜಾತಿಗಳ ಮೇಲು ಕೀಳಿಗನುಸಾರವಾಗಿ ಊರೊಟ್ಟಿನ ಉತ್ಸವಗಳಲ್ಲಿ ಜನ ಪಾಲ್ಗೊಳ್ಳಬೇಕಿತ್ತು. ಉತ್ತಮ ಕೆಲಸಗಳು ಉತ್ತಮ ಜಾತಿಗಳ ಜನಗಳ ಪಾಲಿಗಿರುತ್ತಿದ್ದವು. ಆದರೆ ಈ ನಿಜಸ್ಥಿತಿಯನ್ನು ಒಡೆದುಹಾಕುವ ಕೆಲವು ಪದ್ಧತಿಗಳು ಸಮಾಜ ಶಾಸ್ತ್ರಜ್ಞರನ್ನು ಬೆಚ್ಚಿಬೀಳಿಸುತ್ತವೆ. ಉದಾಹರಣೆಗೆ, ಸಾಮಾಜಿಕವಾಗಿ ತೀರ ತಳಮಟ್ಟದಲ್ಲಿರುವ ಅಸ್ಪೃಶ್ಯರು ಕೆಲವು ಹಬ್ಬಗಳಲ್ಲಿ ಅತ್ಯಂತ ಉನ್ನತವಾದ ಸ್ಥಾನದಲ್ಲಿ ತಾತ್ಕಾಲಿಕವಾಗಿಯಾದರೂ ಕ್ರಿಯಾಶೀಲರಾಗಿರುತ್ತಿದ್ದುದು (ಈಗಲೂ ಕೆಲವು ಕಡೆ ಇಂಥ ಆಚರಣೆಗಳು ಜೀವಂತವಾಗಿವೆ). ಊರಮ್ಮನ ಹಬ್ಬಗಳಲ್ಲಿ ದಲಿತರ ಪಾತ್ರ ತುಂಬ ಪ್ರಮುಖ ವಾಗಿತ್ತು, ಹಬ್ಬದ ಬಹು ಮುಖ್ಯವಾದ ಆಚರಣೆಗಳಿಗೆ ಗಾಢ ವಾಗಿ ಸಂಬಂಧಿಸಿತ್ತು. ಇಂಥ ಹಲವಾರು ನಿದರ್ಶನಗಳು ದಲಿತ ಸಂಸ್ಕೃತಿಯ ಬಗ್ಗೆ ಪುನರ್ ಮೌಲ್ಯ ಮಾಪನ, ಪುನರ್ ವ್ಯಾಖ್ಯಾನಗಳಿಗೆ ತೀವ್ರವಾಗಿ ಒತ್ತಾಯಿಸುತ್ತವೆ ಮತ್ತು ಸ್ಥಾಪಿತ ಗೊಂಡ ಕೆಲವು ಸಾಮಾಜಿಕ ಸಿದ್ಧಾಂತಗಳನ್ನು ಬುಡಮೇಲು ಮಾಡುತ್ತವೆ.

ದೇವಿಪ್ರಸಾದ ಚಟ್ಟೋಪಾಧ್ಯಾಯ ಅವರ (ಮುಖ್ಯವಾಗಿ ಅವರ ಪ್ರಧಾನ ಕೃತಿ 'ಲೋಕಾಯತ') ಚಿಂತನೆ-ಶೋಧನೆಗಳ ಆಧಾರದಲ್ಲಿ ಊಹಿಸಬಹುದಾದರೆ ದಲಿತರೇ ನಮ್ಮ ನಾಡಿನ ಮೂಲ ಬೇಸಾಯಗಾರರು, ಅದರಲ್ಲೂ ದಲಿತ ಮಹಿಳೆಯರು. ತಂತ್ರ, ಯೋಗ, ಸಾಂಖ್ಯ, ಲೋಕಾಯತ, ಚಾರ್ವಾಕ, ಮೊದಲಾದ ತಾತ್ತ್ವಿಕ ಪಂಥಗಳ ಮೂಲವು ಈ ಸಂಸ್ಕೃತಿಯೇ. ನಮ್ಮ ನಾಡಿನಲ್ಲಿ ಆಗಲೇ ಅಧ್ಯಯನ ಮಾಡಲಾಗಿರುವಂತೆ ಗಂಡು ದೇವರುಗಳ ಸಂಖ್ಯೆಯಷ್ಟೇ ಹೆಣ್ಣು ದೈವಗಳೂ ಅಸ್ತಿತ್ವದಲ್ಲಿವೆ. (ಸುಮಾರು ೧೦೦೦ ಗಂಡು, ೧೦೦೦ ಹೆಣ್ಣು ದೇವರುಗಳಿವೆ.) ಇಷ್ಟು ವ್ಯಾಪಕವಾಗಿ ಮತ್ತು ಸಮೃದ್ಧವಾಗಿ ಜೀವಂತವಿರುವ ಸ್ತ್ರೀ ದೈವಶ್ರದ್ಧೆಯ ಮೂಲದಲ್ಲಿ ಆದಿಮ ಬೇಸಾಯಗಾರರ ಸಂಸ್ಕೃತಿಯ ಪ್ರಾಯೋಗಿಕತೆಯಿದೆ. ಸಮಾಜ ಎಷ್ಟೇ ಪರಿವರ್ತನೆಗೊಂಡರೂ ಇಂಥ ಪ್ರಾದಿಮ ಆಶಯಗಳು ಪರಿಷ್ಕಾರಗೊಂಡಾದರೂ ಉಳಿದುಕೊಂಡು ಬಂದಿರುವ ಒಂದು ಅನನ್ಯ ಲಕ್ಷಣದ ಕುರಿತು ಡಿ. ಡಿ. ಕೋಸಾಂಬಿಯವರೂ ಆಲೋಚಿಸುತ್ತಾರೆ.

ಮಾತೃ ಪ್ರಧಾನ ಸಮಾಜದ ಪಳೆಯುಳಿಕೆಯಾಗಿರುವ ಈ ಮಾತೃ ದೈವಗಳ ಶಾಸ್ತ್ರೀಯ ಶೋಧನೆಯೇ ತುಂಬ ಕುತೂಹಲಕಾರಿ. ಈ ಬಗೆಯ ವ್ಯಾಸಂಗ ನಮ್ಮ ಆದಿಮ ಸಮಾಜದ ಸಂಸ್ಕೃತಿ ಪರಂಪರೆಯ ಅದ್ಭುತಗಳನ್ನು ಹೊರಹಾಕುತ್ತದೆ. ಬುಡಕಟ್ಟು ಸಮಾಜದಲ್ಲಿದ್ದ ಮಾನವ ಪೀಳಿಗೆಯ ಕಾಲಘಟ್ಟದಿಂದ ವರ್ಗ - ಜಾತಿ ಸಮಾಜಕ್ಕೆ ಬೆಳೆದುಬಂದ ಅವಧಿಯ ಎಲ್ಲ ವಿಶೇಷತೆಗಳನ್ನು ಸಂಕೇತಿಸುವ ಮತ್ತು ಪ್ರತಿನಿಧಿಸುವ ನಂಬಿಕೆ ಮತ್ತು ಆಚರಣೆಗಳು ಇಂದಿಗೂ ಪಳೆಯುಳಿಕೆಗಳಾಗಿ ಉಳಿದುಬಂದಿವೆ. ಮ್ಯಾಸ ನಾಯಕ್, ಕಾಡುಗೊಲ್ಲ, ಸೋಲಿಗ, ಇರುಳಿಗ, ಕಾಡು ಕುರುಬ ಮೊದಲಾದ ಕನ್ನಡ ಬುಡಕಟ್ಟು ಸಮಾಜಗಳ ಅಧ್ಯಯನಗಳು ಒಟ್ಟು ಕನ್ನಡ ಸಂಸ್ಕೃತಿಯ ಉಗಮ ಮತ್ತು ವಿಕಾಸದ ಸ್ವರೂಪವನ್ನು ಸ್ಥೂಲವಾಗಿ ಯಾದರೂ ಕಟ್ಟಿಕೊಳ್ಳಲು ಸಹಾಯಿಸುವಂತಿವೆ.

ಇವಲ್ಲದೆ, ಇತರ ಜಾತಿ ಸಮಾಜಗಳಲ್ಲೂ ಕೂಡ ಗಮನ ಸೆಳೆಯುವ ಒಂದು ಮುಖ್ಯಾಂಶವೆಂದರೆ – ದೈವ ಎಂಬುದು ಶಿಷ್ಟರಲ್ಲಿ ವರ್ಣಿಸಲ್ಪಡುವಂತೆ ನಿರಾಕಾರ, ದೂರಗತ, ಪರಬ್ರಹ್ಮ, ನಿರ್ವಿಕಲ್ಪ, ನಿರ್ಲಿಪ್ತ, ಅನಿರ್ವಚನೀಯ, ಇಂದ್ರಿಯಾತೀತ, ಲೋಕಾತೀತ, ಪರಲೋಕಪರ ಮುಂತಾಗಿ ಇಲ್ಲದಿರುವುದು. ಅಂದರೆ ನಮ್ಮ ಜನಸಾಮಾನ್ಯರ ದೈವಗಳು ಕೌಟುಂಬಿಕ ಬಾಂಧವ್ಯ, ಭಾವಕ, ಸಮೀಪಗತ, ಸ್ಥಳೀಯ, ಉಪಕಾರಿ-ಉಪದ್ರವಿ, ಮುಂತಾದ ಲೌಕಿಕವೆಂಬಂಥ ಗುಣವಿಶೇಷದವು. (ಪ್ರಾಚೀನ ಆರ್ಯ ವೈದಿಕರ ದೈವಗಳೂ ಇಂಥವೇ). ಇವು ಬಹುತೇಕ ಆಯಾ ಕುಲ-ಕುಟುಂಬದಲ್ಲಿ ಹಿಂದೆ ಆಗಿಹೋದ ವ್ಯಕ್ತಿಗಳ ರೂಪಗಳೆ. ಆಯಾ ಕುಲ ಸಮಾಜದ ಏಳ್ಗೆಗೆ ಪರಿಶ್ರಮಿಸಿದ ಈ ವ್ಯಕ್ತಿಗಳನ್ನು 'ಸಾಂಸ್ಕೃತಿಕ ವೀರರು' ಎಂದು ಗುರುತಿಸಲಾಗುತ್ತಿದ್ದರೂ ಅವುಗಳಲ್ಲಿ ಕೆಲವು ಅರೆದೈವಗಳಾಗಿ, ಕೆಲವು ಪೂರ್ಣ ದೈವಗಳಾಗಿ ಮಾರ್ಪಟ್ಟಿವೆ.

ಈ ಚರ್ಚೆಯ ಸಂದರ್ಭದಲ್ಲಿ ನಾವು ಗಮನಿಸಬೇಕಾದ ಪ್ರಮುಖ ಸಂಗತಿ ಏನೆಂದರೆ 'ಧರ್ಮ-ಮತ'ಗಳಿಗೂ ಸಂಸ್ಕೃತಿಗೂ ಇರುವ ಸಂಬಂಧ ತೀರ ಗಾಢವಾದುದಲ್ಲ ಎಂಬುದು. ಏಕೆಂದರೆ, ಸಂಸ್ಕೃತಿಯಲ್ಲಿ ಪ್ರಧಾನವಾದ ಕ್ರಿಯೆ ಧರ್ಮ-ಮತಗಳಿಗೆ ಸಂಬಂಧಿಸಿದ್ದಲ್ಲ. ನಮ್ಮ ದೈನಂದಿನ ಚಟುವಟಿಕೆಯನ್ನು ಅವಲೋಕಿಸಿದರೂ ಕೂಡ ಇದು ಖಚಿತವಾಗುತ್ತದೆ.

ಯಾವ ಕಾಲದ,ಯಾವ ಜನಸಮುದಾಯವೇ ಇರಲಿ ಅದರ ಮೂಲಭೂತ ಚಟುವಟಿಕೆ ಹೊಟ್ಟೆ, ಬಟ್ಟೆ, ವಸತಿ, ಆರೋಗ್ಯದ ಕುರಿತಾಗಿರುತ್ತದೆ. ಮೊಟ್ಟ ಮೊದಲು ನಾವು ಬದುಕುಳಿಯಬೇಕಲ್ಲವೇ? ಹಾಗಾಗಿ ಆಹಾರಕ್ಕಾಗಿ ಮಾಡುವ ಮಾನವ ಪ್ರಯತ್ನವೇ ಪ್ರಪ್ರಧಾನ, ಪ್ರಾಥಮಿಕ. ಈ ಉತ್ಪಾದನೆಯ ಚಟುವಟಿಕೆ ಮತ್ತು ಉತ್ಪಾದನೆ ಮಾಡುವಾಗ ಉಂಟಾಗುವ ಉತ್ಪಾದನಾ ಸಂಬಂಧಗಳೇ ಸಮಾಜದ



ತಳಹದಿಯಾದ ಆರ್ಥಿಕ ರಚನೆ. ಮಾನವನ ಯಾವೆಲ್ಲ ಬೇರೆ ಚಟುವಟಿಕೆಗಳೂ ತಳಹದಿಪ್ರಾಯವಾದ ಈ ಆರ್ಥಿಕ ರಚನೆಯನ್ನು ಆಧರಿಸುತ್ತವೆ. ಸಂಸ್ಕೃತಿಯನ್ನು ಅಧಿರಚನೆ ಎನ್ನುವುದು ಈ ಕಾರಣದಿಂದ. ಇದರಲ್ಲಿ ಮತ - ಧರ್ಮಗಳ ಪಾತ್ರ ಒಂದು ಭಾಗ ಮಾತ್ರ. ಇಂದು ಪ್ರಧಾನ ನೆಲೆಯಲ್ಲಿ ಕಾರ್ಮಿಕ - ಮಾಲಿಕ ಎಂಬ ಸಂಬಂಧವಿರುವಂತೆ, ಊಳಿಗಮಾನ್ಯ ಕಾಲದಲ್ಲಿ ಭೂಮಾಲಿಕ - ಜೀತದಾಳು, ಗುಲಾಮ ಸಮಾಜದಲ್ಲಿ ಗುಲಾಮರು - ಒಡೆಯರು ಎಂಬ ಸಂಬಂಧಗಳಿದ್ದವು.

ಈ ಸಂಬಂಧಗಳ ಆಧಾರದಲ್ಲಿ ಶೋಷಿತರ ಮತ್ತು ಶೋಷಕರ ಸಂಸ್ಕೃತಿ ಪರಂಪರೆಗಳು ಕೂಡ ಭಿನ್ನವಾಗಿದ್ದವು. ಮತಧರ್ಮಗಳ ವಿಚಾರಗಳೂ ಆಚಾರಗಳೂ ಭಿನ್ನವಾಗುತ್ತವೆ. ಶ್ರಮಿಕರ ಕತೆ, ಹಾಡು, ನೃತ್ಯ, ಕಾವ್ಯ - ಕಲೆ ಮುಂತಾದ ಸಾಂಸ್ಕೃತಿಕಾಂಶಗಳು ಅವರ ದುಡಿಮೆಯ ಪ್ರಕ್ರಿಯೆಯಲ್ಲಿ ಹುಟ್ಟಿ ಬೆಳೆದಿರುವಂಥವು. ಆದರೆ ಶೋಷಕರ ಆಶ್ರಯದಲ್ಲಿ ಬೆಳೆಯುವ ಕಲಾವಿದರು ಶೋಷಕರ ಕಲೆ - ಸಾಹಿತ್ಯವನ್ನು ಆಧರಿಸಿ ತಮ್ಮ ಕೃತಿಗಳನ್ನು ರಚಿಸುತ್ತಾರೆ. ಉದಾ : ಪಂಪ ರನ್ನರ ಕೃತಿಗಳ ಅರ್ಜುನ - ಭೀಮರು ಆ ಕವಿಗಳ ಆಶ್ರಯದಾತರ ಪ್ರತಿನಿಧಿಗಳಂತಿದ್ದರೆ, ವಿರೋಧಿ ನೆಲೆಯಲ್ಲಿ ದುರ್ಯೋಧನ - ಕರ್ಣರಿದ್ದಾರೆ. ಅಂದರೆ ಶೋಷಕ ವರ್ಗದ ಈ ಪರ - ವಿರೋಧಿ ಪಾತ್ರಗಳ ನಡುವಿನ ವೈರುಧ್ಯವನ್ನು ಬಂಡಾಯ ಮೌಲ್ಯ ವಿವೇಚನೆಗೆ ಬಳಸಿಕೊಳ್ಳುವುದು ಸೂಕ್ತವಲ್ಲ. ಅಂದರೆ ಪಂಪ ರನ್ನರ ಕೃತಿಗಳಲ್ಲಿ ಶೋಷಿತ - ಶೋಷಕ ವರ್ಗಗಳ ಪಾತ್ರಗಳ ಸಂಘರ್ಷದ ಚಿತ್ರಣವಿಲ್ಲ-ಎಂಬುದನ್ನು ಬಂಡಾಯ ಚಿಂತಕರು ಗಮನಿಸಬೇಕಿದೆ.

ಇಂದಿನ ನಮ್ಮ ಸಮಾಜದಲ್ಲಿ ಉಳ್ಳವರು - ಇಲ್ಲದವರ ನಡುವಿನ ವ್ಯತ್ಯಾಸ ತೀರ ಹೆಚ್ಚುತ್ತಿದೆ. ಉತ್ಪಾದನೆಗೆ ಆತಂಕವನ್ನುಂಟುಮಾಡುವ ಅನೇಕ ಜನ ವಿರೋಧಿ ನೀತಿಗಳನ್ನು ಸರಕಾರಗಳು ಅನುಸರಿಸುತ್ತಿವೆ. ಜಾಗತಿಕ ಮಟ್ಟದಲ್ಲಿ ಉಂಟಾಗುತ್ತಿರುವ ಆರ್ಥಿಕ ಅನಾಹುತಗಳು ನಮ್ಮನ್ನು ಆವರಿಸಿವೆ. ಪ್ರಾಕೃತಿಕ ವೈಪರೀತ್ಯಗಳಿಗೆ ಪ್ರಭುತ್ವಗಳು ಅನುಸರಿಸುತ್ತಿರುವ ಬಂಡವಾಳಗಾರರ ಪರವಾದ ನಿಲುವುಗಳು ಕಾರಣವಾಗುತ್ತಿರುವುದನ್ನು ಜನ ತಿಳಿಯುತ್ತಿದ್ದಾರೆ.

ಸಮಾಜವಾದಿ ಅರ್ಥ ವ್ಯವಸ್ಥೆಯ ಸ್ಥಾಪನೆಯ ಅನಿವಾರ್ಯತೆಯನ್ನು ಜನ ನಿಧಾನವಾಗಿಯಾದರೂ ಅರಿಯುತ್ತಿದ್ದಾರೆ. ಸಮಾಜವಾದವೆಂದರೆ ಬಡವರು - ಶ್ರೀಮಂತರ ನಡುವಿನ ಅಂತರ ಕಡಿಮೆಗೊಳಿಸುವುದಲ್ಲ; ಎಲ್ಲರೂ ಅವರವರ ಯೋಗ್ಯತೆಗೆ ತಕ್ಕಂತೆ ದುಡಿಯುವ ಮೂಲಕ ಸಮಾನತೆ ಸಾಧಿಸುವುದು.

ಇದಕ್ಕೆ ಉತ್ಪಾದನಾ ಸಂಬಂಧವನ್ನು ಆಮೂಲಾಗ್ರವಾಗಿ ಪರಿವರ್ತನೆ ಮಾಡುವಂಥ ವರ್ಗ - ಹೋರಾಟದ ಜರೂರಿದೆ. ಧರ್ಮ ಕೋಮು ಜಾತಿಗಳ ಆಧಾರದ ಹೋರಾಟದಿಂದ ಶೋಷಿತ ಸಮುದಾಯಗಳೇ ನಾಶವಾಗುತ್ತವೆ; ಉಳ್ಳವರ ಅಟ್ಟಹಾಸ ಹೆಚ್ಚುತ್ತದೆ, ದೇಶದ ಪ್ರಗತಿ ಕುಂಠಿತವಾಗುತ್ತದೆ.

'ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು' ಎಂಬ ತತ್ತ್ವದ ಆಧಾರದಲ್ಲಿ ನಡೆಯಬೇಕಾಗಿರುವ 'ವರ್ಗ-ಹೋರಾಟ'ಕ್ಕೆ ಜನ ತಯಾರಾಗಬೇಕು. ಉತ್ತಮ ಸಂಸ್ಕೃತಿ - ಸಮಾಜಗಳು ನಿರ್ಮಾಣಗೊಳ್ಳುವುದು ಈ ಹೋರಾಟದ ಆಧಾರದಲ್ಲೇ. ದೇಶ ಸರ್ವಾಂಗೀಣ ಪ್ರಗತಿಯನ್ನು ಸಾಧಿಸುವುದೂ ಈ ಬಗೆಯ ವರ್ಗ ಹೋರಾಟದಿಂದ ಮಾತ್ರ. ಇದರಿಂದ ಪ್ರಜಾಪ್ರಭುತ್ವದ ರಕ್ಷಣೆಯಾಗುತ್ತದೆ, ಕೋಮು ದ್ವೇಷ, ಧರ್ಮ - ಜಾತಿ ವೈಷಮ್ಯಗಳು ನಾಶವಾಗುತ್ತವೆ.

ಮಾನವನನ್ನು ಮಾನವ ಪ್ರೀತಿಸುವ ಗುಣ ಅಭಿವೃದ್ಧಿಯಾಗುತ್ತದೆ. ಧರ್ಮ - ಜಾತಿ ಕೋಮಿನಂಥ ವಿಷಕಾರಿ ತತ್ತ್ವಗಳ ಪ್ರಭಾವಗಳಿಗೆ ಒಳಗಾಗುವವರು ತಮಗರಿವಿಲ್ಲದೆ ನಾಶವಾಗಿಹೋದ ಫ್ಯೂಡಲ್ ಮೌಲ್ಯಗಳಿಗೆ ಉರುಳು ಹಾಕಿಕೊಂಡಿರುತ್ತಾರೆ. ನಾವು ಕನಿಷ್ಠಪಕ್ಷ ಪ್ರಚಲಿತ ಸಮಾಜ ಪದ್ಧತಿಯ ಪ್ರಗತಿಪರ ಮೌಲ್ಯಗಳ ಬಗ್ಗೆ ಕಾಳಜಿಯುಳ್ಳವರಾಗಬೇಕು. ಸಮಕಾಲೀನ ಸಮಾಜದ ಸಮಸ್ಯೆಗಳಿಗೆ ಸಮಕಾಲೀನ ವೈಜ್ಞಾನಿಕ ಪರಿಹಾರ ಕ್ರಮಗಳನ್ನು ಅನ್ವಯಿಸಿಕೊಳ್ಳುವ ಮಟ್ಟಿನ ಆಧುನಿಕರಾಗಬೇಕು.

**ಎಸ್. ಎಸ್. ಹಿರೇಮಠ**
ಪ್ರಾಧ್ಯಾಪಕರು, ಎ. ಡಿ. ಬಿ. ಪ್ರಥಮ ದರ್ಜೆ ಕಾಲೇಜು, ಹರಪನಹಳ್ಳಿ - ೫೮೩ ೧೩೧



## ಗುಪ್ತ ಗಾಮಿನಿ

ಆಗಾಗ
ನಾನು ನಿನ್ನ ಕುರಿತು
ಯೋಚಿಸುವೆನೆಂಬ ವಿಷಯ
ಅವ್ಯಕ್ತ ಅಷ್ಟೇ ನಿಗೂಢ.

ನೀನೂ ನಿನಗರಿವಿಲ್ಲದಂತೆ
ನನ್ನ ಬಗ್ಗೆ ಚಿಂತಿಸುವೆಯೆಂದು
ಭಾವಿಸಲು ನನ್ನಾತ್ಮದ ವಿನಃ
ಬೇರೆ ಸಾಕ್ಷ್ಯಾಧಾರಗಳು ಬೇಡ.

ನನ್ನ-ನಿನ್ನ ನಡುವಿನ ಅಂತರದ ತುಡಿತ
ನಮ್ಮೀ ಹೃದಯಗಳಿಗೆ ತೀರ ಹತ್ತಿರ
ನೆನಪುಗಳೆಂಬ ಮಾಸದ ಗಾಯಗಳಿಂದ
ಸೋರುವುದು ಕೀವು-ರಕ್ತ.

ನನ್ನ ಯಾತನೆಯ ವಾಸನೆ
ಆತ್ಮೀಯರಿಗಾರಿಗೂ ಇಲ್ಲ
ನೋವೇ ನಗುವಾಗಿ ನೃತಿಸಿ
ನಿಂತ ನೆಲವೇ ಘಾಸಿಗೊಳಿಸಿದರೆ
ತಪ್ಪು ನನ್ನದಲ್ಲ
ಈ ಹಿಂಸೆ ನೀನೂ ಅನುಭವಿಸುತ್ತಿರುವುದಕ್ಕೆ
ಪುರಾವೆಗಳು ಬೇಕಿಲ್ಲ.

ಲೋಕದ ಯಾವುದೇ ವಸ್ತು
ಮನುಷ್ಯನ ಯಾವುದೇ ಕ್ರಿಯೆ
ಭಾಷೆ-ಜಾತಿ, ಧರ್ಮ-ಶಾಸ್ತ್ರ
ರೀತಿ-ರಿವಾಜು, ತತ್ವ-ಸಿದ್ಧಾಂತಗಳು
ನಮಗೆ ಸಂಪರ್ಕ ಮಾಧ್ಯಮವಲ್ಲ.

ಇದೊಂದು ಬಗೆಯ
ವರ್ಣಿಸಲಸಾಧ್ಯ ಹೃದಯ ಸ್ಪಂದನ

**ಆಶ್ಫಾಕ ಪೀರಜಾದೆ**
೧೮೮/೩, ಶಬ್ಬಾಶಖಾನ್ ಬಿಲ್ಡಿಂಗ್, ಬಸವನಗರ, ಗೋಕಾಕ - ೫೯೧ ೩೦೭

**HOSATHU** Kannada Monthly / September 2003 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14

# ಹೊಸತು

ಸಾಮಾಜಿಕ, ಸೈದ್ಧಾಂತಿಕ, ಸಾಂಸ್ಕೃತಿಕ ಕ್ಷೇತ್ರಕ್ಕೆ




ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ

# ಹೊಸತು

ಸಂ : 1001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ



ಹೊಸತು
ನವಕರ್ನಾಟಕ ಪ್ರಕಾಶನ

ಒಂದು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

(ಹೊಸತು ಪರವಾಗಿ)

ದಿನಾಂಕ 12-12-2002

ಇವರಿಂದ ........................................
ಪ್ರೀತಿಯ ಅಣ್ಣ ಆಕಾಶನ
ನೆನಪಿನ ಕಾಣಿಕೆ

ಇವರಿಗೆ ........................................
ಒಲವಿನ ತಂಗಿ ಭೂಮಿಕಾಳ
ಹುಟ್ಟುಹಬ್ಬದ ಸಂದರ್ಭ



ಆಕಾಶ
(ಉಡುಗೊರೆ ನೀಡುವವರ ಸಹಿ)




ಜೀವನದ ಎಲ್ಲ ಕ್ಷೇತ್ರಗಳ ಆಗು-ಹೋಗುಗಳನ್ನು ಗಂಭೀರ ವಿಶ್ಲೇಷಣೆಗೆ ಒಳಪಡಿಸುವ ತಿಂಗಳ ಪತ್ರಿಕೆ

## ಉಡುಗೊರೆಯಾಗಿ 'ಹೊಸತು ಚಂದಾ'

ಹಬ್ಬ - ಹರಿದಿನ, ಮದುವೆ, ಸಮಾರಂಭಗಳಲ್ಲಿ
ಚಂದಾ ಕೂಪನ್ ಉಡುಗೊರೆ ನೀಡಿ

ವಾರ್ಷಿಕ ಚಂದಾ ರೂ. 100 3 ವರ್ಷದ ಚಂದಾ ರೂ. 250

ಸಂ : 3001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ



ಹೊಸತು
ನವಕರ್ನಾಟಕ ಪ್ರಕಾಶನ

ಮೂರು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

(ಹೊ

ಇವರಿಂದ ........................................

ಇವರಿಗೆ ........................................

ಪುಟಗಳು : 64 ಡೆಮಿ ಚೌಕಾಕಾರ ಬಿಡಿ ಪ್ರತಿ : ರೂ. 10

ಮೂರು ವರ್ಷದ ಚಂದಾದೊಂದಿಗೆ ಮೂರು ಪುಸ್ತಕಗಳು ಉಚಿತ ಹಾಗೂ ನವಕರ್ನಾಟಕ ಪ್ರಕಟಣೆಗಳ ಮೇಲೆ ಶೇ. 20ರ ರಿಯಾಯಿತಿ. ನಿಮ್ಮ ಚಂದಾ ನವೀಕರಿಸಿ. ಉಡುಗೊರೆ ನೀಡುವ ಮೂಲಕ ಹೊಸ ಗೆಳೆಯರನ್ನು ಪರಿಚಯಿಸಿ

'ಹೊಸತು ಚಂದಾ' ಉಡುಗೊರೆ ಕೂಪನ್‌ಗಳು ಬೆಂಗಳೂರು, ಮಂಗಳೂರು, ಮೈಸೂರು ಹಾಗೂ ಗುಲ್ಬರ್ಗಾ ನಗರಗಳಲ್ಲಿರುವ ನವಕರ್ನಾಟಕ ಪುಸ್ತಕ ಮಳಿಗೆಗಳಲ್ಲೂ ಲಭ್ಯ

ವಿವರಗಳಿಗೆ : **ಹೊಸತು**

15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ಸಂಖ್ಯೆ 5159
ಬೆಂಗಳೂರು-560 001 ಫೋನ್ : 2203580/81/82 e-mail : nkp@bgl.vsnl.net.in.

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor: Dr. G. Ramakrish